

ಸ್ವಚ್ಛವಾಗಿ ಬಿಳಿಯಾಗಿ ಶಾಂತ ಸಲಿಲವಾಗಿ ಹೊಳೆ ಹೊಳೆಯುವ ಬಿಳಿನೊರೆಗಳ ಅಲಂಕಾರದಿಂದೊಪ್ಪುವ ಹಾಲಿನ ಸಮುದ್ರದಲ್ಲಿ, ತ್ರಿಕೂಟವೆಂಬ ಪರ್ವತ ಶಿಖರಗಳಿದ್ದುವು. ಒಂದು ಕಬ್ಬಿಣದ ಶಿಖರ; ಇನ್ನೊಂದು ಬೆಳ್ಳಿಯದು; ಮೂರನೆಯದು ಬಂಗಾರದ ಶಿಖರ. ಆ ಶಿಖರಗಳ ನಡುವಿನಲ್ಲಿ ವಿವಿಧ ಫಲವೃಕ್ಷಗಳಿಂದ ತುಂಬಿದ ಮಹಾರಣ್ಯಗಳಿದ್ದುವು. ಆ ಅರಣ್ಯ ವನಗಳಲ್ಲಿ ವಿಹರಿಸುವ ಗಜೇಂದ್ರನೆಂಬ ಮದ್ದಾನೆಗೆ ದಶ ಲಕ್ಷ ಕೋಟಿ ಹೆಣ್ಣಾನೆಗಳು ಪ್ರೀತಿಯ ಪತ್ನಿಯರು. ಒಂದು ಸಾರಿ ಆ ಮಹಾಗಜ ರಾಜನು ತನ್ನ ಹೆಣ್ಣಾನೆಗಳೊಂದಿಗೆ ವಿಹಾರ ಮಾಡುತ್ತ, ದಾಹ ಶಾಂತಿ ಮಾಡಿಕೊಳ್ಳಲು ಮಹಾವನದ ಮಧ್ಯದಲ್ಲಿದ್ದ ಸರೋವರಕ್ಕೆ ಹೊರಟನು.

ಸರೋವರದಲ್ಲಿ ನೀರು ಕುಡಿದು ದಾಹ ತೀರಿಸಿಕೊಂಡ ಮೇಲೆ ಹೊಸ ಉತ್ಸಾಹದಿಂದ ತನ್ನ ಪತ್ನಿ ಆನೆಗಳೊಂದಿಗೆ ಜಲಕ್ರೀಡೆಗಿಳಿದು, ಈಜಾಡುತ್ತ ಅಲ್ಲೋಲಕಲ್ಲೋಲ ಮಾಡುತ್ತ ಅಟ್ಟಹಾಸದಿಂದಿರುವಾಗ, ಇದ್ದಕ್ಕಿದ್ದ ಹಾಗೆ ದೊಡ್ಡದೊಂದು ಮೊಸಳೆ ಕೋರೆ ಹಲ್ಲುಗಳಿಂದ ಆನೆಯ ಬಲಗಾಲನ್ನು ಹಿಡಿದುಕೊಂಡಿತು.

ಕೆಟ್ಟ ನೋವಿನಿಂದ ಮದಗಜವು ಮಾಡಿದ ಘೀಂಕಾರಕ್ಕೆ ಕಾಡಾನೆಗಳೆಲ್ಲಾ ಹೆದರಿ ಚೆಲ್ಲಾಚೆದುರಾಗಿ ಸರೋವರದ ಸುತ್ತಲೂ ಬೇಗಬೇಗನೆ ದಡಕ್ಕೆ ಸೇರಿ, ಗಜೇಂದ್ರನ ಒದರಾಟವನ್ನು ನೋಡಿ ಏನೂ ತೋರದೆ ಅಳುದನಿಯನ್ನೆಬ್ಬಿಸಿದುವೇ ಹೊರತು, ಮೊಸಳೆ ಆನೆಗಳ ಸೆಣಸಾಟದ ರಭಸಕ್ಕೆ ಹೆದರಿ ದೂರದಲ್ಲೇ ನಿಂತುವು. ಏನು ಮಾಡುವುದೆಂದು ಅವುಗಳಿಗೆ ತಿಳಿಯಲಿಲ್ಲ.

ಗಜೇಂದ್ರವು ತನ್ನ ಪೂರ್ಣಶಕ್ತಿಯಿಂದ ಮೊಸಳೆಯ ಪಟ್ಟಿನಿಂದ ತಪ್ಪಿಸಿಕೊಳ್ಳಲು, ರೋಷದಿಂದ ಮೊಸಳೆಯನ್ನು ಕೊಲ್ಲಲು ಪ್ರಯತ್ನಪಡುತ್ತಲೇ ಇದ್ದಿತು. ಮೊಸಳೆಯೂ ಅಸಾಧಾರಣವಾಗಿದ್ದುದರಿಂದ ಆನೆಯನ್ನು ಬಿಡಲೊಲ್ಲದು. ಹೆಣ್ಣಾನೆಗಳು ಶೋಕಿಸುತ್ತ ಹಸಿವು ತಾಳದಾದಾಗ ಹೋಗಿ ಏನಾದರೂ ತಿಂದು



ಮತ್ತೆ ಸರೋವರ ತೀರಕ್ಕೆ ಬಂದು ತಮ್ಮ ನಾಥನ ಅವಸ್ಥೆಯನ್ನು ನೋಡುತ್ತ, ಸರೋವರದ ಸುತ್ತಲೂ ತಿರುಗುತ್ತ ಕಾಲ ಕಳೆಯುತ್ತಿದ್ದುವು. ಕಣ್ಣೀರು ಸುರಿಸುತ್ತಿದ್ದುವು. ಸರೋವರದಲ್ಲಿ ಕರಿ ಮಕರಿಗಳ ಯುದ್ಧವು ಸಾಗಿಕೊಂಡೇ ಇದ್ದಿತು.

ಗಜೇಂದ್ರವು ದಂತಗಳಿಂದ ಮೊಸಳೆಯನ್ನು ತಿವಿಯುತ್ತಿತ್ತು. ಮೊಸಳೆ ಹಾರಿಹಾರಿ ಆನೆಯ ಶರೀರವೆಲ್ಲಾ ರಕ್ತಧಾರೆ ಕಟ್ಟುವಂತೆ ತನ್ನ ಮೊನಚಾದ ಉಗುರುಗಳಿಂದ ಪರಚುತ್ತಿತ್ತು. ಆನೆ ತಪ್ಪಿಸಿಕೊಳ್ಳಲು ಯತ್ನಿಸುವಾಗ ಕವಕ್ಕನೆ ಮತ್ತೆ ಅದರ ಕಾಲನ್ನು ಹಿಡಿಯುತ್ತಿತ್ತು.

ಆನೆ ಸೊಂಡಿಲಿನಿಂದ ಮೊಸಳೆಯ ಬೆನ್ನಿನ ಮೇಲೆ ಹೊಡೆಯುತ್ತಿತ್ತು. ಮೊಸಳೆ ಹರಿತವೂ ದೊರಗೂ ಆದ ಬಾಲದಿಂದ ಆನೆಯನ್ನೂ ಹೊಡೆಯುತ್ತಿತ್ತು. ಆಗ ಸರೋವರ ನೀರು ಮೇಲೆ ಚಿಮ್ಮಿ ಮಳೆಯಂತೆ ಸುತ್ತಲೂ ಬೀಳುತ್ತಿತ್ತು.

ಆನೆ ಮೊಸಳೆಯ ಮೇಲೆ ಬಿದ್ದು ನಾಲ್ಕು ಕಾಲುಗಳಿಂದ ಅದನ್ನು ದೂರ ಚಿಮ್ಮಿಸಿಬಿಡಲು ಪ್ರಯತ್ನಿಸುತ್ತಿತ್ತು. ಆಗ ಮೊಸಳೆ ನೀರಿನ ಅಡಿಯಲ್ಲಿ ಅಡಗಿಬಿಡುತ್ತಿತ್ತು. ಮೊಸಳೆಯ ಜಾಡು ಕಾಣದಿರುವುದನ್ನು ನೋಡಿ, ಆನೆ ತೀರಕ್ಕೆ ಹೋಗಲು ಕಾಲೆತ್ತಿಗೆಯುವಷ್ಟರಲ್ಲಿ ಮೊಸಳೆ ತಟಕ್ಕನೆ ಆನೆಯ ಕಾಲನ್ನು ಹಿಡಿದು ನೀರಿಗೆ ಎಳೆದು ಮುಳುಗಿಸುತ್ತಿತ್ತು. ಹೀಗೆ ಎಡೆ ಬಿಡದೆ ಸಾಗುತ್ತಿದ್ದ ಆ ಕರಿ ಮಕರಿಗಳ ಹೋರಾಟ ನಿರ್ವಿರಾಮವಾಗಿ ಸಾವಿರ ವರ್ಷಗಳವರೆಗೆ ನಡೆಯಿತು.

ಆ ಗಜೇಂದ್ರವು ತನ್ನ ಸ್ವಂತ ಶಕ್ತಿಯನ್ನು ನಂಬಿಕೊಂಡು ಎಷ್ಟೇ ಸಾಹಸಮಾಡಿ ಹೋರಾಡಿದರೂ ಕ್ರಮವಾಗಿ ಆನೆಯ ಶಕ್ತಿ ತಗ್ಗುತ್ತಾ ಬಂತು. ಮೊಸಳೆ ಎಂದರೆ ದೊಡ್ಡ ಜಲಗ್ರಹ ! ನೀರಿನಲ್ಲಿ ಅದರ ಶಕ್ತಿ ಅಪಾರ. ಆನೆಯ ರಕ್ತವನ್ನು ಹೀರುತ್ತ ಅದು ಮತ್ತಷ್ಟು ಬಲಗೊಂಡು ಬಲಿಯುತ್ತಿತ್ತು. ಅಂತಹ ಮೊಸಳೆಯ ಹಿಡಿತದಿಂದ ಮೋಕ್ಷಪಡೆಯಲು ಇನ್ನು ಆನೆಗೆ ಸಾಧ್ಯವಿಲ್ಲದಂತೆ ಕೃಶವಾಗಿ ಹೋಯಿತು.

"ನನ್ನ ಅವಸ್ಥೆ ಹೀಗಾಯಿತೇಕೆ ? ಬಾಯಾರಿಕೆ ತೀರಿಸಿಕೊಳ್ಳಲು ಈ ಸರೋವರಕ್ಕೆ ಬಂದ ನಾನು ನೀರು ಕುಡಿದು ಸುಮ್ಮನೆ ಹೊರಟು ಹೋಗುವುದು ಬಿಟ್ಟು ಜಲಕ್ರೀಡೆಯಾಡಲು ಏಕೆ ಇಳಿದೆನೋ ? ನನ್ನ ಹಾಳು ಬುದ್ಧಿಯೇ ನನ್ನನ್ನು ಮೊಸಳೆಗೆ ಹಿಡಿದುಕೊಟ್ಟಿತು" ಎಂದು ಚಿಂತಿಸಲು ತೊಡಗಿತು ಆ ಗಜೇಂದ್ರ.

"ನನ್ನನ್ನು ರಕ್ಷಿಸುವವರು ಇನ್ನು ಯಾರು ? ಕರೆಯಬೇಕು ಯಾರನ್ನು ? ನನ್ನನ್ನು ನಾನು ರಕ್ಷಿಸಿಕೊಳ್ಳಲು ಸಾಧ್ಯವಾಗದ ಈ ಸ್ಥಿತಿಯಲ್ಲಿ ಯಾರೋ ಕಾಪಾಡುವವರೊಬ್ಬರು ಇರುವ ಹಾಗೆ ಮನಸ್ಸಿನಾಳದಲ್ಲಿ ಏನೋ ಒಂದು ಆಶೆ, ನಂಬುಗೆ. ಆ ಆಶೆಯಿಂದಲೇ ರಕ್ಷಣೆಯನ್ನು ಬಯಸುತ್ತಿದ್ದೇನೆ.



ಈ ನನ್ನ ಆಶೆಗೆ ಯಾವುದೋ ಒಂದು ಆಧಾರವಿಲ್ಲದಿದ್ದೀತೆ? ಆ ಆಧಾರವೇ ದೇವರೆಂದು ಕಾಣುತ್ತದೆ.

"ದೇವರು, ಭಗವಂತ, ಈಶ್ವರ ಎಂಬ ಭಾವನೆಗಳಿಗೆ ಆದಿ ಮೂಲನಾದ ಓ ದೇವರೇ! ಕಾರಣಗಳಿಗೆಲ್ಲಾ ನೀನೇ ಕಾರಣನು!

"ನನ್ನಂತಹ ಮದಗರ್ವಿತರಾದ ಮಂದಮತಿ ಜೀವಿಗಳಿಗೆ ಇಂತಹ ಆಪತ್ತು ಬಾರದವರೆಗೂ ನಿನ್ನ ಯೋಚನೆ ಬಾರದು. ಬಾಧೆಗಳಿಂದ ಸಂಕಟಪಟ್ಟು ನೊಂದರೆ ಹೊರತು ನಿನ್ನ ಅಗತ್ಯ ಗೊತ್ತಾಗುವುದಿಲ್ಲ. ಇದ್ದಾನೆ, ಇದ್ದಾನೆ ಎಂಬವನು ಇದ್ದಾನೋ ಇಲ್ಲವೋ ಎಂಬ ಆಂದೋಳನೆಗೊಳಗಾಗದೆ ನೀನು ಕಾಣಿಸಲಾರೆ" ಎಂದು ಆ ಮದ್ದಾನೆ ಮದವಿಳಿದು ಪರಿಪರಿಯಾಗಿ ಚಿಂತಿಸಿಕೊಂಡಿರುವಾಗ, ಮೊಸಳೆಯ ಹಿಡಿತ ಕಡಿತಗಳ ನೋವು ಸ್ವಲ್ಪ ತಗ್ಗಿದ ಹಾಗೆ ತೋರಿತು.

ಯಾವಾಗ ಆ ಗಜೇಂದ್ರನು ಚಿಂತಿಸಲು ಪ್ರಾರಂಭಿಸಿದನೋ ಆ ಕ್ಷಣದಲ್ಲೇ ಮೊಸಳೆಯ ಕೋರೆ ಹಲ್ಲುಗಳ ನಿಷ್ಟು ಜುಮ್ಮೆನ್ನ ತೊಡಗಿತು. ಅದರ ಗುಂಡಿಗೆಯಲ್ಲಿ ನಡುಕದ ಅಲೆ ಎದ್ದಿತು. ಆದರೂ ಅದು ಇನ್ನಷ್ಟು ರೋಷದಿಂದ ಗಜೇಂದ್ರನ ಕಾಲನ್ನು ಒತ್ತಿ ಒತ್ತಿ ರುಚಿ ಬಿಡದಹಾಗೆ ಹಿಚಿಕಿ ಹಿಂಡಿ ಹೀರುತ್ತಲೇ ಇದ್ದಿತು.

"ಹೇ ಸರ್ವೇಶ್ವರಾ! ಸಕಲ ಜೀವಿಗಳ ಕಷ್ಟವನ್ನೂ ನೋವನ್ನೂ ಪರಿಹರಿಸುವವನೇ! ಎಲ್ಲಾ ಕಡೆಗಳನ್ನೂ ನೋಡಿಕೊಂಡಿರುವವನೇ! ವ್ಯಾಪಿಸಿಕೊಂಡಿರುವವನೇ!

"ಎಲ್ಲಾ ದೇವತೆಗಳಿಗೂ ಮೂಲನಾದ ದೇವಾಧಿದೇವಾ! ಈ ಜಗತ್ತು ಹುಟ್ಟಲಿಕ್ಕೆ ಕಾರಣನಾದ ಆದಿಮೂಲನೇ! ನನ್ನನ್ನು ರಕ್ಷಿಸಬೇಕೆಂದು ನಿನ್ನನ್ನು ಎಷ್ಟು ಬಲವಾಗಿ ಬೇಡುತ್ತೇನೋ ಅಷ್ಟೇ ವೇಗದಿಂದ ನೀನು ಬಂದು, ನನ್ನನ್ನು ರಕ್ಷಿಸುವಿ ಎಂದು ನಂಬುತ್ತೇನೆ! ಬೇರೆ ದಿಕ್ಕಿಲ್ಲ; ನೀನು ರಕ್ಷಿಸಿ ತೀರುವಿ!

"ಎಲ್ಲದಕ್ಕೂ ನೀನೇ ಆಗಿ, ಮಾತಿಗೂ ಮನಸ್ಸಿಗೂ ದೊರಕದಿರುವ ಓ ಸರ್ವೇಶ್ವರಾ! ನನ್ನಂತಹ ದೀನರನ್ನು ಕಾಪಾಡುವ ಬಾಧ್ಯತೆ ನಿನ್ನದೇ ಅಲ್ಲವೇ?

"ಜೀವಶಕ್ತಿಗಳೆಲ್ಲಾ ನಶಿಸಿ ಹೋದ ನನ್ನಲ್ಲಿ ಈಗ ಕಣ್ಣೀರು ಕೂಡಾ ಬತ್ತಿಹೋಯಿತು. ನಿನ್ನನ್ನು ಗಟ್ಟಿಯಾಗಿ ಕೂಗಿ ಕರೆಯಲಿಕ್ಕೂ ಶಕ್ತಿಯಿಲ್ಲ; ಸ್ವರವೇ ಇಲ್ಲ; ಒಂದು ಸಣ್ಣ ಮೂಲುಗು ಸದ್ದೂ ಸಹಾ ಹೊರಡದ ಸ್ಥಿತಿ ಬಂತು. ಸ್ಪೃಹೆ ಕೂಡಾ ತಪ್ಪುತ್ತಾ ಇದೆ.

"ಇನ್ನು ನನ್ನನ್ನು ರಕ್ಷಿಸಿದರೂ ಬಿಟ್ಟರೂ ನಿನ್ನ ಇಷ್ಟ. ನಿನ್ನ ಹೊರತು ಇನ್ನಾವ ದಿಕ್ಕೂ ಗತಿಯೂ ನನಗಿಲ್ಲ" ಎಂದು ಗಜೇಂದ್ರವು ಸೊರಗಿ ಶಲ್ಯವಾಗಿ, ಇರುವ ಶಕ್ತಿಯನ್ನೆಲ್ಲಾ ಸೇರಿಸಿ ಸೊಂಡಿಲೆತ್ತಿ ಕರೆಯುವಂತೆ ಅರೆಗಣ್ಣಿನಿಂದ ನೋಡುತ್ತಿತ್ತು.



ಕೂಡಲೇ ಮೊಸಳೆಯಿದ್ದ ಸ್ಥಳದಲ್ಲಿ ಒಬ್ಬ ಗಂಧರ್ವನು ಪ್ರತ್ಯಕ್ಷನಾದನು. ಹೂಹೂ ಎಂಬ ಹೆಸರು ಆ ಗಂಧರ್ವನಿಗೆ. ಅವನು ಮೊಸಳೆಯಾಗಿರಲು ಕಾರಣವೇನಂದರೆ, ಹಿಂದೆ ದೇವಲ ಋಷಿ ನೀರಿನಲ್ಲಿ ನಿಂತುಕೊಂಡು ಧ್ಯಾನಮಾಡುತ್ತಿದ್ದಾಗ, ಹೂಹೂ ಗಂಧರ್ವನು ನೀರಿನಡಿಯಲ್ಲಿ ಹೋಗಿ ಮೊಸಳೆಯಂತೆ ಅವನ ಕಾಲನ್ನು ಹಿಡಿದನು. ಈ ಚೇಷ್ಟೆಯಿಂದ ದೇವಲನಿಗೆ ಕೋಪ ಬಂದು ಮೊಸಳೆಯಾಗಿರುವಂತೆ ಅವನಿಗೆ ಶಾಪಕೊಟ್ಟನು. ವಿಷ್ಣುಚಕ್ರದ ಹೊರತು ಬೇರೆ ವಿಮೋಚನೆ ಇಲ್ಲವೆಂದೂ ಹೇಳಿದ್ದನು. ಅಂತಲೇ ಈಗ ಅವನ ಶಾಪ ತೀರಿಹೋಯಿತು.

ಹೀಗೆ ಮೊಸಳೆಯಿಂದ ಗಜೇಂದ್ರನನ್ನು ರಕ್ಷಿಸಿದ ವಿಷ್ಣು, ಗಜೇಂದ್ರನನ್ನು ಸರೋವರದಿಂದ ತೀರಕ್ಕೆ ಎತ್ತಿತಂದು, ಅಂಗೈಯಿಂದ ಅದರ ಕುಂಭಸ್ಥಳವನ್ನು ನೀವಿದನು. ಆ ದಿವ್ಯ ಸ್ಪರ್ಶದಿಂದ ಗಜೇಂದ್ರನ ಎಲ್ಲಾ ಜೀವಸತ್ವಗಳೂ, ಶರೀರ ಪುಷ್ಟಿಯೂ ಮೊದಲಿನಂತೆಯೇ ತಿರಿಗಿ ಬಂದಿತು. ಅದರೊಂದಿಗೆ ತಾನು ಯಾರೆಂಬ ಪೂರ್ವ ಜನ್ಮ ಜ್ಞಾನವೂ ಉಂಟಾಯಿತು.

ಹಿಂದಿನ ಜನ್ಮದಲ್ಲಿ ಅವನು ವಿಷ್ಣು ಚಿಂತನಾ ತತ್ಪರನಾದ ಇಂದ್ರದ್ಯುಮ್ನನೆಂಬ ಮಹಾರಾಜನು. ವಿಷ್ಣು ಧ್ಯಾನದಲ್ಲಿರುವ ಅವನು ಅಗಸ್ತ್ಯ ಮಹರ್ಷಿಯ ಬರುವಿಕೆಯನ್ನು ಗಮನಿಸಲಿಲ್ಲ. ಅದರಿಂದ ಅಗಸ್ತ್ಯನು ಕೋಪಗೊಂಡು ಅವನನ್ನು ಮದಗಜವಾಗಿ ಹುಟ್ಟುವಂತೆ ಶಾಪಕೊಟ್ಟನು. ಹೀಗೆ ಆ ರಾಜನು ಗಜೇಂದ್ರನಾಗಿ ಹುಟ್ಟಿ, ಕಡೆಗೆ ಮೋಕ್ಷಪಡೆದನು.

ಗಜೇಂದ್ರ ಮೋಕ್ಷದ ಈ ಕಥೆಯನ್ನು ನೈಮಿಶಾರಣ್ಯದಲ್ಲಿ ನಡೆಯುವ ಸತ್ರಯಾಗಕ್ಕೆ ಬಂದ ಶೌನಕಾದಿ ಮುನಿಗಳಿಗೆ, ದೊಡ್ಡ ಪುರಾಣಜ್ಞನಾದ ಸೂತಪುರಾಣಿಕನು ಹೇಳಿದನು.

ಮೊಸಳೆಗೆ ಸಹಾ ಬಲವು ತಗ್ಗುವ ಹಾಗೆ ತೋರುತ್ತಿತ್ತು. ಬಾಯಿ ಜಾರಿಜಾರಿ ಹೋಗುತ್ತಿತ್ತು. ಕುತ್ತಿಗೆ ಕಟ್ಟುವ ಹಾಗೆ ಆಗುತ್ತಿತ್ತು.

ತಾನು ಇರುವೆನೋ ಇಲ್ಲವೋ ತಿಳಿಯದ ಸ್ಥಿತಿಯಲ್ಲಿ ಆನೆ ಕಣ್ಣುಗಳನ್ನು ಮುಚ್ಚಿಕೊಂಡಿತು. ಸ್ವಲ್ಪವೂ ಚಲನೆ ಕಾಣಿಸಲಿಲ್ಲ, ಧ್ಯಾನಮುದ್ರೆಯಂತೆ.

ಆಗ ವಿಷ್ಣು ಅಲ್ಲಿ ಪ್ರತ್ಯಕ್ಷನಾದನು. ಆಕಾಶವೆಲ್ಲಾ ಅವನ ರೂಪದಿಂದ ತುಂಬಿಹೋಯಿತು. ತಾನೊಂದು ಸೂಕ್ಷ್ಮವಾದ ಅಣುವಾಗಿರುವಂತೆ ಗಜೇಂದ್ರನಿಗೆ ತೋರಿತು. ಕಣ್ಣು ತೆರೆದನು.

ಬಂದ ಕೂಡಲೇ ವಿಷ್ಣು ಅಭಯಹಸ್ತವನ್ನು ಆನೆಯ ಮಸ್ತಕದ ಮೇಲಿಟ್ಟು, ಚಕ್ರವನ್ನು ಮೊಸಳೆಯ ಮೇಲೆ ಪ್ರಯೋಗಿಸಿದನು.

ಪ್ರಚಂಡ ವೇಗದಿಂದ ತಿರುಗಿದ ವಿಷ್ಣುಚಕ್ರವು ಮೊಸಳೆಯ ತಲೆಯನ್ನು ತರಿದು ಹಾಕಿ, ವಿಷ್ಣುವಿನ ಹಸ್ತವನ್ನು ಸೇರಿತು.



ಮುನಿಗಳು ಸೂತನೊಂದಿಗೆ "ಮುನೀಂದ್ರಾ, ಗಜೇಂದ್ರ ಮೋಕ್ಷದ ಕಥೆ ಕೇವಲ ಒಂದು ಆನೆಯ ಕಥೆಯೆಂದು ಹೇಳುವಂತಿಲ್ಲ, ಜೀವ ಕೋಟಿಗಳಿಗೆಲ್ಲಾ, ಮುಖ್ಯವಾಗಿ ಅನೇಕ ಬಂಧಬಾಧೆಗಳಲ್ಲಿ ಸಿಕ್ಕಿಕೊಂಡು ತೊಳಲಾಡುವ ಮಾನವಜೀವಿಗಳಿಗೆ ವರ್ತಿಸುವ ಕಥೆಯಂತೆಯೇ ಇದೆ" ಎಂದು ತಮ್ಮ ಅಭಿಪ್ರಾಯ ಹೇಳಿದರು.

ಅದಕ್ಕೆ ಸೂತನು, "ನಿಜ. ಸರಿಯಾಗಿ ಹೇಳಿದಿರಿ. ಗಜೇಂದ್ರ ಮೋಕ್ಷವು ಅಂತರಾರ್ಥದಿಂದ ಕೂಡಿರು ಕಥೆಯೇ. ಅದನ್ನು ಯಾರು ಯಾವುದಕ್ಕೆ ಬೇಕಾದರೂ ಅನ್ವಯಿಸಿಕೊಳ್ಳಬಹುದು. ಕಾಲವು ವಿಷ್ಣುವಿನ ಅಧೀನದಲ್ಲಿ ಇರುವಂತಹುದು. ಕಾಲ ಚಕ್ರ ಭ್ರಮಣೆಯಲ್ಲಿ ಎಷ್ಟೋ ಸಮಸ್ಯೆಗಳೂ, ಕಷ್ಟ ಕೋಟಲೆಗಳೂ ಸಿಕ್ಕಿಕೊಂಡು ಉರುಳುತ್ತಾ ಇರುತ್ತವೆ." ಎಂದನು.

ಮುನಿಗಳು, "ಮುನಿವರ್ಯಾ, ಗಜೇದ್ರ ಮೋಕ್ಷದಿಂದ ಕಾರಣಗಳಿಗೆಲ್ಲ ಕಾರಣನು ಸರ್ವೇಶ್ವರನಾದ ವಿಷ್ಣುವೇ ಎಂದು ಗೊತ್ತಾಯಿತು. ಅಂತಹ ವಿಷ್ಣು ಮಹಿಮೆಗಳು ಇನ್ನೆಷ್ಟೋ ಇರಬಹುದಲ್ಲವೆ? ಅಂತಹುವನ್ನು ಪೂರ್ತಿಯಾಗಿ ಕೇಳಬೇಕೆಂದು ನಮಗೆ ಕುತೂಹಲ ಉಂಟಾಗಿದೆ. ನಿಮ್ಮ ಮುಂದೆ ನಾವೆಲ್ಲಾ ಮಕ್ಕಳಂತಹರು. ಆದುದರಿಂದ ವಿಷ್ಣುವನ್ನು ಕುರಿತು ವಿಶೇಷಗಳು ನಮಗೆ ಸುಲಭವಾಗಿ ಬೋಧವಾಗುವಂತೆ ಹೇಳಬೇಕೆಂದು ನಾವು ಪ್ರಾರ್ಥಿಸುತ್ತೇವೆ. ವ್ಯಾಸಮಹರ್ಷಿಯಿಂದ ಸಮಸ್ತ ಪುರಾಣಗಳನ್ನೂ, ಅವುಗಳ ವಿಶೇಷಾರ್ಥಗಳನ್ನೂ ತಿಳಿದಿರುವಂತಹ ನೀವೊಬ್ಬರೇ ನಮ್ಮನ್ನು ಕೃತಾರ್ಥರನ್ನಾಗಿ ಮಾಡಬೇಕು" ಎಂದರು ಕೈಮುಗಿದು.

ಸೂತಪುರಾಣಿಕನು ಅವರ ಮಾತಿಗೆ ಸಂತಸಪಟ್ಟು, "ಹಾಗೆಯೇ ಕೇಳುವಿರಂತೆ. ಕೇಳುವ ಕುತೂಹಲವಿರುವವರಿಗೆ ಹೇಳುವುದೆಂದರೆನನಗೂ ಸಂತೋಷವೇ. ವ್ಯಾಸ ಮಹರ್ಷಿ ವಿಷ್ಣುವನ್ನು ಕುರಿತು ಅನೇಕ ಲೀಲಾವತಾರ ವಿಶೇಷಗಳಿಂದ ಕೂಡಿದ ಪ್ರತ್ಯೇಕವಾದ ಮಹಾಭಾಗವತವೆಂಬ ಗ್ರಂಥವನ್ನು ರಚಿಸಿ ತನ್ನ ಕುಮಾರನಾದ ಶುಕನಿಗೆ ಬೋಧಿಸಿದ್ದಾರೆ. ವಿಷ್ಣು ಮಹಿಮೆಯನ್ನು ಕೇಳಬೇಕೆಂದು ಆಶಿಪಟ್ಟ ಪರೀಕ್ಷಿತ ಮಹಾರಾಜನಿಗೆ ಶುಕಯೋಗಿ ಅದನ್ನು ಹೇಳಿದನು. ಗಜೇಂದ್ರನನ್ನು ರಕ್ಷಿಸಲು ವಿಷ್ಣು ಎತ್ತಿದ ಅವತಾರವು ಆದಿಮೂಲಾವತಾರವೆಂದು ಹೆಸರು ಪಡೆದಿದೆ.

ವಿಷ್ಣು ಅನೇಕ ಅವತಾರವನ್ನು ಎತ್ತಿದ್ದಾನೆ. ಅವುಗಳಲ್ಲಿ ಪರಿಣಾಮ ದಶೆಗಳನ್ನು ಅನುಸರಿಸಿರುವ ದಶಾವತಾರಗಳೆಂಬ ಹತ್ತು ಅವತಾರಗಳು ಮುಖ್ಯವಾದುವು.

ನಾರವೆಂದರೆ ನೀರು. ನೀರಿಗೆ ಮೂಲವಾದವನೆಂಬ ಕಾರಣದಿಂದಲೇ ವಿಷ್ಣು ನಾರಾಯಣನಾದನು. ನಾರಾಯಣನಿಂದಲೇ ನೀರು ಹುಟ್ಟಿತು.



ನೀರಿನಿಂದ ಜೀವ ಹುಟ್ಟಿತು. ವಿಷ್ಣು ಜಲಚರವಾದ ಮೀನಾಗಿ ಅವತರಿಸಿದನು. ಅದೇ ಮತ್ಸ್ಯಾವತಾರ. ದಶಾವತಾರಗಳಲ್ಲಿ ಮತ್ಸ್ಯಾವಾತಾರವೇ ಸೃಷ್ಟಿಗೇ ಮೂಲವಾದ ಮೊದಲನೆಯದು.

ವಿಷ್ಣು ಜಲಮಯನಾಗಿರುವುದರಿಂದ ನೀಲ ಮೇಘದ ಬಣ್ಣದಲ್ಲಿರುತ್ತಾನೆ. ಮೇಘದಲ್ಲಿ ಮಿಂಚುಗಳಿರುವ ಹಾಗೆ ವಿಷ್ಣು ತೇಜೋಮಯನಾಗಿರುವನು. ಅವನಿಂದ ಬಂದ ಜಲವು ಕೂಡಾ ತೇಜಸ್ಸಿನಿಂದ ತುಂಬಿಕೊಂಡು ಬೆಳ್ಳಗಿನ ಕಿರಣಗಳನ್ನು ಚಿಮ್ಮಿಕೊಂಡಿರುತ್ತದೆ. ಆ ಜಲರಾಶಿಯೇ ಕಾರಣೋದಕವಾದ ಕ್ಷೀರಸಾಗರ.

ಕ್ಷೀರ ಸಾಗರದಲ್ಲಿ ಅನಂತವಾದ ಕಾಲವು ಶೇಷ ಸರ್ಪದ ರೂಪದಲ್ಲಿ ಸುರುಳಿ ಸುತ್ತಿಕೊಂಡಿರುತ್ತದೆ. ಆ ಶೇಷನಿಗೆ ಸಾವಿರ ಹೆಡೆಗಳು. ಅಂತ್ಯವೆಂಬುದಿಲ್ಲದ ಕಾಲಶೇಷನ ಮೇಲೆ ಶೇಷಶಾಯಿಯಾಗಿ ವಿಷ್ಣು ಶಯನಿಸಿಕೊಂಡಿರುವಾಗ, ಅವನ ಹೊಕ್ಕುಳಿನ ನಾಳದಿಂದ ದೊಡ್ಡದೊಂದು ಪದ್ಮವು ಮೇಲೆದ್ದಿತು. ಆ ಪದ್ಮದಲ್ಲಿ ಬ್ರಹ್ಮನು ಆವಿರ್ಭವಿಸಿದನು. ಆ ಬ್ರಹ್ಮನು ಎಲ್ಲವನ್ನೂ ಸೃಷ್ಟಿಸಿದನು.

ಅನಂತವಾದ ಕಾಲವು ಯುಗಗಳಾಗಿ ಸಾಗುತ್ತಾ ಇರುತ್ತದೆ.

ಕೃತ, ತ್ರೇತ, ದ್ವಾಪರ, ಕಲಿ ಎಂಬ ನಾಲ್ಕು ಯುಗಗಳು ಕೂಡಿ ಒಂದು ಮಹಾಯುಗವೆನಿಸುತ್ತದೆ.

ಸಾವಿರ ಮಹಾಯುಗಗಳು ಕೂಡಿ ಒಂದು ಕಲ್ಪವೆನಿಸುವುದು. ಈ ಕಲ್ಪಕಾಲವು ಬ್ರಹ್ಮನಿಗೆ ಒಂದು ಹಗಲು ಮಾತ್ರವೇ ! ಈ ಹಗಲು ಪೂರ್ತಿಯಾದ ಕೂಡಲೇ ಅವನಿಗೆ ದಣಿವಿನಿಂದ ವಿಶ್ರಾಂತಿ ಪಡೆಯುವ ಕಾಲ ಬರತ್ತದೆ. ಅದೇ ಕಲ್ಪಾಂತವೆನಿಸಿ ಎಲ್ಲೆಲ್ಲೂ ಗಾಢಾಂಧಕಾರವಾಗುತ್ತದೆ. ವಿಷ್ಣುವಿಂದ ಹೊರಹೊರಟ ಸಂಕರ್ಷಣಾಗ್ನಿಯ ಬಿಸಿಯ ಜ್ವಾಲೆ ಸಮಸ್ತವನ್ನೂ ಸುಟ್ಟು ಹಾಕಿ ಬಿಡುತ್ತದೆ. ಪ್ರಚಂಡ ಬಿರುಗಾಳಿ ಬೀಸಿಕೊಂಡೇ ಇರುತ್ತದೆ. ಕಾರ್ಮೋಡಗಳು ದೊಡ್ಡ ದೊಡ್ಡ ಹಿಂಡುಗಳಾಗಿ ಆನೆಯ ಸೊಂಡಿಲಿನಂತಹ ಜಲಧಾರೆಯನ್ನು ಸುರಿಸಿಕೊಂಡೇ ಇರುತ್ತವೆ. ಮಹಾ ಸಮುದ್ರವು ಆಕಾಶವನ್ನು ಮುಟ್ಟುವಂತೆ ಉಕ್ಕುತ್ತದೆ. ಭೂ, ಭುವರ್, ಸುವರ್ಲೋಕಗಳು ಮುಳುಗುತ್ತವೆ. ಎಲ್ಲಿ ನೋಡಿದರೂ ನೀರಿನ ಬೀಭತ್ಸ ದೃಶ್ಯವೇ ಹೊರತು ಮತ್ತೇನೂ ಇರುವುದಿಲ್ಲ. ಆ ವಿಧವಾಗಿ ಪ್ರಳಯ ಸಂಭವಿಸುತ್ತದೆ. ಬ್ರಹ್ಮನು ನಿದ್ದೆ ಮಾಡುವ ಒಂದು ದಿನದ ಮರು ಕಲ್ಪವೇ ಅವನಿಗೆ ರಾತ್ರಿ ! ಅದು ಕಾಲ ಶೇಷನ ಅರ್ಧ ಸುತ್ತು.

ಇಂತಹ ಒಂದು ಹಗಲಿನ ಕಲ್ಪಾಂತವು ಸಮೀಪಿಸುವ ಕಾಲದಲ್ಲಿ ಸತ್ಯವ್ರತನೆಂಬ ಒಬ್ಬ ರಾಜರ್ಷಿ ನದಿಯಲ್ಲಿ ಸ್ನಾನಮಾಡಿ, ನೀರಲ್ಲಿ ನಿಂತು ನಾರಾಯಣನನ್ನು ಧ್ಯಾನಿಸುತ್ತ ಸೂರ್ಯಾರ್ಘ್ಯಕ್ಕಾಗಿ ಬೊಗಸೆಯಲ್ಲಿ ನೀರನ್ನೆತ್ತಿದಾಗ, ಅವನ ಬೊಗಸೆಯಲ್ಲಿ

ಬಂಗಾರದ ರಂಗಿನ ಒಂದು ಸಣ್ಣ ಮೀನು ಸೇರಿಕೊಂಡಿದ್ದಿತು. ಸತ್ಯವ್ರತನು ಅದನ್ನು ನೋಡಿ ನದಿಯಲ್ಲಿ ಬಿಡಲು ಹವಣಿಸಿದಾಗ, ಆ ಚಿಕ್ಕ ಮೀನು. "ಓ ರಾಜಾ! ನಮ್ಮ ಮೀನಿನ ಜಾತಿ ಬಹಳ ಕೆಟ್ಟದ್ದು. ಚಿಕ್ಕ ಮೀನುಗಳನ್ನು ದೊಡ್ಡ ಮೀನುಗಳು ನುಂಗುತ್ತವೆ. ಅವುಗಳಿಂದ ತಪ್ಪಿಸಿಕೊಂಡರೂ ಬೆಸ್ತರು ಬಲೆ ಹಾಕಿ ಹಿಡಿದು ಅವುಗಳನ್ನು ಕೊಲ್ಲುತ್ತಾರೆ. ಆದುದರಿಂದ ನಿನ್ನ ರಕ್ಷಣೆಯನ್ನು ಆಶಿಸಿಯೇ ನಿನ್ನ ಬೊಗಸೆಗೆ ಬಂದಿದ್ದೇನೆ. ನಿರ್ದಯನಾಗಿ ನನ್ನನ್ನು ಬಿಟ್ಟು ಬಿಡಬೇಡ." ಎಂದು ಹೇಳಿತು.

ಸತ್ಯವ್ರತನು ಆಶ್ಚರ್ಯದಿಂದ ಆ ಮುದ್ದು ಮೀನನ್ನು ತನ್ನ ಕಮಂಡಲುವಿನ ನೀರಿನಲ್ಲಿ ಹಾಕಿ ಅದನ್ನು ತನ್ನ ನಗರಕ್ಕೆ ತೆಗೆದುಕೊಂಡು ಹೋದನು. ಸತ್ಯವ್ರತನು ಮಹಾರಾಜನಾಗಿ, ರಾಜ್ಯ ಪಾಲನೆ ಮಾಡುತ್ತ, ತಪಸ್ಸನ್ನೂ ಮಾಡಿಕೊಂಡು ರಾಜರ್ಷಿ ಎನಿಸಿದವನು. ವಿಷ್ಣು ಭಕ್ತನೂ, ಮಹಾಜ್ಞಾನಿಯೂ ಆಗಿರುವವನು.

ಅವನ ಕಮಂಡಲುವಿನೊಳಗಿದ್ದ ಮರಿ ಮೀನು ಮರುದಿನಕ್ಕೇ ತುಂಬಿ ಬೆಳೆದು ಉಸಿರು ಸಿಕ್ಕಿಕೊಂಡಂತಾಗಿ "ಓ ರಾಜಾ ! ನನ್ನನ್ನು ಇದರೊಳಗಿನಿಂದ ತೆಗೆದು ಸ್ವಲ್ಪ ದೊಡ್ಡ ನೀರಿಗೆ ಸೇರಿಸಯ್ಯಾ !" ಎಂದು ಮೊರೆಯಿಟ್ಟಿತು.

ಸತ್ಯವ್ರತನು ಆ ಮೀನನ್ನು ದೊಡ್ಡದೊಂದು ನೀರತೊಟ್ಟಿಯಲ್ಲಿ ಬಿಟ್ಟನು. ಸ್ವಲ್ಪ ಹೊತ್ತಿಗೆಲ್ಲಾ ಆ ಮೀನು ಇನ್ನಿಷ್ಟು ಬೆಳೆದು, ಆ ತೊಟ್ಟಿಯೂ ಸಾಲದೆ ಒದರಾಡ ತೊಡಗಿತು. ಅದನ್ನು ನೋಡಿ ಸತ್ಯವ್ರತನು ಅದನ್ನು ಒಂದು ಸಣ್ಣ ಮಡುವಿಗೆ ಒಯ್ದು ಹಾಕಿದನು. ಅದು ಇನ್ನೂ ಬೆಳೆಯುತ್ತಲೇ ಇದ್ದಿತು. ಆ ಮಡುವಿನಿಂದ ದೊಡ್ಡ ಸರೋವರಕ್ಕೂ, ಸರೋವರದಿಂದ ಮಹಾನದಿಯ ಜಲಾಶಯಕ್ಕೂ ಸೇರಿಸಿದರೂ, ಅದರ ಬೆಳವಣಿಗೆಗೆ ಅದಾವುದೂ ಸಾಲದಾಯಿತು. ಸತ್ಯವ್ರತನು ಆ ಮಹಾಮತ್ಸ್ಯವನ್ನು ಕಡೆಗೆ ಸಮುದ್ರಕ್ಕೇ ಸೇರುವಂತೆ ಮಾಡಿದನು. ಆಗ ಆ ಮೀನು, "ಓ ರಾಜರ್ಷೀ ! ನಿನ್ನ ರಕ್ಷಣೆಯನ್ನು ಪ್ರಾರ್ಥಿಸಿ ಬಂದ ನನ್ನನ್ನು ಮತ್ತೆ ಸಮುದ್ರಕ್ಕೇ ಸೇರಿಸಿದೆಯಾ ? ಇದು ನ್ಯಾಯವೇ ? ಮೊಸಳೆಗಳೂ ತಿಮಿಂಗಿಲಗಳೂ ನನ್ನನ್ನು ನುಂಗಿದರೆ ಏನು ಗತಿ ?" ಎಂದು ನೇರಾಗಿಯೇ ಕೇಳಿತು.

ಆದಕ್ಕೆ ಸತ್ಯವ್ರತನು "ಓ ಮಹಿಮಾವಂತವಾದ ಮಹಾ ಮೀನವೇ ! ಇದಕ್ಕಿಂತ ಹೆಚ್ಚಾಗಿ ನಾನೇನು ಮಾಡಬೇಕೋ ನೀನೇ ಹೇಳಿಬಿಡು. ಕ್ಷಣಕ್ಷಣಕ್ಕೂ ಶತಶತ ಯೋಜನಗಳಷ್ಟು ಬೆಳೆಯುವ ನಿನ್ನನ್ನು ನುಂಗುವಂತಹ ಹೆಬ್ಬಾಯಿಯ ಪ್ರಾಣಿ ಇನ್ನಾವುದಿದ್ದೀತು !" ಎಂದನು.





ಸತ್ಯವ್ರತನ ಭಕ್ತಿಭಾವದ ಮಾತುಗಳನ್ನು ಕೇಳಿ ಆ ಮಹಾ ಮೀನು ಸಮುದ್ರದ ಮಧ್ಯಕ್ಕೆ ಹೋಗಿ ಮಹಾ ಪರ್ವತದ ಹಾಗೆ ಸಾಗರದುದ್ದಕ್ಕೂ ನೀಡಿ ಬೆಳೆದು, ತಲೆಯೆತ್ತಿ ತೀರದಲ್ಲಿ ಹುಲ್ಲು ಕಡ್ಡಿಯಂತೆ ನಿಂತಿರುವ ಸತ್ಯವ್ರತನನ್ನು ನೋಡಿ, "ದೊಡ್ಡ ಗುಣಗಳು ತುಂಬಿದ ಓ ಸತ್ಯವ್ರತಾ, ನಿನ್ನ ವಾಕ್ಯವು ಅಮೋಘವಾಗಿ ಫಲಿಸಿಬಿಟ್ಟಿತು. ನೋಡಿದೆಯಾ? ನಾನು ಇನ್ನೂ ಬೆಳೆದು ಕಡೆಗೆ ಏನಾಗಿ ಹೋಗುವೆನೋ!" ಎಂದು ಮೇಘ ಘೋಷದಂತೆ ಹೇಳಿತು.

ಆಗ ಸತ್ಯವ್ರತನು ಕೈಗಳನ್ನೆತ್ತಿ ಜೋಡಿಸಿ, "ಮತ್ಸ್ಯರೂಪದಲ್ಲಿರುವ ಶ್ರೀಮನ್ನಾರಾಯಣಾ! ರಕ್ಷಣೆಯನ್ನು ಬೇಡುವ ನೆವನದಲ್ಲಿ ಬಂದು ನನ್ನನ್ನು ರಕ್ಷಿಸಲಿಕ್ಕಾಗಿಯೇ ಮತ್ಸ್ಯಾವತಾರವನ್ನೆತ್ತಿರುವೆ. ನಿನ್ನ ಲೀಲೆಗಳ ರಹಸ್ಯ ತಿಳಿಯಲು ನನ್ನಿಂದಾದೀತೆ?" ಎಂದು ವಿಧವಿಧವಾಗಿ ಸ್ತುತಿ ಮಾಡಿದನು.

ಆಗ ಮತ್ಸ್ಯಾವತಾರದಲ್ಲಿದ್ದ ಮಹಾವಿಷ್ಣು "ಎಲೈ ರಾಜನೇ, ಇನ್ನು ಏಳು ದಿನಗಳಲ್ಲಿ ಕಲ್ಪಾಂತವು ಬರುತ್ತದೆ. ಆಗ ಉಕ್ಕುವ ಪ್ರಳಯ ಜಲದಲ್ಲಿ ಎಲ್ಲವೂ ಮುಳುಗುತ್ತದೆ. ಜ್ಞಾನವೂ, ಓಷಧಿಗಳೂ ಬೀಜಗಳೂ ನಶಿಸಿ ಹೋಗಬಾರದು. ಮುಂದಿನ ಕಲ್ಪಕ್ಕೆ ಅವುಗಳು ಇಲ್ಲದೇ ಹೋದರೆ ಹೇಗೆ ಹೇಳು. ಈಗ ನಿನಗಾಗಿ ದೊಡ್ಡದೊಂದು ನೌಕೆ ಗಾಢಾಂಧಕಾರದಲ್ಲಿ ಬೆಳಗುತ್ತ ಬರುತ್ತದೆ. ಅದರಲ್ಲಿ ಸಪ್ತರ್ಷಿಗಳು ಇದ್ದಾರೆ. ಆ ಬೆಳಕು ಅವರದೇ.

"ಓಷಧಿಗಳನ್ನೂ, ಸರ್ವ ವಿಧ ಬೀಜಗಳ ರಾಶಿಯನ್ನೂ ಆ ನೌಕೆಯೊಳಗೆ ಸೇರಿಸು. ನನ್ನ ತಲೆಯ ಮೇಲಿರುವ ಕೊಂಬಿಗೆ ನಾವೆಯನ್ನು ಸಿಕ್ಕಿಸಿಟ್ಟುಬಿಡು. ಆ ನಾವೆ ತೆರೆಗಳ ಹೊಡೆತಕ್ಕೆ ಮುಳುಗಿ ಹೋಗದಂತೆ ನೋಡಿಕೊಳ್ಳುವ ಭಾರ ನನ್ನದು. ಬ್ರಹ್ಮನು ನಿದ್ದೆಯಿಂದೇಳುವ ವರೆಗೂ ಧ್ರುವನನ್ನು ದಿಕ್ಸೂಚಿಯಾಗಿ ಇಟ್ಟುಕೊಂಡು ನಾವೆ ಜಲದಲ್ಲಿ ತೇಲಾಡಿಕೊಂಡಿರುತ್ತದೆ. ಅಥವಾ ನಿರ್ದಿಷ್ಟವಿಲ್ಲದೆ ಪ್ರಯಾಣಿಸಿಕೊಂಡಿರುತ್ತದೆ. ಮತ್ತೆ ಬರುವ ಕಲ್ಪದಲ್ಲಿ ನೀನು ವೈವಸ್ವತ ಎಂಬ ಹೆಸರಿನ ಮನುವಾಗಿರುವಿ.



ನೆನಪಿಟ್ಟುಕೋ" ಎಂದು ಆದೇಶ ಮಾಡಿತು. ಸತ್ಯವ್ರತನು ವಿಷ್ಣುವಿನ ಆಜ್ಞೆಯನ್ನು ಶಿರದೊಳಾಂತು ವಿನಮ್ರತೆಯಿಂದ ನಮಸ್ಕರಿಸಿದನು.

ಮತ್ಸ್ಯಾವತಾರವು ಬ್ರಹ್ಮಾಂಡವಾದ ತನ್ನ ನಾಲ್ಕು ರೆಕ್ಕೆಗಳನ್ನು ಓಲಾಡಿಸುತ್ತ ಬಾಲದಿಂದ ನೀರನ್ನು ತೊಳಸುತ್ತ, ಬೆಟ್ಟಗಳ ಸಾಲಿನಂತೆ ಹೊರಳುವ ತೆರೆಗಳನ್ನು ಸೀಳುತ್ತ, ಲೀಲಾಜಾಲವಾಡಿಕೊಂಡು ಸಮುದ್ರದೊಳಗೆ ಹೊರಟು ಹೋಯಿತು.

ಬ್ರಹ್ಮನು ಗಾಢನಿದ್ರೆಯಲ್ಲಿ ಮುಳುಗಿ ಹೋದನು. ಅಂಧಕಾರದ ಜಗತ್ತಿನಲ್ಲಿ ಏನೇನೋ ವಿಲಯ ಕಾಂಡಗಳು ನಡೆಯುತ್ತಿದ್ದುವು. ಹೇಳುವವರು ಕೇಳುವವರು ಯಾರೂ ಇಲ್ಲ.

ಆ ಅಂಧಕಾರದ ಜಲಕಾಲದಲ್ಲಿ ಹಯಗ್ರೀವನಾದ ಸೋಮಕಾಸುರನು, ತನ್ನ ವಾಸ ಸ್ಥಾನವಾದ ತಲಾತಲವನ್ನು ಬಿಟ್ಟು ಸಮುದ್ರದ ಮೇಲೆ ಬಂದು, ಗಬ್ಬಿಲದ ಹಾಗೆ ಬ್ರಹ್ಮನ ಸತ್ಯಲೋಕದ ಕಡೆಗೆ ಹಾರಿದನು. ಅಂಧಕಾರವನ್ನು ಚಿರಸ್ಥಾಯಿಗೊಳಿಸುವುದೇ ಅವನ ಉದ್ದೇಶ. ಪುನಃಸೃಷ್ಟಿಯನ್ನು ತಡೆಯುವುದೇ ಅವನ ಗುರಿ. ಅವನು ನಿದ್ರಿಸಿಕೊಂಡಿದ್ದ ಬ್ರಹ್ಮನ ಪಕ್ಕದಲ್ಲೇ ಹೊಂಚಿಕೊಂಡು ಕಾದಿದ್ದನು.

ಗಾಢ ನಿದ್ರೆಯಲ್ಲಿರುವ ಬ್ರಹ್ಮನು ಒಂದು ಸಾರಿ ಆಕಳಿಸಿದಾಗ, ಅವನ ನಾಲ್ಕು ಮುಖಗಳಿಂದ ಬಿಳುಪು, ಕೆಂಪು, ಹಳದಿ ಮತ್ತು ನೀಲ ಬಣ್ಣಗಳಿಂದ ಪ್ರಕಾಶಿಸುವ ನಾಲ್ಕು ವೇದಗಳು ಹೊರಗೆ ಬಂದು ಅವನ ಪಕ್ಕದಲ್ಲಿ ಬಿದ್ದುವು. ಸೋಮಕಾಸುರನು ಅವುಗಳನ್ನು ಅಪಹರಿಸಿಕೊಂಡು ಹೋಗಿ, ಸಮುದ್ರ ತಳದ ಬಂಡೆಗಳ ಎಡೆಯಲ್ಲಿ ಅಡಗಿಸಿಟ್ಟನು.

ಈ ಸೋಮಕಾಸುರನು ದೇವತೆಗಳಿಗೂ, ದೇವಾಧಿದೇವನಾದ ವಿಷ್ಣುವಿಗೂ ಪ್ರಬಲ ವಿರೋಧಿ. ವೇದಗಳು ಇಲ್ಲದೆ ಹೋದರೆ ಬ್ರಹ್ಮನಿಗೆ ಸೃಷ್ಟಿಕಾರ್ಯ ಮಾಡಲು ಸಾಧ್ಯವಾಗದು. ಪ್ರತಿ ಕಲ್ಪಗಳಿಗೂ ಆಗತ್ಯವಾದ ಒಳಿತುಗಳನ್ನೂ, ಪ್ರಗತಿಯನ್ನೂ ನೆಲೆಗೊಳಿಸುವಂತಹ ವಿಷ್ಣುವಿನ ಸಂಕಲ್ಪವನ್ನು ಭಗ್ನಗೊಳಿಸಿಬಿಟ್ಟರೆ, ನಿದ್ದೆಯಿಂದೆದ್ದ ಬ್ರಹ್ಮನು ಏನೂ ಮಾಡದೆ ಜಡನಾಗಿ ಹೋಗುತ್ತಾನೆ.

ಪ್ರಳಯ ಜಲವು ಭೂಮಿಯನ್ನು ಪೂರ್ತಿ ಮುಳುಗಿಸುವ ಕಾಲದಲ್ಲಿ, ಇನ್ನೂ ಮುಳುಗದ ನೆಲದಲ್ಲಿ ನಿಂತು ಇದಿರು ನೋಡಿಕೊಂಡಿದ್ದ ಸತ್ಯವ್ರತನಿಗೆ, ಸುತ್ತುಮುತ್ತಲಿನ ಗಾಢಾಂಧಕಾರದಲ್ಲಿ, ದೂರದಲ್ಲಿ ಚಿಕ್ಕದೊಂದು ಬೆಳಕು, ಚುಕ್ಕೆಯಂತೆ ಕಾಣಿಸಿ, ಸಮೀಪಿಸುತ್ತಾ, ದೊಡ್ಡದಾಗುತ್ತಾ, ಬಂತು ಆ ನೌಕೆ.

ಕೂಡಲೇ ಸತ್ಯವ್ರತನು ಔಷಧಿಗಳನ್ನೂ, ನಾನಾ ಬಗೆಯ ಬೀಜರಾಶಿಗಳನ್ನೂ ಆ ನೌಕೆಗೆ ಸೇರಿಸಿ, ತಾನು ಆ ನೌಕೆಯೊಳಗೆ ಸೇರಿಕೊಂಡನು. ಕೂಡಲೇ ಆ ಉಳಿದಿದ್ದ ನೆಲವೂ ಮುಳುಗಿ ಹೋಯಿತು. ಸತ್ಯವ್ರತನು ನಾರಾಯಣ ಸ್ಮರಣೆ ಮಾಡುತ್ತಾ, ನೌಕೆಯಲ್ಲಿ ಪ್ರಯಾಣ ಮಾಡಿಕೊಂಡಿದ್ದನು. ಆ ನೌಕೆ

ಮಹಾಮತ್ಸ್ಯದ ತಲೆಯು ಕೊಂಬಿಗೆ ಸಿಕ್ಕಿಕೊಂಡಿತ್ತು. ನಕ್ಷತ್ರದಂತೆ ಹೊಳೆಯುವ ಆ ಕೊಂಬಿನ ಕೊನೆಯಲ್ಲಿ ಮಹಾಸರ್ಪವು ಹಗ್ಗದಂತೆ ಸುತ್ತಿಕೊಂಡು ನಾವೆಯನ್ನೂ ಸೇರಿಸಿ ಹಿಡಿದುಕೊಂಡಿತ್ತು. ಅದು ತನ್ನ ಹೆಡೆಯನ್ನು ಹಡಗಿನ ಹಾಯಿಯಂತೆಯೇ ಬಿಡಿಸಿಕೊಂಡಿತ್ತು. ಪ್ರಳಯ ಪ್ರಭಂಜನಕ್ಕೆ ತಕ್ಕಹಾಗೆ ಹೆಡೆಯನ್ನು ಓಲಾಡಿಸುತ್ತ, ಉಕ್ಕುಕ್ಕಿ ಏಳುವ ಬೀಳುವ ತೆರೆಗಳಿಂದ ಹಡಗಿಗೇನೂ ಆಗದಂತೆ ಹೆಡೆಯನ್ನು ಆಡಿಸಿ ಕಾಪಾಡಿಕೊಂಡಿತ್ತು. ಧ್ರುವ ತಾರೆಯನ್ನೇ ಗುರುತಾಗಿಟ್ಟುಕೊಂಡು ತೇಲಿಸುತ್ತಿತ್ತು.

ಸಮುದ್ರದ ಅಡಿಯಲ್ಲಿ ಕದ್ದುಕೊಂಡ ವೇದಗಳನ್ನು ಕಾದುಕೊಂಡೇ ಇದ್ದನು ಸೋಮಕಾಸುರ. ಅವನು ವೇದಗಳನ್ನು ಅಡಗಿಸಿಟ್ಟ ಬಂಡೆಗಳ ಸುತ್ತೂ ವಿರಾಮವಿಲ್ಲದೆ ಪ್ರದಕ್ಷಿಣೆ ಬರುತ್ತ ಕಟ್ಟೆಚ್ಚರದಿಂದ ಕಾವಲು ಕಾಯುತ್ತಿದ್ದನು. ಮಾಯಾವಿಯಾದ ವಿಷ್ಣು ಯಾವಾಗ ಯಾವ ರೂಪದಲ್ಲಿ ಬಂದು ಆ ವೇದಗಳನ್ನು ಕಿತ್ತುಕೊಂಡು ಹೋಗುವನೋ ಎಂದು ಅವನಿಗೆ ಕೆಟ್ಟ ಭಯ. ಆ ನಾಲ್ಕು ವೇದಗಳೂ ನಾಲ್ಕು ಶಿಶುಗಳ ರೂಪ ತಾಳಿ ಕೇವು ಕೇವೆಂದು ಆರ್ತನಾದ ಮಾಡ ತೊಡಗಿದುವು.

ಮತ್ಸ್ಯಾವತಾರವು ನೌಕೆಯನ್ನು ಸರ್ಪದ ವಶಕ್ಕೆ ಬಿಟ್ಟು ಕೊಟ್ಟು, ವೇದಗಳನ್ನು ಹುಡುಕುತ್ತಾ ಹೋಯಿತು. ವೇದ ಶಿಶುಗಳ ಆರ್ತನಾದದಿಂದ ಅಲ್ಲಿಗೇ ಬಂತು ಮಹಾಮತ್ಸ್ಯ.

ಅದನ್ನು ನೋಡಿ ಸೋಮಕಾಸುರನು, ಹೆದರುತ್ತಾ, ಮೊಂಡು ಧೈರ್ಯದಿಂದ ಮುಳ್ಳುಗದೆಯನ್ನೆತ್ತಿ ಅದನ್ನು ಹೊಡೆಯ ತೊಡಗಿದನು.

ಆಗ ವಿಷ್ಣು ನಡುಭಾಗದವರೆಗೆ ಮತ್ಸ್ಯವಾಗಿದ್ದು, ಚತುರ್ಬಾಹುಗಳೊಂದಿಗೆ ಅವತರಿಸಿದನು. ಆ ಮತ್ಸ್ಯಮೂರ್ತಿಗೂ ಸೋಮಕಾಸುರನಿಗೂ ಘೋರ ಸಂಗ್ರಾಮವು ನಡೆಯಿತು.



ಕಡೆಗೆ ಸೋಮಕಾಸುರನು ಸಮುದ್ರದ ತಳದಲ್ಲಿ ಓಡಿ ಹೋಗಲು ನೋಡಿದನು. ಆಗ ವಿಷ್ಣು ಅವನನ್ನು ಚಕ್ರಾಯುಧದಿಂದ ಚೂರುಚೂರು ಮಾಡಿದನು.

ಆ ಮೇಲೆ ವಿಷ್ಣು ಶಿಶುಗಳ ರೂಪದಲ್ಲಿರುವ ಚತುರ್ವೇದಗಳನ್ನು, ಒಂದೊಂದು ಕಂಕುಳಲ್ಲಿ ಎರಡೆರಡರಂತೆ ಎತ್ತಿಕೊಂಡು ನೀರಿನ ಮೇಲಕ್ಕೆ ಬಂದನು. ಆಗ ಆ ವೇದ ಶಿಶುಗಳು ತಾಯಿಯ ಕೈ ಸೇರಿದಂತೆ ಸಂತೋಷದಿಂದ ವಿಷ್ಣುವಿನ ಕಂಠದಲ್ಲಿರುವ ಶ್ರೀವತ್ಸ, ಕೌಸ್ತುಭ ಮಣಿಗಳನ್ನು ಪುಟ್ಟ ಕೈಗಳಲ್ಲಿ ಹಿಡಿದುಕೊಂಡು ಆಡುತ್ತ ಕೇಕೇ ಹಾಕಿ ನಗುತ್ತಿದ್ದುವು. ನಾಲ್ಕು ಶಿಶುಗಳೂ ಬಿಳುಪು, ಕೆಂಪು, ಹಳದಿ, ನೀಲ ವರ್ಣಗಳ ಕಾಂತಿಯಿಂದ ಬೆಳಗುತ್ತಿದ್ದುವು.

ವಿಷ್ಣುವಿನ ಮತ್ಸ್ಯಾವತಾರ ಮೂರ್ತಿಯನ್ನು ನೋಡಿ ಋಷಿಗಳೂ ಸತ್ಯವ್ರತನೂ ಪರಮಾನಂದಗೊಂಡು ಕೈಜೋಡಿಸಿ ನಮಸ್ಕಾರ ಮಾಡುತ್ತಾ ಸ್ತೋತ್ರಗೈದರು. ಈ ಸ್ತೋತ್ರಾರಾವ ಹೊರಡು



ತ್ರಿದ್ವಂತೆ ಅಂಧಕಾರಯುಗವು ಕ್ರಮಿಸುತ್ತಿರಲು, ನೂತನ ಕಲ್ಪದ ಉಷಃ ಕಾಲದ ಮುಂಬೆಳಕು ಮೂಡುತ್ತಾ, ಪ್ರಳಯ ಜಲವು ಶಾಂತವಾಗಿ ಕುಂದುತ್ತಾ, ಭೂಭಾಗವು ತೋರತೊಡಗಿತು. ಬ್ರಹ್ಮನು ಮೈಮುರಿದುಕೊಂಡು ಏಳುತ್ತಿರಲು, ಹೊಚ್ಚಹೊಸ ಕಲ್ಪವು ಪ್ರಾರಂಭವಾಗ ತೊಡಗಿತು.

ಬ್ರಹ್ಮನಿಗೆ ಹಗಲು ಎಷ್ಟು ಪ್ರಮಾಣದಲ್ಲಿದ್ದಿತೋ ರಾತ್ರಿಯೂ ಅಷ್ಟೇ ಪ್ರಯಾಣದಲ್ಲಿದ್ದಿತು. ಅವನ ನಿದ್ರಾಕಾಲವು ಪೂರ್ತಿಯಾಗಿ ಹಗಲು ಹುಟ್ಟುವುದಕ್ಕೆ ಮೊದಲೇ, ಸರಸ್ವತಿ ಎದ್ದು ವೀಣೆಯನ್ನು ಸರಿಪಡಿಸಿ ಕೊಂಡು ಉದಯಕಾಲಕ್ಕೆ ತಕ್ಕ ಭೂಪಾಳ ರಾಗವನ್ನು ಹೊರಡಿಸ ತೊಡಗಿದಳು. ಬ್ರಹ್ಮನು ಎದ್ದು ನಾಲ್ಕು ಮುಖಗಳಿಂದ ಕೆಳಗೆ, ಆಚೆಈಚೆ ನೋಡಿದನು. ಅವನ ಸರ್ವಾಧಾರವಾದ ವೇದಗಳು ಅಲ್ಲೆಲ್ಲಿಯೂ ಇಲ್ಲ! ವೇದಗಳನ್ನು ಕಾಣದೆ ದಿಗಿಲುಬಡೆದ ಮುಖಗಳನ್ನು ಎತ್ತಲಾಗದೆ ಬ್ರಹ್ಮನು ಚಿಂತಿಸಿಕೊಂಡಿರಲು. ಮತ್ಸ್ಯಾವತಾರದ ವಿಷ್ಣು ಅವನ ಮುಂದೆ ಬಂದು, ನಾಲ್ಕು ವೇದಗಳನ್ನೂ ಅವನಿಗೆ ಒಪ್ಪಿಸಿದನು.

ಆಗ ಬ್ರಹ್ಮನು ಮಹಾವಿಷ್ಣುವಿನ ಮತ್ಸ್ಯಾವತಾರ ವನ್ನು ತನ್ನ ಕಣ್ಣುಗಳಿಗೆ ಹಬ್ಬವಾಗುವಂತೆ ನೋಡುತ್ತ, ಕೈಗಳನ್ನು ಜೋಡಿಸಿ ನಾಲ್ಕು ಮುಖಗ ಳಿಂದಲೂ ಕೀರ್ತಿಸಿದನು.

"ಶ್ರೀಮನ್ನಾರಾಯಣಾ! ನಿನ್ನ ಮತ್ಸ್ಯಾವತಾರ ವನ್ನು ಧ್ಯಾನಿಸಿದವರಿಗೆ ಪ್ರಳಯದಂತಹ ಮಹಾ ವಿಪತ್ತುಗಳು ಬಾರದೆಯೇ ಹೋಗಲಿ. ಅಜ್ಞಾ ನಾಂಧಕಾರವು ತೊಲಗಲಿ." ಎಂದನು ಬ್ರಹ್ಮ.

ಹೀಗೆ ಮತ್ಸ್ಯಾವತಾರದ ಉದ್ದೇಶವು ಪೂರ್ತಿ ನೆರ ವೇರಿತು. ಸತ್ಯವ್ರತನು ವೈವಸ್ವತಮನುವಾಗಿ ಅವತರಿ ಸಿದನು. ಅವನಿಂದ ಭೂಭಾಗಗಳಲ್ಲಿ ಬಿದ್ದ ಬೀಜಗಳಿಂದ, ಔಷಧಿಗಳಿಂದ ಮತ್ತೆ ಭೂಮಿ ಹಸಿರಾಗ ತೊಡಗಿತು.

ವಿಷ್ಣು ಮತ್ಸ್ಯಾವತಾರವನ್ನು ಬಿಟ್ಟು ವೈಕುಂಠ ವನ್ನು ಸೇರಿದ ಮೇಲೆ ಬ್ರಹ್ಮನು ವೇದಗಳ ಸಹಾಯ ದಿಂದ ಸೃಷ್ಟಿಕಾರ್ಯ ಪ್ರಾರಂಭಿಸಿದನು. ಸತ್ಯವ್ರತನು ಈ ಹೊಸ ಕಲ್ಪಕ್ಕೆ ವಿವಸ್ವಂತ ನಾಮಕನಾಗಿ ಉದಯಿ ಸಿದ ಸೂರ್ಯನ ಪುತ್ರನಾಗಿ ಶ್ರಾರ್ಧದೇವನೆಂದೂ, ವೈವಸ್ವತನೆಂದೂ ಹೆಸರು ಪಡೆದು ಮನುವಾದನು.

ಸಪ್ತರ್ಷಿಗಳು ಆಕಾಶವನ್ನು ಸೇರಿ. ತಮ್ಮ ತಮ್ಮ ಸ್ಥಾನಗಳಲ್ಲಿದ್ದು, ಸಪ್ತರ್ಷಿಮಂಡಲವೆಂಬ ಹೆಸರಿನಿಂದ ಪ್ರಕಾಶಿಸುತ್ತ ಧ್ರುವನಿಗೆ ಪ್ರದಕ್ಷಿಣೆ ಬರುತ್ತಿದ್ದರು.

ಹೀಗೆ ಸೂತನು ಹೇಳುತ್ತಿರಲು, ಶೌನಕಾದಿ ಮುನಿಗಳು, "ಸೂತಮುನೀಂದ್ರಾ, ನಾವು ಆ ಧ್ರುವನ ಕಥೆಯ ಸ್ವಾರಸ್ಯವನ್ನು ತಿಳಿಯಬೇಕೆಂದಿದ್ದೇವೆ. ದಯ ವಿಟ್ಟು ಹೇಳಬೇಕು" ಎಂದು ಪ್ರಾರ್ಥಿಸಿದರು,

ಸೂತನು ಹೇಳ ತೊಡಗಿದನು:

ಈ ಮಹಾವಿಶ್ವದಲ್ಲಿ ಉನ್ನತೋನ್ನತವಾದ ಸ್ಥಾನವೇ ಧ್ರುವಮಂಡಲ. ಅದೇ ವಿಶ್ವಸ್ವರೂಪನಾದ ವಿಷ್ಣುವಿನ ತಲೆ ಇರುವ ಜಾಗವೂ ಆಗಿದೆ.



ಅಂತಹ ಅತ್ಯುನ್ನತ ಪದವಿಯನ್ನು ಹೊಂದಿದ ಧ್ರುವನು ಉತ್ತಾನಪಾದನೆಂಬ ರಾಜನಿಗೆ ಮಗನಾಗಿ ಹುಟ್ಟಿದವನು. ಧ್ರುವನ ತಾಯಿಯಾದ ಸುನೀತಿ ಉತ್ತಾನಪಾದರಾಜನ ಹಿರಿಯ ಹೆಂಡತಿ. ಸುರುಚಿ ಎಂಬುವಳು ಅವನ ಎರಡನೆಯ ಚಿಕ್ಕ ಹೆಂಡತಿ. ರಾಜನಿಗೆ ಸುರುಚಿಯ ಮೇಲೆಯೇ ಹೆಚ್ಚಿನ ಪ್ರೀತಿ.

ಒಂದು ದಿನ ಉತ್ತಾನಪಾದನು ಸುರುಚಿಯ ಮಗನಾದ ಉತ್ತಮನನ್ನು ತೊಡೆಯ ಮೇಲೆ ಕೂರಿಸಿಕೊಂಡು ಮುದ್ದು ಮಾಡುತ್ತಿದ್ದಾಗ, ಧ್ರುವನು ಅಲ್ಲಿಗೆ ಬಂದು, ತಾನು ಕೂಡಾ ತಂದೆಯ ತೊಡೆಯ ಮೇಲೆ ಕುಳಿತುಕೊಳ್ಳಬೇಕೆಂಬ ಬಾಲ್ಯ ಚಾಪಲ್ಯದ ಆಶೆಯಿಂದ ತಂದೆಯ ತೀರ ಹತ್ತಿರ ಬಂದು, ಪುಟ್ಟ ಪುಟ್ಟ ಕೈಗಳನ್ನು ಚಾಚಿದನು. ಸುರುಚಿಯೂ ಅವನ ಹತ್ತಿರವೇ ಕುಳಿತಿದ್ದಳು. ಅವಳಿಗೆ ಅಂಜಿ, ರಾಜನು ಧ್ರುವನನ್ನು ನೋಡಿಯೂ ನೋಡದವನಂತೆ ಸುಮ್ಮನಿದ್ದನು. ತಮ್ಮನನ್ನು ಕುಳ್ಳಿರಿಸಿದ ಹಾಗೆಯೇ ಅಪ್ಪನು ತನ್ನನ್ನು ಕೂಡಾ ಎತ್ತಿ ಕುಳ್ಳಿರಿಸಿಕೊಳ್ಳುವನೆಂದು ಆಶೆಪಟ್ಟ ಧ್ರುವನು ಮುಖ ಬಾಡಿಸಿಕೊಂಡನು. ಕಣ್ಣೀರು ತುಂಬಿತು. ಅವನ ಗಲ್ಲಗಳ ಮೇಲೆ ಕಂಬನಿ ಮುತ್ತುಗಳು ಹೊಳೆದವು.

ಅದನ್ನು ನೋಡಿ ಸುರುಚಿ ಕಿಟಕಿಟನೆ ನಕ್ಕು, "ಆ ಗತಿಗೇಡಿಯ ಹೊಟ್ಟೆಯಲ್ಲಿ ಹುಟ್ಟಿದವನೇ! ನೀನು ಎಷ್ಟು ತಪಸ್ಸು ಮಾಡಿದರೂ ನನ್ನ ಮಗನಿಗೆ ಸಮಾನನಾಗಿ ತೊಡೆಯ ಮೇಲೆ ಕುಳಿತುಕೊಳ್ಳುವ ಭಾಗ್ಯ ಬಾರದೋ ಹುಡುಗಾ! ನನ್ನ ಹೊಟ್ಟೆಯಲ್ಲಿ ಹುಟ್ಟಬೇಕಿತ್ತು, ಪಾಪ! ಹಾಗೆ ನನ್ನ ಹೊಟ್ಟೆಯಲ್ಲಿ ಹುಟ್ಟಿರುತ್ತಿದ್ದರೆ ಈ ಭಾಗ್ಯ ಬರುತ್ತಿತ್ತು. ಇನ್ನು ಈ ಜನ್ಮದಲ್ಲಿ ಇಲ್ಲ! ನೀನೇನೋ ಮಹಾಬಲ್ಲವನ ಹಾಗೆ ನಾರಾಯಣ ಸಂಕೀರ್ತನೆ ಮಾಡುತ್ತೀ. ಏನಾದರೂ ಪ್ರಯೋಜನ ಉಂಟೇ? ಬೇಕಾದರೆ ಹೋಗಿ ತಪಸ್ಸು ಮಾಡಿ ನಾರಾಯಣನನ್ನು ಮೆಚ್ಚಿಸಿ ಈ ಭಾಗ್ಯ ಕೊಡುತ್ತಾನೇನೋ ಕೇಳಿನೋಡು!" ಎಂದು ಅವಹೇಳನೆ ಮಾಡಿದಳು.

ಅವಳ ಮಾತುಗಳು ಧ್ರುವನ ಎಳೆಯ ಮನಸ್ಸಿಗೆ ಚೆನ್ನಾಗಿ ನಾಟಿ, ಹೃದಯ ಕುದಿಯ ತೊಡಗಿತು. ರೋಷವು ಉಕ್ಕತೊಡಗಿತು, ಕೊರಡೆ ತೆಗೆದುಕೊಂಡು ಸುರುಚಿಯನ್ನು ಛಡಛಡ ಹೊಡೆಯೋಣವೆನಿಸಿತು. ಕತ್ತಿಯಿಂದ ಸೀಳಬೇಕೆಂದು ತೋರಿತು. ಆಗ ಸುರುಚಿ ಮತ್ತೊಮ್ಮೆ, "ಹೋಗೋ! ದೇವಾಧಿದೇವ ನಾರಾಯಣನನ್ನು ನಂಬು. ತಪಸ್ಸು ಮಾಡು. ಸುಮ್ಮನೆ ಅಪ್ಪನ ತೊಡೆ ಏರಬೇಕೆಂದರೆ ಹೇಗೆ?" ಎಂದಳು. ಆ ಕ್ಷಣದಲ್ಲಿ ಧ್ರುವನಿಗೆ ಅವಳು ದಿವ್ಯ ಮಂತ್ರವನ್ನು ಉಪದೇಶಿಸಿದ ಗುರುವಿನಂತೆ ಕಂಡಳು. ಅಂತಹ ಮಹತ್ತರವಾದ ಉಪದೇಶಕ್ಕೆ ಪಾತ್ರನಾಗದಿದ್ದ ಉತ್ತಮನು ಅಭಾಗ್ಯವಂತ ಹೆಡ್ಡನ ಹಾಗೆ ಕಾಣಿಸಿದನು. ಉತ್ತಾನಪಾದ ಮಹಾರಾಜನು ಕತ್ತಲೆಯ ಬಲೆಯೊಳಗೆ ಸಿಕ್ಕಿಕೊಂಡು ತೊಳಲಾಡು



ತ್ತಿರುವ ಪಾಪದ ಜಿಂಕೆಯಂತೆ ಕಂಡನು ಧ್ರುವನಿಗೆ. ಗುರೂಪದೇಶ ಪಡೆದು ಹೊರಡುವ ಶಿಷ್ಯನ ಹಾಗೆ ಧ್ರುವನು ಸುರುಚಿಗೆ ಬಾಗಿ ನಮಸ್ಕಾರ ಮಾಡಿ ಅಲ್ಲಿಂದ ಹೊರಟನು. ಬಾಲಧ್ರುವನ ಆ ಚೇಷ್ಟೆಗಳನ್ನು ನೋಡಿ ಅರ್ಥಮಾಡಿಕೊಳ್ಳಲಾಗದೆ ಸುರುಚಿ ಬೆರಗಾಗಿ, "ಪಾಪ, ಒಳ್ಳೇ ಹುಡುಗನೇ ! ಬೈದರೂ ರಂಪ ತೋರಿಸದೆ, ನಮಸ್ಕಾರ ಮಾಡಿ ಹೋದ. ಮತ್ತೇನು ಮಾಡಿಯಾನು ! ನನ್ನ ಮುಂದೆ ಬಾಯಿ ತೆರೆಯುವ ಧೈರ್ಯ ಬರುವುದುಂಟೆ? ಅವನ ಅಮ್ಮನಿಗಾದರೂ ಬಂದೀತೇ ?" ಎಂದು ಹೇಳಿಕೊಂಡು ತನಗೆ ತಾನೇ ಉಬ್ಬುತ್ತಾ ವಾರೆ ನೋಟದಿಂದ ರಾಜನ ಮುಖ ನೋಡಿದಳು, ರಾಜನೂ ತನಗೆ ಹೆದರುವನೆಂಬುದನ್ನು ಸೂಚಿಸುವ ಹಾಗೆ !

ಇಷ್ಟರೊಳಗೆ ಈ ಸಂಗತಿ ದಾಸಿಯರಿಂದ ಸುನೀತಿಗೆ ಗೊತ್ತಾಗಿತ್ತು. ನೊಂದುಕೊಂಡಿದ್ದ ಅವಳ ಮುಂದೆ ಹೋಗಿ ನಿಂತ ಕಂದ ಧ್ರುವನನ್ನು ನೋಡಿ, ಅವಳ ದುಃಖವೂ ಉಕ್ಕಿ ಸೂಸಿತು. ದಳದಳ ಕಣ್ಣೀರಿಳಿಸುತ್ತ, "ಹೌದು ಕಂದಾ ! ದಾಸಿಗಿಂತಲೂ ಹೀನವಾಗಿ ಬದುಕಿಕೊಂಡಿರುವ ನನ್ನ ಹೊಟ್ಟೆಯಲ್ಲಿ ನೀನೇಕೆ ಹುಟ್ಟಬೇಕು ? ನಿನ್ನ ಸವತಿ ತಾಯಿ ಹೇಳಿದ ಮಾತು ತೀರ ಸತ್ಯ. ನಿನಗೂ ನನಗೂ ಆ ನಾರಾಯಣ ಮೂರ್ತಿಯ ಹೊರತು ಬೇರೆ ಗತಿ ಯಾರಿದ್ದಾರೆ ?" ಎಂದು ರೋದಿಸಿದಳು.

ಆಗ ಧ್ರುವನು ತಾನು ವೀರ ಕ್ಷತ್ರಿಯ ಕುಮಾರನೆಂಬುದನ್ನು ತೋರಿಸುವಂತೆ ಧೈರ್ಯದಲ್ಲಿ ನಿಂತು, "ಅಮ್ಮಾ, ನಾನು ತಪಸ್ಸು ಮಾಡಲು ಹೊರಟಿದ್ದೇನೆ. ಅದೇ ಸರಿ !" ಎಂದನು.

"ಏನೇನು ! ತಪಸ್ಸು ಮಾಡುವೆಯಾ ?" ಎಂದು ಸುನೀತಿ ದುಃಖವನ್ನು ನುಂಗಿ ಕಣ್ಣು ಒರೆಸಿಕೊಂಡು ಮಗನನ್ನು ಅಪ್ಪಿ, ತಲೆಯ ಮೇಲೆ ಕೈಯಿಟ್ಟು, "ಹಾಗೆಯೇ ಮಾಡು. ಮುಂದಿನ ಜನ್ಮದಲ್ಲಿ ಸುರುಚಿಯ ಹೊಟ್ಟೆಯಲ್ಲಿ ಹುಟ್ಟಬೇಕೆಂದು ವರ ಕೇಳಿಕೋ " ಎಂದಳು.

"ಹಾಗೆ ಹೇಳಬೇಡಮ್ಮಾ. ಮೂರು ಮಾತಿಗೂ ಹಾಗೆ ಮಾತ್ರ ಹೇಳಬೇಡ. ನಾನು ನಿನ್ನ ಮಗ. ಮತ್ತಾರಿಗೋ ಮಗನಾಗಿ ಹುಟ್ಟಬೇಕೆಂಬ ಆಸೆ ನನಗೆ ಏಕೆ ಬರುತ್ತೆ ? ನಮ್ಮನ್ನು ನಾವು ಕಡಿಮೆ ಮಾಡಿಕೊಳ್ಳಲೇಬಾರದು. ಅದು ಆತ್ಮಹತ್ಯೆ ಮಾಡಿಕೊಂಡ ಹಾಗೆ ! ನನ್ನನ್ನು ಹಡೆದ ನೀನು ಎಂತಹ ಭಾಗ್ಯವಂತೆ ಅನ್ನುವ ಹಾಗೆ, ಎಲ್ಲಾ ದಿಕ್ಕುಗಳಿಗೂ ನಾನೇ ದಿಕ್ಕಾಗಿರುವ ಹಾಗೆ ನಾರಾಯಣನನ್ನು ವರ ಕೇಳುತ್ತೇನೆ ಗೊತ್ತಾ ! ಧೈರ್ಯವಾಗಿರು ಅಮ್ಮಾ !" ಎಂದು ಹೇಳಿ ಧ್ರುವನು ಹೊರಟು ಹೋದನು.

ಅರಣ್ಯದ ಮಾರ್ಗ ಹಿಡಿದು ಹೋಗುತ್ತಿದ್ದ ಧ್ರುವನ ಮುಂದೆ ನಾರದನು ಬಂದು, "ಓಹೋ ಧ್ರುವಕುಮಾರಾ, ಯಾವುದೋ ಹೊಸ ಆಟ ಆಡಲಿಕ್ಕೆ ಹೊರಟ ಹಾಗಿದೆ, ಹೌದಾ ?" ಎಂದನು.

"ತಪಸ್ಸಿಗೆ ಹೋಗುತ್ತಿದ್ದೇನೆ ಸ್ವಾಮಿ. ಹರಸಿರಿ." ಎಂದು ಕೈಮುಗಿದನು ಧ್ರುವ.

"ತಪಸ್ಸು ಎಂಬ ಆಟ ಒಂದಿದೆಯೆಂದಾಯಿತು. ಬಹು ಚೆನ್ನಾಗಿ ಆಡಿಕೋ ಅಪ್ಪ" ಎಂದನು ನಾರದ.

"ಆಟ ಅಲ್ಲ ಸ್ವಾಮಿ. ನಿಜಕ್ಕೂ ತಪಸ್ಸು ಮಾಡಲು ಹೊರಟಿದ್ದೇನೆ" ಎಂದನು ಧ್ರುವ.

ಗೊತ್ತಾಯಿತು. ಈ ಸಣ್ಣ ವಿಷಯಕ್ಕೆ ತಪಸ್ಸು ಯಾಕೋ ? ನನ್ನೊಂದಿಗೆ ಬಾ. ನಿನ್ನ ತಂದೆ ನಿನ್ನನ್ನು ಯಾಕೆ ತೊಡೆಯ ಮೇಲೆ ಕುಳ್ಳಿರಿಸಿಕೊಳ್ಳುವುದಿಲ್ಲ, ನೋಡುತ್ತೇನೆ" ಎಂದನು ನಾರದ.

"ಅಂಥಾ ಹಟವಾವುದೂ ಈಗ ನನಗಿಲ್ಲ ಸ್ವಾಮಿ. ಅದೆಲ್ಲದಕ್ಕಿಂತಲೂ ಹಿರಿದಾದ ಶ್ರೀಮನ್ನಾರಾಯಣನ ಅನುಗ್ರಹವೇ ನನಗೆ ಬೇಕು. ಅದಕ್ಕೇ ತಪಸ್ಸು ಮಾಡಲು ಅರಣ್ಯಕ್ಕೆ ಹೊರಟಿದ್ದೇನೆ. ತಾಯಿಯ ಅಪ್ಪಣೆಯಾಗಿದೆ. ಕೋಪತಾಪ ಯಾವುದೂ ನನಗಿಲ್ಲ" ಎಂದನು ಧ್ರುವ.

ಧ್ರುವಬಾಲನ ಮನಸ್ಸಿನೊಳಗಿದ್ದ ಪ್ರೌಢತೆಯನ್ನು ಮುಗುಚಿ ಹಾಗೆ ಸುರುಚಿಯ ಮಾತು ಕೆಲಸ ಮಾಡಿತ್ತೆಂದು ನಾರದನಿಗೆ ಗೊತ್ತಾಯಿತು.

ಅವನು ತಲೆ ದೂಗುತ್ತಾ, "ಅಪ್ಪಾ, ತಪಸ್ಸು ಎಂದರೆ ಮಾತಾಡಿದ ಹಾಗಲ್ಲ. ಅರಣ್ಯದಲ್ಲಿ ಹುಲಿ ಸಿಂಹ ಮೊದಲಾದ ಕ್ರೂರಮೃಗಗಳಿರುತ್ತವೆ. ಬಿಸಿಲು ಮಳೆ ಚಳಿಗಳ ಕಾಟಗಳು ಎಷ್ಟೋ ಇವೆ. ನನ್ನ ಮಾತು ಕೇಳು. ಮನೆಗೆ ಹೋಗೋಣ" ಎಂದನು.

"ಸ್ವಾಮಿ, ನಾರದ ಮಹರ್ಷೀ ! ನಾನು ಕ್ಷತ್ರಿಯ ಕುಮಾರನೆಂಬುದನ್ನು ಮರೆಯಬೇಡಿ. ಪರಾಭವವನ್ನು ಸಹಿಸಿಕೊಂಡು ಬದುಕಿರುವವನಲ್ಲ. ನನಗೆ ಪುಕ್ಕಲು ಮಾತ್ರೆ ಪುಡಿ ಮಾಡಿ ಕೊಡುವಿರೇನು ? ಸರಿಯಾದ ದಾರಿ ಹೇಳಿರಯ್ಯಾ !" ಎಂದನು ಧ್ರುವ.

"ಅಪ್ಪಾ, ಧ್ರುವಕುಮಾರಾ ! ನಿನ್ನ ನಿಶ್ಚಯವನ್ನು ತಿಳಿದುಕೊಳ್ಳಲಿಕ್ಕೇ ಹೀಗೆಲ್ಲಾ ಹೇಳಿದೆ. ಒಂದು ಕಾಲದಲ್ಲಿ ನಾನು ಕೂಡಾ ದಿಕ್ಕುಗೆಟ್ಟ ಹುಡುಗನಾಗಿ ಎಷ್ಟೆಷ್ಟೋ ಅವಮಾನಗಳಿಗೂ, ಕಷ್ಟಗಳಿಗೂ ಸಿಕ್ಕಿ ಬಿದ್ದು ಕಾಡು ಸೇರಿ ತಪಸ್ಸು ಮಾಡಿದವನೇ. ನೀನು ಮಧುವನಕ್ಕೆ ಹೋಗಿ, ಓಂ ನಮೋ ನಾರಾಯಣಾಯ ಎಂಬ ಅಷ್ಟಾಕ್ಷರೀ ಮಂತ್ರವನ್ನು ಜಪಿಸುತ್ತ ತಪಸ್ಸು ಮಾಡು. ನಿನ್ನನ್ನು ಮನಃಪೂರ್ವಕವಾಗಿ ಆಶೀರ್ವದಿಸುತ್ತೇನೆ. ಕೃತಾರ್ಥನಾಗುವಿಯಪ್ಪಾ !" ಎಂದನು ನಾರದ.

ಹೀಗೆ ಸೂತನು ಹೇಳಲು, ಮುನಿಗಳು, "ಸೂತ ಮುನೀಂದ್ರಾ, ನಾರದನು ಹಾಗೆಲ್ಲಾ ಕಷ್ಟಪಡಲು ಏನಾಯಿತು ? ಆ ನಾರದನ ವೃತ್ತಾಂತವನ್ನು ಕೇಳಬೇಕೆಂದು ನಮಗೆಲ್ಲಾ ಕುತೂಹಲವಾಗಿದೆ" ಎಂದು ಕೇಳಿಕೊಂಡರು.






**ಸೂ**ತಪುರಾಣಿಕನು ಶೌನಕಾದಿ ಮುನಿಗಳಿಗೆ ನಾರದನ ಪೂರ್ವೋತ್ತರಗಳನ್ನು ಕುರಿತು ಹೇಳ ಲಾರಂಭಿಸಿದನು.

ಪ್ರಾರಂಭದ ಜನ್ಮದಲ್ಲಿ ನಾರದನು ಒಬ್ಬ ದಾಸಿಯ ಮಗನಾಗಿ ಜನ್ಮವೆತ್ತಿದ್ದನು. ಆ ದಾಸಿ ಒಬ್ಬ ಭಾಗವತೋತ್ತಮನ ಮನೆಯಲ್ಲಿ ಚಾಕರಿ ಮಾಡಿಕೊಂಡಿದ್ದಳು.

ಆ ಮನೆಗೆ ಸದಾಕಾಲವೂ ಮುನಿಗಳೂ ಜ್ಞಾನಿಗಳೂ ಬರುತ್ತಾ ಇದ್ದು, ಗೌರವಾದರಪೂರ್ವಕವಾದ ಅತಿಥಿ ಸತ್ಕಾರಗಳನ್ನು ಹೊಂದುತ್ತಾ ಇರುವರು. ಹುಡುಗನಾದ ನಾರದನು ಅವರಿಗೆ ಆಗತ್ಯವಿರುವಾಗ ಲೆಲ್ಲಾ ನೀರು ತಂದುಕೊಡುತ್ತಾ, ಸೇವೆ ಸಪರ್ಯೆ ಮಾಡುತ್ತಾ, ಅವರು ಮಾತಾಡಿಕೊಳ್ಳುತ್ತಿರುವ ದೊಡ್ಡ ವಿಷಯಗಳನ್ನೂ, ವಿಷ್ಣು ಮಹಿಮೆಗಳನ್ನೂ ಆಸ್ಥೆಯಿಂದ ಆಲಿಸುತ್ತಾ ತಾನೂ ಸಾಕಷ್ಟು ಜ್ಞಾನ ಗಳಿಸಿಕೊಳ್ಳುತ್ತಾ ಇದ್ದನು. ನೀರು ತಂದುಕೊಡುವ ಆ ಹುಡುಗನನ್ನು "ನಾರದ" ಎಂದು ಹೆಸರಿಟ್ಟು, "ನಾರದಾ, ನಾರದಾ" ಎಂದು ಕರೆಯುತ್ತಿದ್ದರು. ಹಾಗಿರುವಾಗ ಒಂದುದಿನ ಅವನ ತಾಯಿ ಸರ್ಪ ದಂಶನಕ್ಕೊಳಗಾಗಿ ಸತ್ತುಹೋದಳು.

ಆ ಹುಡುಗನ ತಂದೆ ಯಾರೋ ಎಲ್ಲಿಗೆ ಹೋದನೋ ಯಾರಿಗೂ ತಿಳಿಯದು. ಅವರ ಜತೆಗಾರರಾದ ಹುಡುಗರು ನಾರದನನ್ನು ದಾಸೀಪುತ್ರನೆನ್ನುತ್ತಿದ್ದರು. ಕೆಲವರು "ದಿಕ್ಕಿಲ್ಲದ ಪರದೇಶಿ ಹುಡುಗ" ಎನ್ನುತ್ತಿದ್ದರು.

ಕಾಲಕ್ರಮದಲ್ಲಿ ಆ ಮನೆಯ ಯಜಮಾನನಾದ ಭಾಗವತೋತ್ತಮನು ಕಾಲಗತಿಯನ್ನು ಹೊಂದಿದನು. ಆಗಿನಿಂದ ನಾರದನು ನಿರಾಶ್ರಿತನಾಗಿ ತಿರುಗುತ್ತ, ಹಸಿವಿನಿಂದ ಯಾವ ಮನೆಯ ಮುಂದಾದರೂ ದೀನನಾಗಿ ನಿಂತರೆ, ಕಳ್ಳನನ್ನು ನೋಡುವಂತೆ ನೋಡಿ, ಅವನನ್ನು ಅಲ್ಲಿದ್ದವರು, ಮಹಾಪಾಪಿ ಎಂದು ನಿಂದಿಸುತ್ತಿದ್ದರು.

ನಾರದನೊಬ್ಬ ಪರಮ ಸಾಧುವಾಗಿರುವುದನ್ನು ನೋಡಿ, ಪುಂಡ ಹುಡುಗರು ಕಲ್ಲು ಬಿಸುಟು ಓಡಿಸಿ,

೩. ಧ್ರುವನಾರಾಯಣಾವತಾರ



ಓಡುವವನನ್ನು ನೋಡಿ ನಗುತ್ತ ಆನಂದಿಸುವರು. "ನಾನು ಈ ಮನುಷ್ಯರಲ್ಲಿ ಏಕೆ ಹುಟ್ಟಿದೆನು ? ನಾನು ಏನು ತಪ್ಪುಮಾಡಿದೆನೆಂದು ಎಲ್ಲರೂ ನನ್ನನ್ನು ಇಷ್ಟು ಅನ್ಯಾಯವಾಗಿ ನೋಡು ತ್ತಿದ್ದಾರೆ ? ಕ್ರಿಮಿ ಕೀಟಗಳೂ, ಕಾಡಿನಲ್ಲಿ ಮೃಗ ಪಕ್ಷಿಗಳೂ ಸಂತೋಷವಾಗಿ ಬದುಕಿಕೊಂಡಿವೆ. ಮನುಷ್ಯನಾದ ನನಗೆ ಮನುಷ್ಯರೊಳಗೇ ಇಂಥ ದುರ್ಗತಿ !" ಎಂದು ಹಳಿದುಕೊಳ್ಳುತ್ತ ನಾರದನು ಊರುಕೇರಿಗಳನ್ನು ಬಿಟ್ಟು ಅರಣ್ಯದ ದಾರಿ ಹಿಡಿದನು. ಆಗ ಅತನಿಗೆ ಮುನಿಗಳೂ, ಜ್ಞಾನಿ ಗಳೂ ಹೇಳಿದ ಮಾತುಗಳು ನೆನಪಿಗೆ ಬಂದುವು.

"ನಾನೇಕೆ ತಪಸ್ಸು ಮಾಡಬಾರದು ? ಶ್ರೇಷ್ಠವಾದ ದೇವಜನ್ಮವನ್ನೇ ಪಡೆಯಬೇಕು. ತಪಸ್ಸಿನಿಂದಲೇ ಅದು ಸಾಧ್ಯವಾಗಬೇಕು." ಹೀಗೆಂದುಕೊಂಡು ನಾರದನು ತಪಸ್ಸು ಮಾಡಲು ತೊಡಗಿದನು.

"ದಿಕ್ಕಿಲ್ಲದವರಿಗೆ ಯಾವನು ದಿಕ್ಕಾಗಿರುವನೋ, ಈ ಲೋಕಗಳಿಗೆಲ್ಲಾ ಯಾವನು ತಂದೆಯಾಗಿರು ವನೋ, ಅವನೇ ನನಗೆ ಸರ್ವಸ್ವವೂ ಆಗಿರಲಿ. ಎಲ್ಲಾ ಅವನ ಇಷ್ಟ ! ನಾನೇನೂ ಅರಿಯೆನು" ಎಂದುಕೊಂಡು ಕಾಲಮಾನದ ಜ್ಞಾನವನ್ನೂ ಮರೆತು ಘೋರವಾದ ತಪಸ್ಸು ಮಾಡಿದನು. ಅವನನ್ನು ದೊಡ್ಡ ತೇಜಸ್ಸು ಆವರಿಸಿಕೊಂಡಿತು.

ಆ ಬಗೆಯ ಜ್ಯೋತಿಯ ರೂಪದಲ್ಲಿ ಪ್ರಸನ್ನ ನಾದ ವಿಷ್ಣು "ವತ್ಸಾ, ನಾರದಾ. ನೀನು ನನ್ನಲ್ಲಿ ಸೇರಿ ಹೋಗಿರುವೆ. ಇನ್ನು ನೀನು ಬ್ರಹ್ಮನ ಮಾನಸಪುತ್ರನಾಗಿ ಹುಟ್ಟುವಿ. ನಿನ್ನಲ್ಲಿ ನನ್ನ ಅಂಶವು ಸ್ಥಾಯಿಯಾಗಿರುತ್ತದೆ. ನೀನು ಚಿರಂಜೀವಿಯಾಗಿ, ತ್ರಿಕಾಲವೇದಿಯಾಗಿ ತ್ರಿಲೋಕಸಂಚಾರಿಯಾಗಿ ನನ್ನನ್ನು ಕೀರ್ತಿಸಿಕೊಂಡಿರುವುದರಲ್ಲೇ ಆನಂದ ಕಾಣುವಿ" ಎಂದು ವರವಿತ್ತು ಅನುಗ್ರಹಿಸಿದನು. ಹಾಗೆಯೇ ನಾರದನು ವಿಷ್ಣುವಿನ ಅಂಶ ದೊಂದಿಗೆ, ಬ್ರಹ್ಮನ ಮಾನಸಪುತ್ರನಾಗಿ ಜನಿಸಿ, ದೇವಮುನಿಯೆಂದು ಪೂಜಿಸಲ್ಪಡುವನು. ವಿಷ್ಣುವಿನ ಲೀಲಾವತಾರಗಳಲ್ಲಿ ನಾರದನ ಅವತಾರವೂ ಒಂದೆಂದು ಹೇಳಲ್ಪಡುತ್ತದೆ.

ಅಂತಹ ನಾರದನಿಂದ ಉಪದೇಶ ಪಡೆದ ಧ್ರುವನು, ಬೇಗಬೇಗನೆ ತಪಸ್ಸಿಗೆ ಹೋಗುತ್ತಿರು ವಾಗ, "ಅಣ್ಣಾ, ನಿಲ್ಲು ನಿಲ್ಲು ! ಅರಣ್ಯಕ್ಕೆ ಹೋಗ ಬೇಡ !" ಎಂದು ಕೂಗಿಕೊಂಡು ಉತ್ತಮನು ಅಳುತ್ತಾ ಓಡಿಬಂದು ಧ್ರುವನಿಗೆ ಅಡ್ಡನಿಂತು, ಕೈಗಳನ್ನು ಚಾಚಿ, "ಅಣ್ಣಾ, ನೀನು ಕಾಡಿಗೆ ಹೋಗಿಬಿಟ್ಟರೆ ನಾನು ಯಾರೊಂದಿಗೆ ಆಡಲಿ ? ಯಾರೊಂದಿಗೆ ಸೇರಿ ಹರಿಭಜನೆ ಮಾಡಲಿ ? ನನ್ನ ಒಡನಾಡಿಯಾಗಿ ನಿನ್ನಂತಹ ಅಣ್ಣ ಬೇರೆಯಾರಿ ದ್ದಾರೆ ? ನನ್ನ ಅಮ್ಮ ನಿನ್ನನ್ನು ಹೀಯಾಳಿಸಿ ಮಾತಾಡಿದಳೆಂದು, ನನ್ನ ಮೇಲೆ ಯಾಕೆ ಕೋಪ

ಅಣ್ಣಾ ? ಹೋಗಬೇಡ, ಹಿಂದಿರುಗು ಅಣ್ಣಾ" ಎಂದು ಧಾರೆಧಾರೆಯಾಗಿ ಕಣ್ಣೀರು ಸುರಿಸಿದನು.

ಧ್ರುವನು ಉತ್ತಮನನ್ನು ಆಲಿಂಗಿಸಿ, ಬೆನ್ನುತಟ್ಟಿ "ತಮ್ಮಾ, ನಿನ್ನ ಅಮ್ಮ ನನ್ನನ್ನು ಹೀಯಾಳಿಸಿದ್ದಲ್ಲ, ಜ್ಞಾನಬೋಧೆ ಮಾಡಿದಳು. ನನ್ನ ಅಮ್ಮ ಕೂಡಾ ದೊಡ್ಡವಳೆಂದು ಅನ್ನಿಸಬೇಡವೇ ನಾನು ? ಅದಕ್ಕೇ ಹೋಗುತ್ತಿದ್ದೇನೆ. ಸ್ವಲ್ಪ ದಿನಗಳಲ್ಲಿ ನಿನಗೆಲ್ಲಾ ಸರಿಯಾಗುತ್ತದೆ" ಎಂದು ಸಮಾಧಾನ ಹೇಳಿದನು.

"ಹಾಗಾದರೆ ನಾನೂ ನಿನ್ನೊಂದಿಗೆ ಕಾಡಿಗೆ ಬರುತ್ತೇನೆ. ನೀನು ತಪಸ್ಸು ಮಾಡುವಾಗ ನಾನು ನಿನಗೆ ಅದೂ ಇದೂ ತಂದುಕೊಟ್ಟು ಹತ್ತಿರವೇ ಇರುತ್ತೇನೆ" ಎಂದನು ಉತ್ತಮ.

"ಹಾಗೆ ಮಾಡಿದರೆ ನಿನ್ನ ಅಮ್ಮ ಅಳುತ್ತಾ ಇರುತ್ತಾಳೆ. ನಿನ್ನ ಅಣ್ಣ ನಾನು ಹೇಳುವುದನ್ನು ಕೇಳು. ಹಿಂದೆ ಹೋಗಪ್ಪ" ಎಂದನು ಧ್ರುವ.

ಆ ಮಾತು ಕೇಳಿ ಉತ್ತಮನು ಅಲ್ಲೇ ಕುಳಿತು ಅಳತೊಡಗಿದನು. ಅವನ ಹಿಂದೆಯೇ ಬಂದ ಸುರುಚಿ ಅವನನ್ನು ಎತ್ತಿಕೊಳ್ಳಲು ಪ್ರಯತ್ನಿಸುವಾಗ ಉತ್ತಮನು, "ನೀನು ನನ್ನನ್ನು ಮುಟ್ಟಬೇಡಮ್ಮ. ನಿನ್ನಿಂದಾಗಿಯೇ ಅಣ್ಣ ಕಾಡಿಗೆ ಹೋಗುತ್ತಿದ್ದಾನೆ" ಎಂದನು.

ಸುರುಚಿ ನಾಚಿಕೆಯಿಂದ ತಲೆತಗ್ಗಿಸಿ, "ನಾನೊಬ್ಬಳು ಮಹಾ ಪಾಪಿ ! ಎಲ್ಲಾ ನನ್ನಿಂದಲೇ ನಡೆಯಿತು" ಎಂದು ಪಶ್ಚಾತ್ತಾಪಪಟ್ಟಳು. ಆಗ ಉತ್ತಾನಪಾದ ರಾಜನು, "ಧ್ರುವಾ ! ಧ್ರುವಾ ! ನಿಲ್ಲಪ್ಪಾ ನಿಲ್ಲು. ಇದೆಲ್ಲಾ ನನ್ನ ಮಂದಬುದ್ಧಿಯಿಂದಲೇ ನಡೆಯಿತು. ನನ್ನ ಸಿಂಹಾಸನವೂ ನಿನ್ನದೇ. ಬಾ ಅಪ್ಪಾ, ಬಾರೋ" ಎಂದು ಗಟ್ಟಿಯಾಗಿ ಕೂಗಿ ಕರೆಯುತ್ತಾ ಅಲ್ಲಿಗೆ ಬಂದನು. ಧ್ರುವನು ಹಿಂದಿರುಗಿ ನೋಡದೆ ವೇಗವಾಗಿ ಹೋಗುತ್ತಲೇ ಇದ್ದನು.



ಉತ್ತಾನಪಾದನ ಹಿಂದೆಯೇ ಬರುತ್ತಿದ್ದ ಸುನೀತಿಯನ್ನು ನೋಡಿ, ನಾರದನು ಅವಳ ಮುಂದೆ ಕಾಣಿಸಿ, "ಅಮ್ಮಾ, ನೀನು ರತ್ನಗರ್ಭದವಳು. ನಿನ್ನ ಕುಮಾರನನ್ನು ಕುರಿತು ಏನೂ ಚಿಂತೆ ಪಡಬೇಡ. ಸಾಕ್ಷಾತ್ ನಾರಾಯಣನೇ ಅವನಿಗೆ ರಕ್ಷಕನಾಗಿರುವನು" ಎಂದು ಹೇಳಿ, ಉತ್ತಾನಪಾದನನ್ನು ನೋಡಿ, "ರಾಜಾ, ನೀನೂ ಚಿಂತಿಸಬೇಕಾಗಿಲ್ಲ. ಧ್ರುವನು ಧ್ರುವನೇ ! ಹಿಂದಿರುಗಿ ಬರುವವನಲ್ಲ. ಇದು ನಮಗೆಲ್ಲರಿಗೂ ಸಂತೋಷದಾಯಕವಾದ ಸಮಯ. ನಿನಗೆ ತಂದೆಯೂ, ಧ್ರುವನಿಗೆ ತಾತನೂ ಆದ ಸ್ವಾಯಂಭು ಮನುವಿನ ವಂಶಕ್ಕೆ ಧ್ರುವನು ಎಣೆಯಿಲ್ಲದ ಕೀರ್ತಿ ತರುತ್ತಾನೆ. ಇದಕ್ಕೆ ಯಾರಿಂದಲೂ ಏನು ಮಾಡಲೂ ಸಾಧ್ಯವಿಲ್ಲ. ಎಲ್ಲವೂ ಆ ನಾರಾಯಣನ ಸಂಕಲ್ಪವೇ" ಎಂದು ಹೇಳಿ ಎಲ್ಲರನ್ನೂ ಶಾಂತಪಡಿಸಿದನು. ಧ್ರುವನು ನಾರದನು ತೋರಿಸಿದ ದಾರಿಯಿಂದ



ಮಧುವನಕ್ಕೆ ಹೋಗಿ "ಓಂ ನಮೋನಾರಾಯಣಾಯ" ಎಂಬ ಅಷ್ಟಾಕ್ಷರಿಯನ್ನು ಜಪಿಸುತ್ತ ತಪಸ್ಸು ಮಾಡಲು ತೊಡಗಿದನು. ಯಮುನಾನದಿ ಶಾಂತಾರಾವದ ಶ್ರುತಿ ತೆಗೆದು ಪ್ರವಹಿಸುತ್ತಿರಲು, ಕ್ರೂರ ಮೃಗಗಳೆಲ್ಲ ಆಪ್ತಮಿತ್ರರಂತೆ ಧ್ರುವನ ಸುತ್ತಲೂ ತಿರುಗಿಕೊಂಡಿರಲು, ಧ್ರುವನ ತಪಸ್ಸು ತೀವ್ರವಾಗುತ್ತ ಆಗುತ್ತ ಮೂರು ಲೋಕಗಳನ್ನು ಗಡಗಡ ನಡುಗಿಸಲು ತೊಡಗಿತು.

ಯಾರು ಎಲ್ಲಿ ತಪಸ್ಸು ಮಾಡುತ್ತಿದ್ದರೂ, ಇಂದ್ರಪದವಿಯ ಆಶೆಗಾಗಿಯೇ ತಪಸ್ಸು ಮಾಡುವರೆಂದು ಹೆದರುವ ಇಂದ್ರನು, ಧ್ರುವನ ತಪಸ್ಸನ್ನು ಭಂಗಪಡಿಸಲು, ಭೀತಿ ಹುಟ್ಟಿಸುವ ಅನೇಕ ಇಂದ್ರಜಾಲಗಳನ್ನು ಮಾಡಿಸಿದನು. ತನ್ನ ವಜ್ರಾಯುಧವನ್ನು ಝಳಪಿಸಿ ಗುಡುಗುಸಿಡಿಲು ಮಿಂಚುಗಳೊಂದಿಗೆ ಕಲ್ಮಳೆ ಸುರಿಸಿದನು. ಅವನ ಭಯ ಬೀಭತ್ಸಗಳಾವುದಕ್ಕೂ ಧ್ರುವನು ಕದಲಲಿಲ್ಲ. ವಿಷ್ಣುಚಕ್ರವು ಧ್ರುವನ ಸುತ್ತಲೂ ತಿರುಗುತ್ತ, ಎಲ್ಲವನ್ನೂ ದೂರದೂರ ಓಡಿಸಿಬಿಟ್ಟಿತು.

ಆಗ ಇನ್ನೇನು ಗತಿಯೆಂದು ಚಿಂತಿಸುವ ಇಂದ್ರನನ್ನು ನೋಡಿ ನಾರದನು "ದೇವೇಂದ್ರಾ, ಧ್ರುವನನ್ನು ಸಾಮಾನ್ಯ ಬಾಲಕನೆಂದು ಕೊಳ್ಳಬೇಡ. ಅವನನ್ನು ಏನು ಮಾಡಲಿಕ್ಕೂ ನಿನ್ನಿಂದ ಸಾಧ್ಯವಿಲ್ಲ. ನಿನ್ನ ಚಿಂತೆಗೂ ಅರ್ಥವಿಲ್ಲ. ಇಂದ್ರಪದವಿ ಅವನಿಗೆ ಹುಲ್ಲುಕಡ್ಡಿಯ ಸಮಾನ! ಸುಮ್ಮನಿರು" ಎಂದು ಬುದ್ಧಿ ಹೇಳಿದನು.

ಕಡೆಗೆ ಒಂದಾನೊಂದು ಶುಭದಿನ ಧ್ರುವನ ತಪಸ್ಸಿಗೆ ಮೆಚ್ಚಿ ವಿಷ್ಣು ಪ್ರತ್ಯಕ್ಷನಾದನು. ಧ್ರುವನು ವಿಷ್ಣುವಿನ ದಿವ್ಯಪಾದಗಳನ್ನು ಸುತ್ತಿ ಹಿಡಿದು ತದೇಕ ದೃಷ್ಟಿಯಿಂದ ವಿಷ್ಣುವಿನ ಮುಖ ಮಂಡಲವನ್ನು ನೋಡುತ್ತಾ ಆತ್ಮಾನಂದದಿಂದ ಬಾಯಿಯಿಂದ ಮಾತೇ ಹೊರಡದೆ ಮೂಕನಾಗಿದ್ದುಬಿಟ್ಟನು. "ನಿನ್ನನ್ನು ಬಾಯಿ ತುಂಬಾ ಸ್ತೋತ್ರ ಮಾಡಬೇಕೆಂದಿದೆ. ನಾನು ಬಾಲಕನು. ಏನೂ ತಿಳಿಯದವನು. ಸ್ತೋತ್ರಪಾಠಗಳಾವುದೂ ತಿಳಿಯದವನು" ಎಂದು ಮನಸ್ಸಿನಲ್ಲಿ ಅಂದುಕೊಳ್ಳುತ್ತಾ ಆನಂದಬಾಷ್ಪ ಸುರಿಸುತ್ತಿದ್ದನು.

ವಿಷ್ಣು ತನ್ನ ಶಂಖವನ್ನು ಧ್ರುವನ ಕಪೋಲದ ಮೇಲೆ ತಾಗಿಸಿದನು. ಮರುಕ್ಷಣದಲ್ಲಿ ಧ್ರುವನ ತಲೆಯೊಳಗೆ ವೇದವೇದಾಂಗಗಳ ಸಾರವೆಲ್ಲಾ ತುಂಬಿತು. ಅಸ್ಖಲಿತವಾಣಿಯಿಂದ ಧಾರಾವಾಹಿಯಾಗಿ ಹೊರಟ ದಿವ್ಯ ಸ್ತೋತ್ರಧಾರೆಯಿಂದ ವಿಷ್ಣುಪಾದವನ್ನು ಅಭಿಷೇಕ ಮಾಡಿದನು.

ವಿಷ್ಣು ಮಂದಹಾಸ ಬಿಂಬಿಸುತ್ತ "ಧ್ರುವಾ, ನಿನಗೆ ಏನು ಬೇಕು, ಕೇಳು" ಎಂದನು.

"ಓ ಪರಮಪುರುಷಾ! ಪದ್ಮವನ್ನು ಅಂಟಿಕೊಂಡಿರುವ ತುಂಬಿಯ ಹಾಗೆ ಸದಾ ನಿನ್ನ ಮಧುರ ಮಂದಹಾಸ ವದನ ಕಮಲವನ್ನು ನೋಡುತ್ತಾ

ಇರಬೇಕೆಂಬುದೊಂದರ ಹೊರತು, ನನಗೆ ಬೇರೆ ಯಾವ ಕೋರಿಕೆಯೂ ಇಲ್ಲ" ಎಂದನು ಧ್ರುವ.

"ಹಾಗೆಯೇ ಇರುವಿಯಂತೆ ಕಂದಾ. ಪ್ರಸ್ತುತ ನಿನ್ನ ರಾಜ್ಯಕ್ಕೆ ಹೋಗಿ ಕರ್ತವ್ಯಧರ್ಮದಂತೆ ರಾಜ್ಯಪಾಲನೆ ನಿರ್ವಹಿಸು. ಆಮೇಲೆ ನೀನು ನನ್ನ ರೂಪವಾದ ವಿಶ್ವದ ಶಿರೋಭಾಗದಲ್ಲಿರುವ ಧ್ರುವ ಪದವನ್ನು ಸೇರುವಿ. ಕಲ್ಪಾಂತರಗಳು ಗತಿಸಿಕೊಂಡಿದ್ದರೂ ಕದಲದಿರುವ ಅಚಲ ಪದವನ್ನು ಅಲಂಕರಿಸಿ ಬೆಳಗಿಕೊಂಡಿರುವಿ" ಎಂದು ಹೇಳಿ ವಿಷ್ಣು ಅಂತರ್ಧಾನನಾದನು.

ಧ್ರುವನನ್ನು ಅನುಗ್ರಹಿಸಿದ ವಿಷ್ಣುವಿನ ಜ್ಯೋತಿರ್ಮಯವಾದ ಅವತಾರವು ಧ್ರುವ ನಾರಾಯಣಾವತಾರವೆಂದು ಹೇಳಲ್ಪಡುತ್ತದೆ.

ತಪಃಸಿದ್ಧಿಯಾದ ಮೇಲೆ ಧ್ರುವನು ತನ್ನ ಮಾಹಿಷ್ಮತೀಪುರಕ್ಕೆ ಹಿಂದಿರುಗಿ ಬಂದನು. ಉತ್ತಾನಪಾದ ರಾಜನು ಸರ್ವಸಮರ್ಥನಾದ ಧ್ರುವನಿಗೆ ಪಟ್ಟಾಭಿಷೇಕ ಮಾಡಿ, ತಪಸ್ಸು ಮಾಡಲು ಅರಣ್ಯಕ್ಕೆ ಹೊರಟುಹೋದನು. ಧ್ರುವನು ಬಹಳ ಚೆನ್ನಾಗಿ ರಾಜ್ಯಪಾಲನೆ ಮಾಡಿಕೊಂಡಿದ್ದನು.

ಒಂದುಸಾರಿ ಧ್ರುವನ ಅಜ್ಞೆಯ ಮೇರೆಗೆ ಉತ್ತಮನು, ವನ್ಯ ಮೃಗಗಳ ಹಾವಳಿಯಿಂದ ಪ್ರಜೆಗಳನ್ನು ರಕ್ಷಿಸಲು ಅರಣ್ಯಕ್ಕೆ ಬೇಟೆಯಾಡಲು ಹೋದನು. ಆಗ ಹಿಮಾಲಯ ಪರ್ವತ ಪ್ರಾಂತದ ಅರಣ್ಯದಲ್ಲಿ ದುಷ್ಟರಾದ ಯಕ್ಷರು ಅವನ ಮೇಲೆ ಬಿದ್ದು ಅವನನ್ನು ಕೊಂದುಬಿಟ್ಟರು.

ಅದನ್ನು ಕೇಳಿ ಸುರುಚಿ ಪುತ್ರಶೋಕವನ್ನು ತಾಳಲಾಗದೆ, ರೋದಿಸುತ್ತಾ ಅರಣ್ಯಕ್ಕೆ ಹೋಗಿ, ಅಲ್ಲಿ ಸುತ್ತಲೂ ಹುಟ್ಟಿಕೊಂಡ ದೊಡ್ಡ ಕಾಡುಕಿಚ್ಚಿನಲ್ಲಿ ಸಿಕ್ಕಿಕೊಂಡು ಸುಟ್ಟುಹೋದಳು.

ತಮ್ಮನನ್ನು ಅನ್ಯಾಯವಾಗಿ ಕೊಂದ ಯಕ್ಷರ ಮೇಲೆ ಧ್ರುವನಿಗೆ ಕೋಪ ಬಂದಿತು. ಅವನು



ಯಕ್ಷರನ್ನು ನಿರ್ಮೂಲಿಸಲಿಕ್ಕಾಗಿ ಯಕ್ಷರ ನಗರವಾದ ಅಲಕಾಪುರವನ್ನು ಮುತ್ತಿಗೆ ಹಾಕಿದನು. ಮಾಯಾವಿಗಳಾದ ಯಕ್ಷರು ಧ್ರುವನ ಮೇಲೆ ಕ್ಷುದ್ರವಾದ ಎಷ್ಟೋ ಮಾಯಾಜಾಲಗಳನ್ನು ಪ್ರಯೋಗಿಸಿದರು. ಧ್ರುವನು ನಾರಾಯಣಾಸ್ತ್ರದಿಂದ ಅವರ ಎಲ್ಲಾ ಮಾಯಾಜಾಲಗಳನ್ನೂ ಹರಿದು ಬಿಸುಟು, ವಿಜೃಂಭಿಸಿದನು.

ಕಟ್ಟಕಡೆಗೆ ಕುಬೇರನು ಧ್ರುವನಿಗೆ ಶರಣಾಗತನಾಗಿ, ಸಮಾಧಾನಪಡಿಸಿ ಸ್ನೇಹಮಾಡಿಕೊಂಡು, ಹೇರಳ ಸಂಪದಗಳನ್ನು ಕೊಟ್ಟು ಕಳುಹಿಸಿದನು.

ಧ್ರುವನು ಅನೇಕ ಕುಮಾರರಿಗೆ ತಂದೆಯಾದನು. ಆದರ್ಶರೀತಿಯಲ್ಲಿ ರಾಜ್ಯಪಾಲನೆಯನ್ನು ನಿರ್ವಹಿಸಿ, ಸ್ವಾಯಂಭೂಮನು ವಂಶಕ್ಕೆ ಉತ್ತಮವಾದ ಕೀರ್ತಿಯನ್ನು ತಂದನು. ಚಿರಕಾಲ ರಾಜ್ಯವಾಹಿಳಿದ ಮೇಲೆ, ತನ್ನ ಹಿರಿಯ ಮಗನಿಗೆ ಪಟ್ಟಗಟ್ಟಿ, ಧ್ರುವನು ಬದರಿಕಾಶ್ರಮಕ್ಕೆ ಹೋದನು. ಅಲ್ಲಿ



ವಿಷ್ಣುವನ್ನು ಧ್ಯಾನಿಸುತ್ತಾ ಇದ್ದು ಬಂಗಾರದ ಶರೀರವನ್ನು ಪಡೆದು ದಿವ್ಯಕಾಂತಿಯಿಂದ ಬೆಳಗಿದನು.

ಅದಾದ ಮೇಲೆ ವಿಷ್ಣುವಿನ ಆದೇಶದಂತೆ ವಿಷ್ಣು ದೂತರು ಅವನಿಗಾಗಿ ದಿವ್ಯ ವಿಮಾನವನ್ನು ತಂದರು. ಅವರು ನಾಲ್ಕು ಕೈಗಳಿಂದ ವಿಷ್ಣುವಿನ ಹಾಗೆಯೇ ಬೆಳಗುತ್ತಿದ್ದರು.

ಧ್ರುವನು ಅವರೊಂದಿಗೆ, "ನನ್ನ ತಾಯಿಗೆ ಸಿಗದಿರುವ ಉನ್ನತಪದವು ನನಗೆ ಬೇಕಾಗಿಲ್ಲ" ಎಂದು ನಿರಾಕರಿಸಿದನು. ಆಗ ವಿಷ್ಣುದೂತರು ಮುಂದಾಗಿ ಧ್ರುವ ಮಂಡಲಕ್ಕೆ ದಿವ್ಯ ವಿಮಾನದಲ್ಲಿ ಹೋಗುತ್ತಿದ್ದ ಸುನೀತಿಯನ್ನು ಅವನಿಗೆ ತೋರಿಸಿದರು.

ಅದನ್ನು ನೋಡಿದ ಮೇಲೆ ಧ್ರುವನು ಸಂತೋಷ ಪಟ್ಟು ದೇವ ವಿಮಾನದಲ್ಲಿ ಏರಿದನು. ಆ ವಿಮಾನವು ಮೇಲೆ ಮೇಲೆ ಹೋಗುತ್ತ, ಗ್ರಹ ಮಂಡಲಗಳನ್ನೂ, ನಕ್ಷತ್ರ ಮಂಡಲಗಳನ್ನೂ ದಾಟಿ ಧ್ರುವಪದಕ್ಕೆ ಹೋಗಿ ತಲಪಿತು. ಧ್ರುವಪದವನ್ನೇ ವಿಷ್ಣುಪದವೆಂದೂ, ಧ್ರುವಕ್ಷಿತಿ ಎಂದೂ ಹೇಳುತ್ತಾರೆ. ವಿಷ್ಣುವಿನ ವಾಸಸ್ಥಳವಾದ ವೈಕುಂಠವು ಅಲ್ಲಿಯೇ ಇರುತ್ತದೆ. ಗೋಲೋಕವಿರುವುದೂ ಧ್ರುವಕ್ಷಿತಿಯಲ್ಲಿಯೇ. ಗೋಲೋಕದಲ್ಲಿ ವಿಷ್ಣು ಎರಡು ಕೈಗಳಿಂದ ಕೃಷ್ಣನಾಗಿ, ಪ್ರಕೃತಿಸ್ವರೂಪಿಣಿಯಾದ ರಾಧಾದೇವಿಯೊಂದಿಗೆ ಕೂಡಿ, ಆನಂದ ದಾಯಕವಾದ ವೇಣುವನ್ನು ಊದುತ್ತಾ ಆನಂದಿಸಿ ಕೊಂಡಿರುವನು. ಗೋಲೋಕಕ್ಕೆ ಮೇಲೆ ದೊಡ್ಡ ಅಂಧಕಾರದ ಪುಂಜಗಳೇ ವ್ಯಾಪಿಸಿಕೊಂಡಿರುತ್ತವೆ. ಆ ಅಂಧಕಾರದ ಆಚೆಗೆ ಮಹಾವಿಷ್ಣು ವೈಕುಂಠ ವಾಸಿಯಾಗಿ ಕ್ಷೀರಸಾಗರದ ನಡುವೆ ಬೆಳಗಿ ಕೊಂಡಿರುತ್ತಾನೆ. ಧ್ರುವನು ಸಾದಾ ವಿಷ್ಣುವನ್ನು ನೋಡುತ್ತ ಉಜ್ವಲಕಾಂತಿಯಿಂದ ಪ್ರಕಾಶಿಸುತ್ತಾನೆ. ಗೂಟಕ್ಕೆ ಕಟ್ಟಿದ ದನದ ಹಾಗೆ ಸಪ್ತರ್ಷಿ ಮಂಡಲವು ಅವನ ಸುತ್ತಲೂ ಪ್ರದಕ್ಷಿಣೆ ಮಾಡುತ್ತಿರಲು ಸಪ್ತ ನಕ್ಷತ್ರ ಗ್ರಹ ಗಣಗಳೊಂದಿಗೆ ತುಂಬಿದ ಶಿಂಶುಮಾರ ಚಕ್ರವು ಧ್ರುವನ ಕೆಳಗೆ ತಿರುಗುತ್ತಾ ಇರುತ್ತದೆ.

ಗೋಲೋಕಕ್ಕೆ ಕೆಳಗೆ ಬ್ರಹ್ಮನಿರುವ ಸತ್ಯ ಲೋಕವೂ, ಅದರ ಕೆಳಗೆ ಕ್ರಮವಾಗಿ ಜನಲೋಕ, ಮಹರ್ಲೋಕ, ಸ್ವರ್ಲೋಕ, ಭುವರ್ಲೋಕ, ಭೂಲೋಕವೆಂಬ ಏಳು ಊರ್ಧ್ವಲೋಕಗಳೂ, ಭೂಲೋಕಕ್ಕೆ ಕೆಳಗೆ ಅಧೋಲೋಕಗಳೆನಿಸುವ ಅತಲ, ವಿತಲ, ಸುತಲ, ರಸಾತಲ, ತಲಾತಲ, ಮಹಾತಲ, ಪಾತಾಲ ಎಂಬ ಏಳೂ ಕೂಡಿ ಒಟ್ಟು ಹದಿನಾಲ್ಕು ಲೋಕಗಳಿಗೆ ಮೇಲಿನಿಂದ, ವಿಶ್ವಶಿಖರಾಗ್ರದತಲೆಯಲ್ಲಿ ಧ್ರುವನು ದಿಕ್ಕುಗಳಿಗೆ ದಿಕ್ಕಾಗಿ, ಅಚಲಪದ ನಕ್ಷತ್ರವಾಗಿ ಬೆಳಗಿಕೊಂಡು ಎಂದೆಂದೂ ಇರುತ್ತಾನೆ.

ದೀಕ್ಷೆಯೊಂದಿದ್ದರೆ, ಸಣ್ಣದು ದೊಡ್ಡದು ಎಂಬ ತಾರತಮ್ಯವೇನಿಲ್ಲದೆ, ವಯಸ್ಸಿನ ಹೆಚ್ಚು ಕಡಿಮೆ ಗಳಿಲ್ಲದೆ, ಏನನ್ನಾದರೂ ಸಾಧಿಸಿ ಬಿಡಬಹುದು.

ಇದಕ್ಕೆ ಐದು ವಯಸ್ಸಿನ ಎಳೆಮೆಯಲ್ಲಿಯೇ ತಪಸ್ಸಿಗೆ ಹೋದ ಬಾಲಧ್ರುವನೇ ತಾರ್ಕಾಣೆಯಾಗಿರುವನು.

ಹೀಗೆ ಸೂತಪುರಾಣಿಕನು ಧ್ರುವನ ವೃತ್ತಾಂತ ವನ್ನು ಮುಗಿಸಿ, ಮತ್ತೆ ಹೇಳಲು ಪ್ರಾರಂಭಿಸಿದನು.

ಶ್ರದ್ಧಾಸಕ್ತರಾದ ಮುನಿಗಳೇ, ಮತ್ಸ್ಯವು ಕೇವಲ ಜಲಚರವಾದ ಪ್ರಾಣಿಯಾದರೆ, ಆಮೆ ನೀರಿನ ಲ್ಲಿಯೂ ನೆಲದಲ್ಲಿಯೂ ಜೀವಿಸಬಲ್ಲಂತಹದು.

ಅಂದರೆ ನೀರಿನಿಂದ ಪ್ರಾಣಿಕೋಟಿಗಳು ನೆಲದ ಮೇಲಕ್ಕೆ ಬಂದುವು. ಸೃಷ್ಟಿಯ ಪರಿಣಾಮವು ಜಲಚರದಶೆಯಿಂದ ಭೂಚರದಶೆಗೆ ಬಂದಿತೆಂದು ಆಮೆಯ ಅವತಾರದ ತತ್ವಾರ್ಥ.

ವಿಷ್ಣು ಅಂತಹ ಆಮೆಯಾಗಿ ಅವತಾರವೆತ್ತಿ ದನು. ಅದೇ ದಶಾವತಾರಗಳಲ್ಲಿ ಎರಡನೆಯದಾದ ಕೂರ್ಮಾವತಾರ.

ಒಂದುಸಾರಿ ದೇವತೆಗಳೂ, ರಾಕ್ಷಸರೂ ಕೂಡಿ, ಕ್ಷೀರಸಾಗರವನ್ನು ಕಡೆದು ಅಮೃತವನ್ನು ಪಡೆಯ ಬೇಕೆಂಬ ಮಹೋದ್ಯಮಕ್ಕೆ ತೊಡಗಿದರು.

"ಅಮೃತವು ಸಿದ್ಧಿಸಿಬಿಟ್ಟರೆ ಅದು ನಮ್ಮ ದಾಗುತ್ತದೆ." ಎಂದು ಭುಜಬಲದಲ್ಲಿಯೂ, ಸಂಖ್ಯೆ ಯಲ್ಲಿಯೂ ಹೆಚ್ಚಾಗಿದ್ದ ರಾಕ್ಷಸರು ಆಲೋಚನೆ ಮಾಡಿಕೊಂಡಿದ್ದರು. ರಾಕ್ಷಸರ ಆಲೋಚನೆಯಂತೆ ನಡೆದು ಬಿಟ್ಟರೆ ಒಗ್ಗಟ್ಟಿನಿಂದ ಕೆಲಸಮಾಡಿಯೂ ಫಲವು ಪೂರ್ತಿ ಅವರಿಗೆ ಹೋಗಿಬಿಡುತ್ತದೆಂದು, ದೇವತೆಗಳಿಗೆ ಗೊತ್ತಾಯಿತು.

"ರಾಕ್ಷಸರಿಗೆ ಮಾತ್ರ ಅಮರತ್ವ ಸಿದ್ಧಿಸಿಬಿಟ್ಟರೆ ನಮಗೇನು ಲಾಭ? ಬದಲಾಗಿ ಅವರ ಕಾಟವೇ ಹೆಚ್ಚುತ್ತದೆ. ಇದಕ್ಕೆ ತಕ್ಕ ಪ್ರತೀಕಾರ ಮಾಡುವ ಭಾರ ಮಹಾವಿಷ್ಣುವಿಗೇ ಸರಿ" ಎಂದು ದೇವತೆ ಗಳು ವಿಷ್ಣುವನ್ನೇ ನಂಬಿ ಕಾರ್ಯಕ್ಕೆ ಇಳಿದರು.

ಹಾಲಿನ ಸಮುದ್ರದಲ್ಲಿ ಮಂದರ ಪರ್ವತವನ್ನು ಕಡಗೋಲಾಗಿ ನಿಲ್ಲಿಸಿ, ವಾಸುಕಿ ಎಂಬ ಮಹಾ ಸರ್ಪವನ್ನು ನೇಣಾಗಿ ಅದಕ್ಕೆ ಸುತ್ತಿ ಕಡೆಯಬೇಕೆಂಬ ನಿರ್ಣಯವಾಯಿತು. ಆದರೆ ಮಂದರ ಪರ್ವತ ವನ್ನು ತಂದು ಹಾಲ ಸಮುದ್ರದಲ್ಲಿ ಎತ್ತಿಹಾಕುವ ಕೆಲಸ ಯಾರಿಂದಲೂ ಸಾಧ್ಯವಾಗಲಿಲ್ಲ. ಆಗ ವಿಷ್ಣುವೇ ಅನುಗ್ರಹಿಸಿ ಆ ಕೆಲಸ ಮಾಡಿದನು. ಅದರಿಂದ ವಿಷ್ಣುವಿಗೆ ಗಿರಿಧಾರಿ ಎಂಬ ಹೆಸರು ಬಂತು.

ರಾಕ್ಷಸರು ತಾವು ವಾಸುಕಿಯ ತಲೆಯ ಭಾಗವನ್ನೇ ಹಿಡಿಯುತ್ತೇವೆಂದು ಹಟ ಹಿಡಿದರು. ಹಾಗೆಯೇ ಒಪ್ಪಿಕೊಳ್ಳಿರೆಂದು ದೇವತೆಗಳಿಗೆ ವಿಷ್ಣು ಹೇಳಿದನು. ದೇವತೆಗಳು ವಾಸುಕಿಯ ಬಾಲದ ಭಾಗದಲ್ಲಿ ಹಿಡಿದು ಕೊಂಡಾಗ, ವಿಷ್ಣು ಕೂಡಾ ಎಲ್ಲರಿಗಿಂತ ಕೊನೆಯಲ್ಲಿ ನಿಂತು, ವಾಸುಕಿಯ ಬಾಲದ ತುದಿಯನ್ನು ಹಿಡಿದನು. ಹೀಗೆ ಕ್ಷೀರಸಾಗರಮಥನವು ಪ್ರಾರಂಭವಾಯಿತು.






ಕ್ಷೀರ ಸಾಗರದ ಮಥನ ಕಾರ್ಯವು ಪ್ರಾರಂಭವಾದರೂ ಅದು ಸುಗಮವಾಗಿ ಸಾಗಲಿಲ್ಲ. ಮೊದಲು ರಾಕ್ಷಸರು ಸರ್ಪದ ಬಾಲಹಿಡಿದ ದೇವತೆಗಳನ್ನು ಪರಿಹಾಸ ಮಾಡುತ್ತ, ಸರ್ಪದ ತಲೆಯ ಭಾಗ ಹಿಡಿದೆವೆಂಬ ಹೆಮ್ಮೆಯಿಂದ ತಮ್ಮ ಭುಜಬಲ ಪ್ರದರ್ಶಿಸುವಂತೆ ಜೋರು ಜೋರಾಗಿ ಎಳೆಯುತ್ತಿದ್ದರು. ದೇವತೆಗಳು ಕೂಡಾ ತಾವೇನೂ ಕಡಿಮೆಯವರಲ್ಲವೆಂಬುದನ್ನು ತೋರಿಸಲು ರಾಕ್ಷಸರಿಗೆ ತಕ್ಕಹಾಗೆ ಈಡುಕೊಡುತ್ತ ಎಳೆದರು. ಮಥನ ಕಾರ್ಯ ಆರಂಭ ಶೂರತ್ವದ ಮಹಾ ವೇಗದಿಂದ ಸಾಗುತ್ತಿರಲು, ಆ ಘರ್ಷಣೆಯನ್ನು ತಡೆದುಕೊಳ್ಳಲಾಗದೆ ಮಹಾ ಸರ್ಪದ ಅನೇಕ ತಲೆಗಳಿಂದ ಹಾಲಾಹಲವೆಂಬ ಕ್ರೂರ ವಿಷವು ಕಾರ ತೊಡಗಿತು. ರಾಕ್ಷಸರು ಹಾಹಾಕಾರ ಮಾಡುತ್ತ ಹಾರಿಬಿದ್ದು ತಲ್ಲಣಿಸಿದರು.

ಭುಸಭುಸನೆ ಹೊರಡುವ ಹಲಾಹಲ ವಿಷದ ಜ್ವಾಲೆಯನ್ನು ತಾಳಿಕೊಳ್ಳಲಾಗದೆ ಅನೇಕ ಮಂದಿ ರಾಕ್ಷಸರು ಸುಟ್ಟುಮಸಿಯಾದರೂ ಹಾಲಾಹಲವು ಆಕಾಶವನ್ನು ಬಳಸಿ ಬೆಂಕಿಯ ಜ್ವಾಲೆಯಾಗುವುದನ್ನು ನೋಡಿ ಪ್ರಪಂಚವೇ ಸುಟ್ಟುಹೋಗುವ ಅಪಾಯ ಉಂಟಾಯಿತು. ಹೆದರಿ ಕೈಬಿಟ್ಟ ಕಾರಣದಿಂದಾಗಿ ಮಂದರ ಪರ್ವತವು ಸಮುದ್ರದಲ್ಲಿ ಮುಳುಗಿಯೂ ಹೋಯಿತು. ಎಲ್ಲರೂ "ಹರಹರಾ" ಎಂದು ಶಿವನನ್ನು ಪ್ರಾರ್ಥಿಸತೊಡಗಿದರು.

ಕೂಡಲೆ ಶಿವನು ಓಡಿಬಂದು ಹರಡಿದ ಹಾಲಹಲವನ್ನೂ ಬಾಚಿ ಹಿಡಿದು ತನ್ನ ಬಾಯಿಯೊಳಗೇ ಸೇರಿಸಿ, ಪೂರ್ತಿನುಂಗದೆ ಕಂಠಪ್ರದೇಶದಲ್ಲೇ ಇಟ್ಟುಕೊಂಡನು. ಅದರಿಂದ ಶಿವನಿಗೆ ನೀಲಕಂಠ, ಶಿತಿಕಂಠ, ಗರಳಕಂಠನೆಂಬ ಹೆಸರು ಬಂತು. ಹಾಲಾಹಲದ ಗಂಡಾಂತರ ತಪ್ಪಿಹೋಯಿತಾದರೂ ಮುಳುಗಿ ಹೋದ ಮಂದರ ಪರ್ವತಕ್ಕಾಗಿ ದೇವತೆಗಳು ವಿಷ್ಣುವನ್ನು ಪ್ರಾರ್ಥನೆ ಮಾಡಿದರು.

ವಿಷ್ಣು ದೊಡ್ಡದೊಂದು ಆಮೆಯ ಅವತಾರವನ್ನೆತ್ತಿ ಮುಳುಗಿದ ಮಂದರ ಪರ್ವತವನ್ನು ಬೆನ್ನಿನಲ್ಲಿ

೪. ಕೂರ್ಮಾವತಾರ, ಜಗನ್ಮೋಹಿನಿ



ಹೊತ್ತು ಮೇಲಕ್ಕೆ ತಂದನು. ಹೀಗೆ ವಿಷ್ಣು ಕೂರ್ಮಾವತಾರದಿಂದ ಮಂದರಗಿರಿಯನ್ನು ಹೊತ್ತುಕೊಂಡು ಸಮುದ್ರದಲ್ಲಿಯೂ, ಪರ್ವತವು ಅತ್ತಿತ್ತ ಬಾಗಿ ಹೋಗದಂತೆ ಶಿಖರಾಗ್ರದಲ್ಲಿ ಕುಳಿತು ಪಾದಗಳಿಂದಲೂ, ಮತ್ತೊಂದು ಕಡೆ ದೇವತೆಗಳ ಜತೆಯಲ್ಲಿ ಸರ್ಪವನ್ನು ಹಿಡಿದು ಕಡೆಯುತ್ತಲೂ ಹೀಗೆ ಬಹು ರೂಪಗಳಿಂದ ಪ್ರವರ್ತಿಸಿದನು.

ಅಲ್ಲಿಂದ ಮುಂದೆ ಸಾಗರ ಮಥನವು ಸಕ್ರಮವಾಗಿ ಸಾಗಿತು. ಹಾಗೆ ಕಡೆಯುತ್ತಾ ಇರುವಾಗ ಕ್ಷೀರಸಾಗರದಿಂದ ಚಂದ್ರನೂ, ಲಕ್ಷ್ಮಿಯೂ, ಕಲ್ಪವೃಕ್ಷವೂ, ಕಾಮಧೇನುವೂ, ಐರಾವತ ಆನೆಯೂ, ಉಚ್ಚೈಃಶ್ರವ ಕುದುರೆಯೂ, ಸುರಾಮಾದಕವೂ, ಇನ್ನೂ ಅನೇಕ ವಿಶೇಷ ವಸ್ತುಗಳೂ ಉದ್ಭವಿಸಿದುವು.

ತಣ್ಣಗಿನ ಚಂದ್ರನನ್ನು ಶಿವನು ತನ್ನ ಕಂಠದೊಳಗಿನ ಹಾಲಾಹಲದ ಬಿಸಿಗೆ ಉಪಶಮನವಾಗಿ ತಲೆಯ ಮೇಲೆ ಧರಿಸಿ ಚಂದ್ರಶೇಖರನಾದನು.

ಲಕ್ಷ್ಮೀದೇವಿ ಶ್ರೀವತ್ಸ, ಕೌಸ್ತುಭ ಮಣಿಗಳು ಸೇರಿದ ವೈಜಯಂತಿಮಾಲೆಯನ್ನು ಹಿಡಿದುಕೊಂಡು ಬಂದು ವಿಷ್ಣುವಿನ ಕೊರಳಿಗೆ ಹಾಕಿ ಅವನನ್ನು ವರಿಸಿಕೊಂಡಳು. ವಿಷ್ಣು ಲಕ್ಷ್ಮೀಕಾಂತನಾದನು. ಸುರೆಯನ್ನು ದೇವತೆಗಳು ಸ್ವೀಕರಿಸಿ ಸುರರೆನಿಸಿಕೊಂಡರು.

ಕಟ್ಟ ಕಡೆಗೆ ಅಮೃತವು ಸಿದ್ಧಿಸಿತು. ವಿಷ್ಣು, ಆಯುರ್ವೇದಕ್ಕೆ ಮೂಲ ವಿರಾಟನೆನಿಸಿದ ಧನ್ವಂತರಿಯ ಅವತಾರವನ್ನೆತ್ತಿ, ಅಮೃತಕಲಶವನ್ನೂ, ಅನೇಕ ಔಷಧಿಗಳನ್ನೂ ಧರಿಸಿಕೊಂಡು ಪದ್ಮಾಸನದ ಮೇಲೆ ಕುಳಿತ ಭಂಗಿಯಲ್ಲಿ ಸಮುದ್ರದಿಂದ ಉದ್ಭವಿಸಿದನು.

ಅಮೃತಕ್ಕಾಗಿ ಕ್ಷೀರಸಾಗರವನ್ನು ಕಡೆದರೆ ಮೊದಲು ಅನುಭವಿಸಬೇಕಾಗಿ ಬಂದುದು ಹಾಲಾಹಲದ ತಾಪವನ್ನು. ಅನಂತರ ಎಷ್ಟೋ ವಿಶೇಷ ಸಹಾಯಗಳು ಬೇಕಾಗಿ ಬಂದು, ದೈವ ಸಹಾಯವೂ ಒದಗಿ ಕಡೆಗೆ ಅಮೃತವು ಸಿದ್ಧಿಸಿತು. ಆದುದರಿಂದ ಏನಾದರೂ ಶ್ರಮ ದಮಾದಿಗಳಿಂದ ಕೂಡಿದ ಕಾರ್ಯ ಸಾಧನೆಗೆ "ಸಾಗರಮಥನ" ಎಂಬ ಮಾತು ಪರ್ಯಾಯಪದವಾಗಿ ನಿಂತು ಹೋಗಿದೆ.

ಧನ್ವಂತರಿಯ ಕೈಯಲ್ಲಿದ್ದ ಅಮೃತಕಲಶವನ್ನು ರಾಕ್ಷಸರು ಮುಂದೆ ಹಾರಿ ಕಿತ್ತುಕೊಂಡು ಹೋಗಿ, "ಇದು ನಮ್ಮದೇ! ನಮಗೇ!" ಎಂದು ನಲಿದಾಡಿದರು. "ನಮಗೂ ಭಾಗವಿದೆ" ಎಂದು ದೇವತೆಗಳೂ ಅವರೊಂದಿಗೆ ಕಿತ್ತಾಟಕ್ಕೆ ತೊಡಗಿದರು. ದೇವದಾನವರು ಹೀಗೆ ಒಂದೇ ಸಮನೆ ಜಗಳಾಡಿಕೊಂಡಿರುವ ಆ ಸಮಯದಲ್ಲಿ, ಮೂರು ಜಗತ್ತುಗಳನ್ನೂ ಸಮ್ಮೋಹನಗೊಳಿಸುವಂತಹ ಜಗನ್ಮೋಹಿನಿಯೊಬ್ಬಳು ಅಲ್ಲಿ ಕಾಣಿಸಿದಳು. ಅವಳೂ ಸಮುದ್ರಮಥನದಿಂದ ಹುಟ್ಟಿದವಳೆಂದುಕೊಂಡು ರಾಕ್ಷಸರು ಬೆರಗಾಗಿ ನಿಂತರು. ಮೋಹಿನಿ ರಾಕ್ಷಸರ ಬಳಿಗೇ ಬರುವುದನ್ನು ನೋಡಿ ಅವರಿಗೆಲ್ಲಾ ಆದ ಆನಂದ ಹೇಳಿ

ತೀರದು. ಅವಳು ರಾಕ್ಷಸರೊಂದಿಗೆ ಝೇಂಕರಿಸುವ ಮಂಜುಲ ಸ್ವರದಿಂದ, " ಅಮೃತವನ್ನು ಹೀಗೆ ಕೊಡಿ, ನಾನು ಹಂಚುತ್ತೇನೆ !" ಎಂದು ಕೈ ಚಾಚಿದಳು. ಆ ಕೈಗಳ ಅಂದವನ್ನೂ ಹೇಳಿ ತೀರದು.

ಜಗನ್ಮೋಹಿನಿ ತಮ್ಮೊಂದಿಗೆ ಮಾತಾಡಿದುದಕ್ಕೇ ರಾಕ್ಷಸರು ಸಂತೋಷದಿಂದ ಉಕ್ಕುತ್ತ ಅಮೃತಕಲಶ ವನ್ನು ಅವಳ ಕೈಗೆ ಒಪ್ಪಿಸಿದರು.

ಅವಳು ಸೈಗೆ ಮಾಡಿದಂತೆ ರಾಕ್ಷಸರೆಲ್ಲ ಸಾಲಾಗಿ ಕುಳಿತರು. ದೇವತೆಗಳು ಕೂಡಾ ಹಾಗೆಯೇ ಸಾಲು ಗಟ್ಟಿ ಕುಳಿತರು. ಈ ಉಭಯ ಶ್ರೇಣಿಗಳ ನಡುವಿನಲ್ಲಿ ಮೋಹಿನಿ ನೃತ್ಯ ಮಾಡುವಂತೆ ಅಡಿಗಳ ಮೇಲೆ ಅಡಿ ಇಡುತ್ತ, ಅಮೃತಕಲಶವನ್ನು ಸೊಂಟದಲ್ಲಿಟ್ಟು ಕೊಂಡು ಒಯ್ಯಾರವಾಗಿ ಬಾಗಿಸುತ್ತ ನಡೆದಳು.



ಏನು ನಡೆಯುವುದೋ ಎಂದು ನೋಡುತ್ತಿದ್ದ ದೇವತೆಗಳ ಬಾಯಿಗೆ ಅಮೃತವು ಬೀಳುತ್ತಿದ್ದಿತು. ರಾಕ್ಷಸರು ಉನ್ಮತ್ತತೆಯಿಂದ ಅವಳ ನಡಿಗೆಯ ಚೆಂದವನ್ನು ನೋಡುತ್ತಾ ಇದ್ದರು. ಮೋಹಿನಿ ರಾಕ್ಷಸರ ಕಡೆಗೆ ತಿರುಗುವಂತೆ ಕಾಣುವಳೇ ಹೊರತು ಅಮೃತಕಲಶದಿಂದ ಏನೂ ಬೀಳುತ್ತಿರಲಿಲ್ಲ. ಅವಳ ನೋಟವೇ ಅಮೃತದಂತೆ ತೋರುತಿತ್ತು ಅವರಿಗೆ. ಹೀಗೆ ತಮಗೆ ಮಾತ್ರ ಅಮೃತ ನೀಡುವ ಈ ವಿಶ್ವ ಮೋಹಿನಿ ವಿಷ್ಣುವೇ ಎಂದು ದೇವತೆಗಳಿಗೆ ನಿಧಾನ ವಾಗಿ ಗೊತ್ತಾಯಿತು. ದೇವತೆಗಳ ಗುರಿ ಅಮೃತದ ಮೇಲಿತ್ತು. ರಾಕ್ಷಸರ ಗುರಿ ಜಗನ್ಮೋಹಿನಿಯ ದೃಷ್ಟಿ ರಸದ ಮೇಲಿತ್ತು.

ಜಗನ್ಮೋಹಿನಿಯ ವಿಲಾಸವೆಲ್ಲಾ ವಿಷ್ಣುವಿನ ಚಿದ್ವಿಲಾಸವೆಂದು ತಿಳಿದ ದೇವತೆಗಳು ಅಮೃತ ಪಾನದಿಂದ ಅಮರತ್ವ ಹೊಂದುತ್ತಿದ್ದರೆ, ದೈತ್ಯರು ಜಗನ್ಮೋಹಿನಿಯ ಮೋಹಜಾಲದಲ್ಲಿ ಬಿದ್ದು ಉನ್ಮತ್ತತೆಯಿಂದ ಅಮೃತವನ್ನು ಕಳೆದುಕೊಂಡರು. ಜಗನ್ಮೋಹಿನಿ ತಮಗೆ ವಂಚನೆ ಮಾಡುತ್ತಾಳೆಂದು ರಾಹು ಎಂಬ ಒಬ್ಬನೇ ಒಬ್ಬ ಬುದ್ಧಿವಂತ ರಾಕ್ಷಸನು ಕಂಡು ಹಿಡಿದುಬಿಟ್ಟನು. ಅವನು ಜಲ ರಾಕ್ಷಸಿಯಾದ ಸಿಂಹಿಕೆಯ ಮಗ, ಬಹು ದೊಡ್ಡ ಮಾಯಾವಿ. ನಡೆಯುವ ಮೋಸವನ್ನು ಹೇಳಿದರೂ ರಾಕ್ಷಸರು ಕೇಳುವ ಸ್ಥಿತಿಯಲ್ಲಿಲ್ಲ. ಕೇಳಿ ಗಲಾಟೆ ಮಾಡಿದರೂ ಮೋಹಿನಿಯ ಕೈಯಲ್ಲಿರುವ ಅಮೃತ ಸಿಗುವಂತಿಲ್ಲ. ಅಂತಲೇ ತಾನೊಬ್ಬ ದೇವತೆಯ ರೂಪತಾಳಿ, ದೇವತೆಗಳ ಪಂಕ್ತಿಯಲ್ಲಿ ಸೇರಿ. ಅವನ ಬಾಯಿಗೆ ಬಿದ್ದ ಅಮೃತವನ್ನು ನುಂಗುತ್ತಿರುವಾಗ ಸೂರ್ಯಚಂದ್ರರು ಅದನ್ನು ಗಮನಿಸಿದರು. ಆಗ ಮಂದರ ಪರ್ವತವ ಮೇಲೆ ವಿಷ್ಣುವಾಗಿದ್ದ ಬಹು ರೂಪೀ ವಿಷ್ಣುವಿನೊಡನೆ ಈ ಸಮಾಚಾರವನ್ನು ಹೇಳಿದರು. ಕೂಡಲೇ ವಿಷ್ಣು ತನ್ನ ಚಕ್ರವನ್ನು ರಾಹುವಿನ ಕಡೆಗೆ ಕಳುಹಿಸಿದನು.

ಅಷ್ಟರೊಳಗೆ ರಾಹು ಅಮೃತವನ್ನು ನುಂಗಿ ಯಾಗಿತ್ತು. ತನ್ನ ಕಡೆಗೆ ಬರುವ ಚಕ್ರದಿಂದ ತಪ್ಪಿಸಿ



ಕೊಳ್ಳಲು ಅವನು ಗ್ರಹಲೋಕದ ಕಡೆಗೆ ಎಗರಿ ಹೋದನು. ವಿಷ್ಣು ಚಕ್ರವು ಅವನ ಬೆನ್ನಟ್ಟಿ ಅವನ ತಲೆಯನ್ನು ಮುಂಡದಿಂದ ಬೇರ್ಪಡಿಸಿತು. ಅಮೃತದ ಪ್ರಭಾವದಿಂದ ತಲೆಯೂ, ಮುಂಡವೂ ಸಜೀವ ವಾಗಿದ್ದು, ತಲೆ ಮಾತ್ರ ರಾಹು ಎಂಬ ಹೆಸರಿನಲ್ಲಿಯೂ, ಮುಂಡವು ಕೇತು ಎಂಬ ಹೆಸರಿನಲ್ಲಿಯೂ ಗ್ರಹ ಕೂಟದಲ್ಲಿ ಸೇರಿಕೊಂಡುವು. ಈ ಎರಡು ಹೊಸ ಗ್ರಹಗಳಿಂದ ಗ್ರಹಗಳು ಒಂಬತ್ತಾದುವು.

ಸೂರ್ಯಚಂದ್ರರು ದೂರು ಹೇಳಿದರೆಂಬ ಹಗೆ ಇಟ್ಟುಕೊಂಡು ಹುಣ್ಣಿಮೆ, ಅಮಾವಾಸ್ಯೆಯ ಪರ್ವ ದಿನಗಳಲ್ಲಿ, ರಾಹು ಕೇತುಗಳು ಸೂರ್ಯಚಂದ್ರ ರನ್ನು ಹಿಡಿದು ಪೀಡಿಸತೊಡಗಿದುವು. ಆ ವಿಧವಾಗಿ ಸೂರ್ಯಚಂದ್ರರಿಗೆ "ಗ್ರಹಣಗಳು" ಉಂಟಾ ಗುತ್ತವೆ. ಅಮೃತವನ್ನು ದೇವತೆಗಳಿಗೆಲ್ಲಾ ಹಂಚಿ ಯಾದ ಮೇಲೆ ಅಮೃತ ಕಲಶದೊಂದಿಗೆ ಮೋಹಿನಿ ಅಂತರ್ಧಾನಳಾದಳು. ಆಮೇಲೆ ಎಚ್ಚರಕ್ಕೆ ಬಂದ ರಾಕ್ಷಸರು ತಮ್ಮ ಮತಿಹೀನತೆಯನ್ನು ದೂರಿ ಕೊಂಡು, ಆಗಿನಿಂದಲೂ ವಿಷ್ಣುವನ್ನೂ, ದೇವತೆ ಗಳನ್ನೂ ಶತ್ರುಭಾವದಿಂದಲೇ ನೋಡತೊಡಗಿದರು. ಕ್ರಮೇಣ ಬದ್ಧ ಶತ್ರುಗಳೇ ಆದರು.

ಅಮೃತ ಮಥನದ ಸಂದರ್ಭದಲ್ಲಿ ವಿಷ್ಣು ಕೂರ್ಮಾವತಾರವನ್ನೂ, ಧನ್ವಂತರಿಯ ಅವತಾರ ವನ್ನೂ, ಜಗನ್ಮೋಹಿನಿಯ ಅವತಾರವನ್ನೂ ಎತ್ತಿದನು. ಧನ್ವಂತರಿ ಅಮೃತ ಮಾತ್ರವಲ್ಲದೆ. ಔಷಧಿ ಗಳಿಗೆ ಮೂಲಾಧಾರವಾದ ಆಯುರ್ವೇದವನ್ನೂ ತಂದನು. ಆದುದರಿಂದ ವೈದ್ಯಶಾಸ್ತ್ರಕ್ಕೆ ಧನ್ವಂತರಿ ಅಧಿದೇವತೆಯಾಗಿ, ವೈದ್ಯರ ಕುಲದೈವನಾದನು.

ಜಗತ್ತಿನ ಸೌಂದರ್ಯ ವಿಲಾಸಗಳಿಗೆ ವಿಶ್ವ ಮೋಹಿನಿಯಾಗಿರುವ ಮೋಹಿನಿಯೇ ಸೌಂದರ್ಯ ಗಳಿಗೆ ಉದಾಹರಣೆಯಾಗಿ ನೆಲೆನಿಂತಳು.

ನಾರದನು ಜಗನ್ಮೋಹಿನಿಯ ಅವತಾರವನ್ನು ಕೀರ್ತಿಸುತ್ತ, ಜಗನ್ಮೋಹಿನೀರಾಗವನ್ನು ತನ್ನ ಮಹತೀ ವೀಣೆಯಿಂದ ಹೊರಡಿಸುತ್ತಾ ಕೈಲಾಸಕ್ಕೆ ಹೋದನು. ಆ ರಾಗಾಲಾಪನೆಯಿಂದ ಪಾರ್ವತೀ ದೇವಿ ಮುಗ್ಧಳಾಗಿ, "ಜಡ ಸೋಮಾರಿಗಳಾದ ರಾಕ್ಷಸರನ್ನು ತನ್ನ ವೈಯಾರದಿಂದ ವಂಚಿಸಿ ಬಿಟ್ಟ ಮಾತ್ರಕ್ಕೆ ಅದೊಂದು ದೊಡ್ಡ ಜಗನ್ಮೋಹಿನೀ ಅವತಾರವಾಗಿ ಬಿಡುವದೇನು ? ಅಂತಹುದಕ್ಕೆ ಮೋಸ ಹೋಗದ ವಿವೇಕಿಗಳಿಲ್ಲವೆಂದು ನಿನ್ನ ಭಾವನೆಯೇ ನಾರದಾ ?" ಎಂದಳು ನಗುತ್ತಾ.

"ಹೌದಮ್ಮಾ. ಎಂತಹವರನ್ನಾದರೂ ರಂಜನ ಗೊಳಿಸಿ ಈ ವಿಶ್ವವನ್ನೇ ಓಲಾಡಿಸುವಂತಹ ವಿಶ್ವ ಮೋಹಿನಿಯವಳು !" ಎಂದು ಹೇಳಿ, ಅದೇ ರಾಗ ವನ್ನು ಮುಂದುವರಿಸುತ್ತಾ ಅಲ್ಲಿಂದ ಹೊರಟು ಹೋಗಿಬಿಟ್ಟನು.

ಪಾರ್ವತಿ ಆ ವಿಷಯವನ್ನು ಶಿವನೊಂದಿಗೆ ಹೇಳಿದಳು. ಶಂಕರನು ಕಿರುನಗುವಿನೊಂದಿಗೆ ಕೇಳುತ್ತಾ

ತಲೆದೂಗಿ ಸುಮ್ಮನಿದ್ದನು. ತನ್ನ ಮಾತು ಸರಿಯೆಂದು ತನ್ನ ಪತಿ ಹೇಳಲಿಲ್ಲವಲ್ಲಾ ಎಂದು ಪಾರ್ವತಿ ಮನಸ್ಸಿನಲ್ಲೇ ಕೊರಗಿದಳು. ಶಿವನು ಅವಳನ್ನು ಕರೆದುಕೊಂಡು ನಂದಿ ವಾಹನನಾಗಿ ವೈಕುಂಠಕ್ಕೆ ಹೋದನು.

ಅಲ್ಲಿ ವಿಷ್ಣುವಿನೊಂದಿಗೆ ಶಿವನು, "ಸಮುದ್ರ ಮಥನ ಕಾಲದಲ್ಲಿ ಹಾಲಾಹಲವನ್ನು ತರಹರಿಸಿಕೊಳ್ಳುವ ಗಲಾಟೆಯಲ್ಲಿ ನಡೆದುದನ್ನೆಲ್ಲಾ ಚೆನ್ನಾಗಿ ನೋಡಲಿಲ್ಲ. ನಾರದನೇನೋ ನಿನ್ನ ಜಗನ್ಮೋಹಿನೀ ಅವತಾರವನ್ನು ಭಾರೀ ಹೊಗಳುತ್ತಾನೆ.ಅದನ್ನೊಮ್ಮೆ ನೋಡಲಿಕ್ಕೇ ಬಂದಿದ್ದೇವೆ" ಎಂದನು.

"ಏನೋ ಬಿಡಯ್ಯ. ಅಗತ್ಯ ಬಿದ್ದ ಹಾಗೆ ಎಂತೆಂತಹುದೋ ವೇಷ ಹಾಕಬೇಕಾಗಿ ಬರುತ್ತೆ. ನಿನ್ನಂಥ ದೊಡ್ಡವನ ಮುಂದೆ ಅದೆಲ್ಲ ಏಕೆ, ಬಿಡಯ್ಯ" ಎಂದು ವಿಷ್ಣು ಸ್ವಲ್ಪ ಹೊತ್ತಿಗೆ ಅಂತರ್ಧಾನನಾಗುವಾಗಲೇ ನೂಪುರಗಳ ಧ್ವನಿ ಎಲ್ಲಿಯೋ ಕೇಳಬಂದಿತು. ಶಿವಪಾರ್ವತಿಯರು ಅತ್ತಿತ್ತ ನೋಡಿದರು.

ಸಮೀಪದಲ್ಲಿದ್ದ ಹೂದೋಟದಲ್ಲಿ ಹೂಚೆಂಡುಗಳೊಡನೆ ಆಡುತ್ತ ಸಣ್ಣಗೆ ಹಾಡುತ್ತ ಜಗನ್ಮೋಹಿನಿ ಅವರ ಕಣ್ಣಿಗೆ ಬಿದ್ದಳು. ಶಿವನು ಸರ್ವವನ್ನೂ ಮರೆತು ಅವನ ಪಾಡಿಗೆ ಅವಳ ಕಡೆಗೆ ಹೋದನು. ಜಗನ್ಮೋಹಿನಿ ಶಿವನ ಕೈಗೆ ಸಿಕ್ಕದೆ ವಿಶ್ವಾಕಾಶದಲ್ಲಿ ಸಾಗಿದಳು. ಶಿವನು ಕೈಗಳನ್ನು ಚಾಚಿಕೊಂಡು ಅವಳ ಹಿಂದೆಯೇ ಹೋದನು, ಪಾರ್ವತಿ ಏನು ಮಾಡಲೂ ತೋರದೆ ನಿರ್ವಿಣ್ಣಳಾಗಿ ನೋಡುತ್ತ ನಿಂತಳು.

ಶಿವಮೋಹಿನಿಯರ ಚಲನ ವಲನ ಗಮನಗಳ ಲೀಲಾ ವಿನೋದಗಳನ್ನು ಬ್ರಹ್ಮಾದಿ ದೇವತೆಗಳು ಕಣ್ಣಿಗೆ ಹಬ್ಬವಾಗುವಂತೆ ನೋಡಿದರು. ನಂದಿ ಅನಾಥನಂತೆ ಬೆರಗಾಗಿ ನೋಡುತ್ತಿದ್ದನು. ನಾರದನು ಮಹತೀವೀಣೆಯಲ್ಲಿ ಶಿವರಂಜನಿ ರಾಗವನ್ನು ಉಜ್ವಲವಾಗಿ ಮಾರ್ಮೊಳಗುವಂತೆ ಸ್ತೋತ್ರ



ಮಾಡುತ್ತಿದ್ದನು. ಮುಂದೆ ಜಗನ್ಮೋಹಿನಿಯೂ, ಅವಳ ಹಿಂದೆ ಶಿವನೂ ವಿಶ್ವಾಂತರಗಳಲ್ಲಿ ಓಡುತ್ತಿದ್ದರು. ಅವರು ಎಲ್ಲಿಗೆ ಹೋದರು. ಏನಾದರೆಂದು ತಿಳಿಯದೆ ಪಾರ್ವತಿ ಕೈಲಾಸವನ್ನು ಸೇರಿಕೊಂಡಳು.

ಜಗನ್ಮೋಹಿನಿ ತೇಜೋಮಂಡಲಗಳ ಮೇಲೆ ತೂರಿಕೊಂಡು ಹೋಗಿ, ಶಿವನನ್ನು ವಿಶ್ವದಲ್ಲೆಲ್ಲಾ ಅಲೆದಾಡಿಸಿ ಕೈಲಾಸಕ್ಕೆ ಹೋದಳು. ಅಲ್ಲಿ ಮೋಹಿನಿ ಪಾರ್ವತಿಯ ಹತ್ತಿರ ನಿಂತು, ಶಿವನನ್ನು ನೋಡಿ "ನನ್ನನ್ನು ಮುಟ್ಟಬೇಡಯ್ಯಾ !" ಎಂದಳು. ಆಗ ಶಿವನು ಅವಳ ಹತ್ತಿರ ಹಾರಿ ಬಂದು ಅವಳ ನಡುವನ್ನು ಸುತ್ತಿ ಹಿಡಿದು ಮೊಣಕಾಲೂರಿದನು.

"ನೋಡಿದೆಯಾ ಅಮ್ಮಾ, ನಿನ್ನ ಪ್ರಾಣೇಶ್ವರನ ಕಾಟ !" ಎಂದು ಮೋಹಿನಿ ಶಿವನು ಇನ್ನೇನು ಮಾಡುವನೋ ಎಂದು ಹೆದರಿ ಪಾರ್ವತಿಯನ್ನು ಒತ್ತಿನಿಂತಳು. "ಅಷ್ಟೇ ಅಮ್ಮಾ, ಎಷ್ಟು ದೊಡ್ಡವನಾದರೂ ಅಷ್ಟೇನೇ !" ಎನ್ನುತ್ತ ನಾರದನು ಮಹತಿ



ಯನ್ನು ಬಾರಿಸುತ್ತಾ ಅಲ್ಲಿಗೆ ಬಂದು, ಜಗನ್ಮೋಹಿನಿ ಶಿವರಂಜನಿ ರಾಗಗಳಲ್ಲಿ ಹರಿಹರರ ಲೀಲಾ ವಿಲಾಸವನ್ನು ಗಾಯನ ಮಾಡುತ್ತಾ ಅಲ್ಲಿಂದ ಹೊರಟು, ಮೂರು ಲೋಕಗಳಲ್ಲಿಯೂ ತಿರುಗಾಡಿದನು. ಅವನಿಗೆ ಆನಂದವೇ ಆನಂದ.

ಶಿವನು ವಿಷ್ಣುವಿನೊಂದಿಗೆ, "ರಾಕ್ಷಸರು ಅಮೃತದ ಸಂಗತಿ ಮರೆತು, ನಿನ್ನ ಜಗನ್ಮೋಹಿನಿಯ ವಿಲಾಸವನ್ನು ಕಣ್ಣಾರೆ ನೋಡುವ ಭಾಗ್ಯ ಪಡೆದರು. ಅವರನ್ನು ಮೆಚ್ಚಿಕೊಳ್ಳುತ್ತೇನೆ. ರಸ ಪಿಪಾಸೆಯೇ ಅಸುರರ ಸೊತ್ತು ಎಂಬುದರಲ್ಲಿ ಸಂದೇಹವಿಲ್ಲ." ಎಂದನು.

ವಿಷ್ಣು ಕಿರುನಗೆಯೊಂದಿಗೆ ಪಾರ್ವತಿಯನ್ನು ನೋಡಿ, "ಅಮ್ಮಾ, ಮುಂದೆ ಶಿವರಂಜನಿಯಾಗಿ ನಮ್ಮ ಗಂಗಾದೇವಿ ದಿವಿಯಿಂದ ಭುವಿಗೆ ಅವತರಿಸುವ ವೇಳೆಯಲ್ಲಿ ಈ ಮಹಾಶಿವನು ಹೀಗೆಯೇ ಪರವಶನಾಗಿ ನಿನಗೊಬ್ಬಳು ಸವತಿಯನ್ನು ತರುವ ಹಾಗಿದೆ!" ಎಂದು ಹೇಳಿ ನಗುತ್ತಾ ಅಂತರ್ಧಾನನಾಗಿ ವೈಕುಂಠವನ್ನು ಸೇರಿದನು.

ತರುವಾಯದ ಒಂದು ಕಾಲದಲ್ಲಿ ವಿಷ್ಣು ಕರ್ದಮ ಪ್ರಜಾಪತಿಗೆ ಅವನ ಪತ್ನಿ ದೇವಹೂತಿಯಲ್ಲಿ ಅವರ ಪುತ್ರನಾಗಿ ಕಪಿಲನೆನಿಸಿದನು, ಈ ಕಪಿಲಾವತಾರದಲ್ಲಿ ಚಿಕ್ಕಪ್ರಾಯದಲ್ಲಿಯೇ ಜ್ಞಾನ ಸಂಪನ್ನನಾಗಿದ್ದನು. ತಪಸ್ಸಿನಿಂದ ಕಪಿಲ ಮಹಾಮುನಿಯಾಗಿ ಪ್ರಸಿದ್ಧನಾದನು.

ಕಪಿಲನು ತಾಯಿಯಾದ ದೇವಹೂತಿಗೆ ಹೇಳಿದ ಅನೇಕ ತತ್ವಬೋಧೆಗಳು ಸಾಂಖ್ಯಯೋಗವೆಂದು ಪ್ರಖ್ಯಾತವಾಯಿತು. ಕಪಿಲ ಮಹರ್ಷಿ ಪಾತಾಳ ಲೋಕದ ಒಂದು ಗುಹೆಯಲ್ಲಿ ತಪಸ್ಸು ಮಾಡಿಕೊಂಡಿದ್ದ ಕಾಲದಲ್ಲಿ ಭೂಮಿಯ ಮೇಲೆ ಸಗರ ಚಕ್ರವರ್ತಿ ನೂರನೇ ಅಶ್ವಮೇಧಯಾಗ ಮಾಡಲು ತೊಡಗಿದನು. ಆಗ ಇಂದ್ರನು ಅವನ ಯಾಗಾಶ್ವವನ್ನು ಮಾಯಮಾಡಿ, ಕಪಿಲ ಮಹರ್ಷಿ ತಪಸ್ಸು ಮಾಡುವ ಗುಹೆಯೊಳಗೆ ಅಡಗಿಸಿಟ್ಟನು.

ಸಗರನ ಸಾವಿರಮಂದಿ ಕುಮಾರರು ಆ ಕುದುರೆಯನ್ನು ಹುಡುಕುತ್ತಾ ಪಾತಾಳದವರೆಗೆ ಬಿಲವನ್ನು ಅಗೆದುಕೊಂಡೇ ಹೋದರು. ಅಲ್ಲಿ ಹುಡುಕುತ್ತಾ ಕಪಿಲ ಮಹರ್ಷಿಯ ಗುಹೆಯಲ್ಲಿ ಯಾಗಾಶ್ವವನ್ನು ನೋಡಿದರು, ಕಪಿಲನೇ ಅಶ್ವವನ್ನು ಅಪಹರಿಸಿದನೆಂದು ವಿಚಾರಸಾಚಾರವಿಲ್ಲದೆ ಅವನನ್ನು ದಂಡಿಸಬೇಕೆಂದು ಮುಗಿಬಿದ್ದರು. ಮಹಾತ್ಮನಾದ ಕಪಿಲನು ಕಣ್ಣು ತೆರೆದು ನೋಡಿದ ಕೂಡಲೇ ಅವರೆಲ್ಲಾ ಸುಟ್ಟು ಬೂದಿಯಾದರು.

ಆ ಭಸ್ಮರಾಶಿಯ ಮೇಲೆ, ವಿಷ್ಣು ಪಾದದಿಂದ ಹುಟ್ಟಿ, ಸ್ವರ್ಗದಲ್ಲಿ ಮಂದಾಕಿನಿಯಾಗಿ ಪ್ರವಹಿಸುವ ಗಂಗೆಯನ್ನು ಹರಿಯಗೊಳಿಸಿ, ಆ ಪಿತೃಗಳಿಗೆ ಸದ್ಗತಿಯನ್ನುಂಟು ಮಾಡಲು ಸಗರನ ಮರಿಮೊಮ್ಮಗನಾದ ಭಗೀರಥನು ಮಹಾತಪಸ್ಸನ್ನು

ಮಾಡಿ ಗಂಗಾದೇವಿಯನ್ನು ಪ್ರಸನ್ನೀಕರಿಸಿಕೊಂಡನು. ಗಂಗೆ ಭೂಮಿಗೆ ಬೀಳುವರಭಸದ ಶಕ್ತಿಯನ್ನು ತಡೆದುಕೊಳ್ಳಲು, ಭಗೀರಥನು ಮತ್ತೆ ತಪಸ್ಸು ಮಾಡಿ ಶಿವನನ್ನು ಪ್ರಸನ್ನ ಪಡಿಸಿಕೊಳ್ಳ ಬೇಕಾಯಿತು.

ಹಾಗೆ ಭುವಿಗಿಳಿದ ಗಂಗಾವತರಣದಲ್ಲಿ ಶಿವನು ಗಂಗಾದೇವಿಯನ್ನು ನೋಡಿ ಪರವಶನಾಗಿ, ಗಂಗೆ ಯನ್ನು ತನ್ನ ಜಟಾಜೂಟದೊಳಗೇ ಗಾಢವಾಗಿ ಬಂಧಿಸಿ ಇಟ್ಟುಕೊಂಡನು. ಭಗೀರಥನು ಮತ್ತೆ ಶಿವನ ಮನಸ್ಸನ್ನು ಕರಗಿಸಿದ ಮೇಲೆ, ಶಿವನು ಜಟಾಜೂಟದ ಒಂದು ಎಳೆಯನ್ನು ಬಿಡಿಸಿ ಸಣ್ಣದಾಗಿ ಹರಿಯುವಂತೆ ಬಿಟ್ಟನು. ಗಂಗೆ ಭಗೀರಥನ ಹಿಂದೆಯೇ ಹೋಗಿ ಪಾತಾಳಕ್ಕಿಳಿದು, ಅವನ ಪಿತೃಗಳಾದ ಸಗರಪುತ್ರರ ಭಸ್ಮರಾಶಿಯ ಮೇಲೆ ಹರಿದು, ಅವರಿಗೆಲ್ಲಾ ಸ್ವರ್ಗ ಪ್ರಾಪ್ತಿಯಾಗುವಂತೆ ಮಾಡಿದಳು.

ಶಿವನು ಗಂಗಾಧರನೆಂದು ರಂಜಿಸಿದನು. ಆ ವಿಧವಾಗಿ ಗಂಗೆ ಪಾರ್ವತಿಗೆ ಸವತಿಯಾದಳು.

ವಿಷ್ಣುವಿನ ಮುಂದಿನ ಅವತಾರಗಳಿಗೆ ಮೂಲ ರಾದವರು ಸನಕ ಸನಂದನಾದಿಗಳೆಂದು ಹೇಳಲ್ಪಡುವ, ಸನಕ, ಸನಂದನ, ಸನತ್ಸುಜಾತ, ಸನತ್ಕುಮಾರರೆಂಬ ನಾಲ್ವರು ಬ್ರಹ್ಮ ಮಾನಸಪುತ್ರರು. ಇವರು ಯಾವಾಗಲೂ ಬಾಲಕರಾಗಿಯೇ ಕಾಣುವವರು. ಸಂಪೂರ್ಣ ವಿಷ್ಣು ಭಕ್ತರಾಗಿ ಸದಾ ವಿಷ್ಣುವನ್ನು ಕೀರ್ತಿಸುತ್ತಾ ನಿರಾತಂಕವಾಗಿ ಲೋಕಸಂಚಾರ ಮಾಡುತ್ತಾ ಇರುವರು.

ಅಂತಹ ಮಹಿಮಾನ್ವಿತರಾದ ಸನಕಾದಿ ಮುನಿಗಳು ವಿಷ್ಣು ದರ್ಶನದ ಅಪೇಕ್ಷೆಯಿಂದ ವೈಕುಂಠಕ್ಕೆ ಹೋದರು. ಎಲ್ಲಾ ದ್ವಾರಗಳನ್ನೂ ದಾಟಿ ವಿಷ್ಣು ಮಂದಿರದ ದ್ವಾರವನ್ನು ತಲಪಿದರು.

ಅಲ್ಲಿ ವಿಷ್ಣುವಿಗೆ ಸರಿಸಮನಾದ ರೂಪದಲ್ಲಿ ನಾಲ್ಕು ಕೈಗಳಿಂದ, ಶಂಖ, ಚಕ್ರ, ಗದೆ ಮತ್ತು ಅಭಯ ಮುದ್ರೆಯಿಂದ ದ್ವಾರಪಾಲಕರಾಗಿರುವ ಜಯ ಮತ್ತು ವಿಜಯ ಎಂಬವರು, ವಿಷ್ಣು ದರ್ಶನಕ್ಕೆ ಇದು ಸಮಯವಲ್ಲವೆಂದು ಸನಕಸ ನಂದನಾದಿಗಳನ್ನು ತಡೆದರು.

"ನಮಗೆ ವಿಷ್ಣು ದರ್ಶನಕ್ಕೆ ಸಮಯಾಸಮಯವೇ ನಿಲ್ಲ" ಎಂದು ಸನಕಾದಿಗಳು ಜಯವಿಜಯರನ್ನು ಲಕ್ಷ್ಯಮಾಡದೆ ಒಳಗೆ ಹೋಗಲು ನೋಡಿದಾಗ, ಜಯವಿಜಯರು ಗದೆಗಳನ್ನೆತ್ತಿ ಅವರನ್ನು ಅಡ್ಡ ತಡೆದರು. ಕೂಡಲೇ ಸನಕಾದಿ ಮುನಿಗಳು "ನೀವು ವಿಷ್ಣು ದ್ವಾರಪಾಲಕರಾಗಿರಲು ಅರ್ಹರಲ್ಲ, ರಾಕ್ಷಸ ರಾಗಿ ಹುಟ್ಟಿರಿ !" ಎಂದು ಶಪಿಸಿದರು.

ದ್ವಾರದ ಹತ್ತಿರ ನಡೆಯುವ ಕಲಕಲವನ್ನು ಕೇಳಿ ನಾರಾಯಣನು ಲಕ್ಷ್ಮಿಯೊಂದಿಗೆ ಅಲ್ಲಿಗೆ ಬಂದನು.






ವಿಷ್ಣು ಜಯ ವಿಜಯರನ್ನು ನೋಡಿ, "ತಿಳಿಯಿತು. ಸನಕಸನಂದನಾದಿಗಳಂತಹ ಮಹಾಮುನಿಗಳ ಶಾಪವು ಅಮೋಘವಾದುದು. ಆ ಶಾಪ ಕಾಲವನ್ನು ನೀವು ನನ್ನ ಮಿತ್ರ ಭಾವದಲ್ಲಿ ಏಳು ಜನ್ಮ ಪಡೆದು ಬರುವಿರಾ, ಅಥವಾ ನನ್ನನ್ನು ದ್ವೇಷಿಸುತ್ತಾ ಶತ್ರು ಭಾವದಲ್ಲಿ ಮೂರು ಜನ್ಮಗಳಲ್ಲಿ ನನ್ನಿಂದ ಅಂತ್ಯ ಪಡೆದು ಇಲ್ಲಿಗೆ ಬರುವಿರಾ?" ಎಂದು ಕೇಳಿದನು.

ಅದನ್ನು ಕೇಳಿ ಜಯವಿಜಯರು ವಿಷ್ಣುವಿನ ಅನುಗ್ರಹಕ್ಕೆ ಸಂತೋಷಪಟ್ಟು, ಆದಷ್ಟು ಬೇಗ ವಿಷ್ಣು ಸಾನ್ನಿಧ್ಯವನ್ನು ಸೇರಿಕೊಳ್ಳಬೇಕೆಂದು, ಎರಡನೆಯ ವಿಧಾನದ ಮೂರು ಜನ್ಮಗಳೇ ಇರಲಿ ಎಂದು ಕೇಳಿಕೊಂಡರು.

ಆಗ ಸನಕಸನಂದನಾದಿಗಳು ಜಯವಿಜಯರನ್ನು ಮೆಚ್ಚಿಕೊಳ್ಳುತ್ತ ವಿಷ್ಣುವನ್ನು ನೋಡಿ, "ದೇವರ ದೇವಾ! ರಾಗ ದ್ವೇಷಗಳು ನಿನಗೆ ಸಮಾನವೆಂದೂ, ನಿನ್ನನ್ನು ದ್ವೇಷಿಸುವವರು ಬೇಗನೇ ನಿನ್ನನ್ನು ಸೇರಿ ಕೊಳ್ಳುವರೆಂದೂ ಈಗ ನಮಗೆ ಗೊತ್ತಾಯಿತು. ನಿನ್ನ ದ್ವಾರಪಾಲಕರನ್ನು ದುಡುಕು ಬುದ್ಧಿಯಿಂದ ಶಪಿಸಿಬಿಟ್ಟೆವು. ಅದಕ್ಕಾಗಿ ನಾಚುತ್ತೇವೆ. ನಮ್ಮನ್ನು ಕ್ಷಮಿಸು ದೇವಾ!" ಎಂದು ಕೈಮುಗಿದರು.

"ನನ್ನ ದರ್ಶನಕ್ಕೆ ಬರುವವರ ತಾರತಮ್ಯ ತಿಳಿಯದೆ ಹೋಗಲು ಜಯವಿಜಯರಿಗೆ ಬಂದ ಸ್ವಲ್ಪ ಮಾತ್ರ ಗರ್ವವೇ ಕಾರಣ. ಅದನ್ನು ಕೂಡಲೇ ಶಾಪದಿಂದ ತೊಳೆದಿರಿ" ಎಂದನು ವಿಷ್ಣು.

ಶಾಪಗ್ರಸ್ತರಾದ ಜಯವಿಜಯರು ಕಶ್ಯಪ ಪ್ರಜಾ ಪತಿಯ ಹೆಂಡತಿಯ ಹೊಟ್ಟೆಯಲ್ಲಿ ಹಿರಣ್ಯಕಶಿಪು, ಹಿರಣ್ಯಾಕ್ಷರಾಗಿ ಜನ್ಮಿಸಿದರು.

ಈ ಅಣ್ಣ, ತಮ್ಮಂದಿರು ಮಹಾ ಪರಾಕ್ರಮಿ ಗಳಾಗಿದ್ದು, ತಪಸ್ಸು ಮಾಡಲು ಹೋದರು. ದೊಡ್ಡ ತಪಸ್ಸು ಮಾಡಿ ಬ್ರಹ್ಮನನ್ನು ಮೆಚ್ಚಿಸಿ ವರಗಳನ್ನು ಪಡೆದರು. ವಿಷ್ಣುವಿನ ಮೇಲೆ ಶತ್ರು ಭಾವವನ್ನು ಬೆಳೆಯಿಸಿಕೊಂಡು, ಕತ್ತಿಮಸೆಯುತ್ತಿದ್ದರು.

ಹಿರಿಯನಾದ ಹಿರಣ್ಯಕಶಿಪು ರಾಕ್ಷಸರಿಗೆ ರಾಜ ನಾದನು. ಹಿರಣ್ಯಾಕ್ಷನು ವಿಷ್ಣುವನ್ನು ಕಾಡುವಂತಹ

**೩. ವರಹಾವತಾರ, ನರಸಿಂಹಾವತಾರ**

ಯನ್ನು ಮೆಚ್ಚಿಕೊಳ್ಳುತ್ತ, ಮತ್ತೆ ತನ್ನ ಗದೆಯನ್ನು ಎತ್ತಿಕೊಂಡು ನಿಲ್ಲಲು ಹಿರಣ್ಯಾಕ್ಷನು ಮತ್ತೆ ಹೊಡೆಯಲು ತೊಡಗಿದನು. ಇಬ್ಬರಿಗೂ ಘೋರ ಸಂಗ್ರಾಮವು ಸಾಗಿತು. ಕಡೆಗೆ ವರಾಹಾವತಾರವು ತನ್ನ ಕೊಂಬು ದಾಡೆಗಳಿಂದ ಹಿರಣ್ಯಾಕ್ಷನನ್ನು ತಿವಿದು ಕೊಂದುಹಾಕಿತು.

ಜಯಶಾಲಿಯಾಗಿ ನಿಂತ ವರಾಹರೂಪೀ ವಿಷ್ಣುವನ್ನು ಭೂದೇವಿ ವರಿಸಿಕೊಂಡಳು. ವರಾಹಮೂರ್ತಿ ಭೂದೇವಿಯನ್ನು ಕಂಕುಳಲ್ಲಿ ಎತ್ತಿ ತೊಡೆಯ ಮೇಲೆ ಕುಳ್ಳಿರಿಸಿಕೊಂಡನು. ಬ್ರಹ್ಮಾದಿ ದೇವತೆಗಳು ಹೂ ಮಳೆಗರೆಯುತ್ತಾ ಭೂ ರಮಣನೆಂದೂ, ಜಗದೋದ್ಧಾರಕನೆಂದೂ ಸ್ತೋತ್ರಮಾಡಿದರು.



ಈ ಸಮಾಚಾರವು ಹಿರಣ್ಯಕಶಿಪುವಿಗೆ ತಿಳಿಯಿತು. ಹಂದಿಯ ರೂಪದಲ್ಲಿ ಬಂದು ತನ್ನ ತಮ್ಮನನ್ನು ಕೊಂದುಹಾಕಿದ ವಿಷ್ಣುವಿನ ಮೇಲೆ ಅವನ ಹಗೆ ಇನ್ನಷ್ಟು ಹೆಚ್ಚಾಯಿತು. ಈ ಹಗೆ ಸಾಧಿಸುವ ತೀವ್ರ ಸಂಕಲ್ಪದಿಂದ, ಮೊದಲು ಬ್ರಹ್ಮನಿಂದ ಇನ್ನಷ್ಟು ವರಗಳನ್ನು ಪಡೆಯಲು ಮತ್ತೆ ತಪಸ್ಸಿಗೆ ಹೋದನು. ಆ ಸಮಯದಲ್ಲಿ ಅವನ ಹೆಂಡತಿ ಲೀಲಾವತಿ ಗರ್ಭಿಣಿಯಾಗಿದ್ದಳು.

ಅವಳ ಗರ್ಭಾವಾಸದಲ್ಲಿರುವ ತನ್ನ ಶತ್ರುವನ್ನು ಹತಮಾಡಲು, ಇಂದ್ರನು ಮಾಯಾ ರೂಪದಲ್ಲಿ ಬಂದು ಲೀಲಾವತಿಯನ್ನು ಸೆರೆಹಿಡಿದು, ಆಕಾಶ ಮಾರ್ಗದಲ್ಲಿ ಎತ್ತಿಕೊಂಡು ಹೋಗುತ್ತಿದ್ದಾಗ, ನಾರದನು ಅವನ ಇದಿರಿಗೆ ಬಂದು "ದೇವೇಂದ್ರಾ! ಎಂತಹ ಕೆಲಸಕ್ಕೆ ತಲೆಹಾಕಿದೆ? ನಿನ್ನ ಪ್ರಯತ್ನವನ್ನು ನಿಲ್ಲಿಸು! ಸರ್ವಕಾಲ, ಸರ್ವಾವಸ್ಥೆಗಳಲ್ಲಿಯೂ ಇವಳ ಗಂಡ ಹಿರಣ್ಯಕಶಿಪು ವಿಷ್ಣುವಿನ ಮೇಲೆ ಹಗೆಯನ್ನು ಕುರಿತೇ ನೆನೆದುಕೊಂಡಿರುವುದರಿಂದ, ಲೀಲಾವತಿಯ ಗರ್ಭದಲ್ಲಿರುವ ಶಿಶುವಿಗೆ ಆ ವಿಷ್ಣುವಿನ ಧ್ಯಾನ ಅಂಟಿಕೊಂಡಿದೆ ಗೊತ್ತಾ? ಅಪ್ಪನಿಗಿರುವ ಹಗೆ ಭಕ್ತಿಯಾಗಿ ರೂಪಾಂತರಗೊಂಡು ಈ ಶಿಶುವಿನಲ್ಲಿ ಸೇರಿದೆ. ವಿಷ್ಣು ಮಾಯವೆಂದರೆ ಇದೇ! ಪ್ರಕೃತಿ ವಿಶೇಷವೇ ವಿಷ್ಣುವಿನ ಮಾಯೆ! ಲೀಲಾವತಿ ಬಹುದೊಡ್ಡ ವಿಷ್ಣು ಭಕ್ತನನ್ನು ಪ್ರಸವಿಸುತ್ತಾಳೆ. ಇವಳ ಹೊಟ್ಟೆಯಲ್ಲಿ ನಿನ್ನ ಪದವಿಗೆ ಆಪತ್ತು ತರುವ ರಾಕ್ಷಸನಾರೂ ಹುಟ್ಟುವುದಿಲ್ಲ. ಪೂಜ್ಯಳಾದ ಈ ಸತೀಮಣಿಯನ್ನು ಬಿಟ್ಟು ನಿನ್ನ ಪಾಡಿಗೆ ಹೋಗಿಬಿಡು" ಎಂದು ಹೇಳಿ ಲೀಲಾವತಿಯನ್ನು, ತಾನು ಆಗಾಗ ವಿಶ್ರಮಿಸಲು ನಿರ್ಮಿಸಿಕೊಂಡ ಆಶ್ರಮಕ್ಕೆ ಕರೆದುಕೊಂಡು ಹೋದನು.

ಆಶ್ರಮದಲ್ಲಿ ನಾರದನು ವೇದಾಂತ ವಿಷಯಗಳನ್ನೂ, ವಿಷ್ಣುವಿನ ಗುಣ ಗಣಗಳನ್ನೂ ವರ್ಣಿಸಿ ವರ್ಣಿಸಿ ಹೇಳಿಕೊಂಡಿರುವಾಗ, ಲೀಲಾವತಿಯ ಗರ್ಭದೊಳಗಿದ್ದ ಶಿಶು ಆಸಕ್ತಿಯಿಂದ ಕೇಳುತ್ತ ಹೂಂಗುಡುತ್ತಿದ್ದಿತು. ಹೀಗೆ ತಿಂಗಳು ತುಂಬಿದ ಮೇಲೆ ಲೀಲಾವತಿ ಕುಮಾರನನ್ನು ಪ್ರಸವಿಸಿದಳು.



ಘೋರ ಕೃತ್ಯಗಳನ್ನೇ ಮಾಡಿ ಮಾಡಿ, ಕಡೆಗೆ ಭೂಮಿಯನ್ನು ಉರುಳಿಸಿಕೊಂಡು ಹೋಗಿ, ರಸಾತಲದವರೆಗೆ ಸಮುದ್ರದಲ್ಲಿ ದೂಡಿಬಿಟ್ಟನು. ಮುಳುಗಿಹೋದ ಭೂದೇವಿ, ವಿಷ್ಣುವನ್ನು ನೆನೆಯುತ್ತಾ ಮೊರೆಯಿಡ ತೊಡಗಿದಳು.

ಭೂದೇವಿಯ ಮೊರೆಯನ್ನು ಕೇಳಿ ವಿಷ್ಣು ಹತ್ತು ಅವತಾರಗಳಲ್ಲಿ ಮೂರನೆಯದಾದ ವರಹಾವತಾರ ವನ್ನು ಎತ್ತಿದನು. ಅದು ಹೇಗೆಂದರೆ,

ಬ್ರಹ್ಮನು ಒಂದು ಮಹಾ ಹೋಮವನ್ನು ಮಾಡುತ್ತಿರುವಾಗ, ಯಜ್ಞಕುಂಡದಿಂದ ಬೆಳ್ಳಗಿನ ಕಾಂತಿಯಿಂದ ಹೊಳೆಯುವ ಅತೀ ಸಣ್ಣ ರೇಖೆ ಯೊಂದು ಮೇಲೆದ್ದಿತು. ಅದು ಕ್ರಮವಾಗಿ ದೊಡ್ಡ ದಾಗಿ ಬೆಳೆದು ಕಾಡು ಹಂದಿಯ ರೂಪಕ್ಕೆ ಮಾರ್ಪಟ್ಟಿತು. ಕೊಂಬು ಕೋರೆದಾಡೆಗಳಿಂದೊಪ್ಪುವ ಆ ಕಾಡು ಹಂದಿ ವಿಷ್ಣುವಿನ ಅವತಾರವೆಂದು ತಿಳಿದು ಬ್ರಹ್ಮಾದಿ ದೇವತೆಗಳು ಅದನ್ನು ಯಜ್ಞ ವರಾಹವೆಂದೂ, ಆದಿ ವರಾಹವೆಂದೂ ಹೇಳಿಕೊಂಡು, ಕೀರ್ತಿಸುತ್ತ ವಿಷ್ಣುವನ್ನು ಸ್ತುತಿ ಮಾಡಿದರು.

ಯಜ್ಞವರಾಹವು ಇನ್ನೂ ದೊಡ್ಡ ದೊಡ್ಡ ದಾಗುತ್ತಾ ಬ್ರಹ್ಮಾಂಡದ ಆಕೃತಿಯನ್ನು ಹೊಂದಿತು. ಬಲಿಷ್ಠವಾದ ಕಾಲುಗಳು, ಉಕ್ಕಿನ ಕವಚ ದಂತಹ ಚರ್ಮ, ಕೆಂಡಗಳಂತಹ ಕಣ್ಣುಗಳು, ಕೊರಳಿನಿಂದ ಬಾಲದವರೆಗೂ ನೆಟ್ಟಗೆ ನಿಂತು ಬಂಗಾರದಂತೆ ಹೊಳೆಯುತ್ತಿರುವ ಕೂದಲುಗಳು, ವಿಶ್ವವನ್ನೇ ನಡುಗಿಸುವಂತಹ ಘೂಂಕೃತ ಧ್ವನಿ. ಇಂತಹ ಯಜ್ಞವರಾಹದ ಮೂತಿಯ ಮೇಲೆ ಖಡ್ಗದಂತಹ ಕೊಂಬು ಕೂಡಾ ಧಗಧಗನೆ ಹೊಳೆಯುತ್ತಿದ್ದಿತು.

ವರಾಹಾವತಾರವು ಮಿಂಚಿನ ವೇಗದಲ್ಲಿ ರಸಾ ತಲಕ್ಕೆ ಓಡತೊಡಗಿತು. ಅದು ಅಡಿಗಳನ್ನಿಡುವ ವೇಗಕ್ಕೆ ದಿಕ್ಕುಗಳು ನಡುಗಿದುವು. ಅದರ ಉಸಿರಿಗೆ ಪ್ರಳಯಕಾಲದ ವಾಯು ಬೀಸಿತು.

ಆ ವರಾಹವು ಸಮುದ್ರದೊಳಗೆ ರಸಾತಲದ ವರೆಗೆ ಹೋಗಿ, ಅಲ್ಲಿ ಮುಳುಗಿದ್ದ ಭೂಮಿಯನ್ನು ಮೂತಿಯ ಕೊಂಬಿನಲ್ಲಿ ಎತ್ತಿ ಮೇಲಕ್ಕೆ ತಂದಿತು.

ಅದೇ ಸಮಯದಲ್ಲಿ ಹಿರಣ್ಯಾಕ್ಷನು ವರುಣನ ಮೇಲೆ ದಾಳಿ ಮಾಡಿ ಯುದ್ಧಕ್ಕೆ ಕರೆದನು. ಆಗ ವರುಣನು ಅವನನ್ನು ನೋಡಿ, "ಎಲೋ ಹಿರಣ್ಯಾಕ್ಷ, ವೀರಾಧಿವೀರನಾದ ನೀನು ಹೋರಾಡಬೇಕಾದುದು ನನ್ನ ಹತ್ತಿರವಲ್ಲ. ರಸಾತಲದಿಂದ ಭೂಮಿಯನ್ನು ಎತ್ತಿಕೊಂಡು ಹೋಗುವ ಯಜ್ಞ ವರಾಹನೊಂದಿಗೆ" ಎಂದು ಹೇಳಿದನು. ಹಿರಣ್ಯಾಕ್ಷನು ಅದನ್ನು ಕೇಳಿ ಅಲ್ಲಿಂದ ಸೀದಾ ಹಿಂದಿರುಗಿ ಯಜ್ಞ ವರಾಹನ ಮುಂದೆ ಹೋಗಿ ಢೀ ಕೊಟ್ಟನು.

ವರಾಹ ರೂಪದ ವಿಷ್ಣುವಿನೊಂದಿಗೆ ಹಿರಣ್ಯಾಕ್ಷನು ದೊಡ್ಡ ಪರಾಕ್ರಮದಿಂದ ಹೋರಾಡುತ್ತ, ಗದೆ ಯಿಂದ ವಿಷ್ಣುವಿನ ಗದೆಯನ್ನು ಹೊಡೆದು ಉರುಳಿಸಿ ಸುಮ್ಮನೆ ನಿಂತನು. ವಿಷ್ಣು ಅವನ ಯುದ್ಧನೀತಿ



ಹೇಗೆ ಸಾಧ್ಯವಾಗುವುದಿಲ್ಲವೋ ಹಾಗೆಯೇ ವಿಷ್ಣುವನ್ನು ಮರೆತುಬಿಡಲು ನನಗೆ ಆಗುವುದಿಲ್ಲ. ಅದು ನನ್ನ ವಶದಲ್ಲಿ ಇಲ್ಲದ ವಿಚಾರ. ನನ್ನ ಶರೀರದಲ್ಲಿ ಜೀವವಿರುವ ವರೆಗೂ ವಿಷ್ಣು ಚಿಂತನೆ ಇದ್ದೇ ಇರುತ್ತದೆ. ಆ ಜೀವವೂ ವಿಷ್ಣುಮಯ !" ಎಂದನು ಪ್ರಹ್ಲಾದ. ಅವನ ಮಾತಿನ ವೈಖರಿ ವಿದ್ಯೆ ಪೂರ್ತಿ ಮಾಡಿದ ಹುಡುಗನಂತೆಯೇ ಇದ್ದಿತು.

ಇನ್ನೂ ಹಾಲಿನ ವಾಸನೆ ಹೋಗದ ಹುಡುಗ ಪ್ರಹ್ಲಾದನ ತುಟಿಗಳಿಂದ ಹೊರಟ ಆ ಮಾತುಗಳನ್ನು ಕೇಳಿ, ಹಿರಣ್ಯಕಶಿಪು ಬೆರಗಾದನು. ಅದರೊಂದಿಗೆ ಅವನ ಕೋಪವು ನೆತ್ತಿಗೇರಿತು. ಅವನು ಅಗ್ನಿಯಂತೆ ಪ್ರಜ್ವಲಿಸುತ್ತ, ಹಾಗಿದ್ದರೆ ನೀನು ನನ್ನ ಮಗನಾಗಿ ತಪ್ಪಿ ಹುಟ್ಟಿದವನು. ಸಾಯಲೇ ಬೇಕಾದವನು. ಆಹಾರ ಪಾನೀಯಗಳಿಲ್ಲದೆ ಒಣಗಿ ಸಾಯು !" ಎಂದು ಹೇಳಿ ಪ್ರಹ್ಲಾದನನ್ನು ಬೆಳಕು ನುಸುಳದ ಕಾರಾಗಾರದಲ್ಲಿ ಇಡಿಸಿದನು.

ಮಗನಿಗೆ ಬಂದ ಗಂಡಾಂತರವನ್ನು ನೋಡಿ ಲೀಲಾವತಿ ಹಲುಬಿ ಹೊರಳಾಡಿದಳು. ಗಂಡನನ್ನು ತಡೆಯುವ ಶಕ್ತಿ ಅವಳಿಗಿರಲಿಲ್ಲ. ಕೆಲವು ದಿನಗಳು ಕಳೆದುವು.

ಹೆಂಡತಿಯ ದುಃಖವನ್ನು ನೋಡಲಾಗದೆ ಹಿರಣ್ಯಕಶಿಪು ಕಾರಾಗಾರವನ್ನು ತೆರೆಯಿಸಿ, ವಿಷ್ಣು ಕೀರ್ತನೆಯಲ್ಲಿ ತನ್ಮಯನಾಗಿ ಅದೇ ಅರಳಿದ ಕಮಲದಂತೆ ಆನಂದದಲ್ಲಿರುವ ಪ್ರಹ್ಲಾದನನ್ನು ನೋಡಿದನು. ಅನೇಕ ದಿನಗಳಿಂದ ಅನ್ನಪಾನಗಳಿಲ್ಲದೆ ಸೊರಗಿ ಶಲ್ಯನಾಗಿರುವುದಕ್ಕೆ ಬದಲು, ಎಂದಿನಂತೆ ಇರುವವನನ್ನು ನೋಡಿ ಆಶ್ಚರ್ಯವನ್ನೂ, ಹಿಡಿಸಲಾಗದಷ್ಟು ಕೋಪವನ್ನೂ ಹೊಂದಿ, ಪ್ರಹ್ಲಾದನನ್ನು ಆನೆಯ ಕಾಲಿನಿಂದ ತುಳಿಸಿ ಕೊಲ್ಲುವಂತೆ ಆಜ್ಞೆ ಮಾಡಿದನು.

ಪ್ರಹ್ಲಾದನನ್ನು ನೋಡಿದ ಕೂಡಲೇ ಆನೆಗಳು ಸಿಂಹವನ್ನು ನೋಡಿದ ಹಾಗೆ ಹೆದರಿದುವು. ಆದರೂ ಮಾವಟಿಗನು ತಿವಿದು ನಡೆಯಿಸಿದಾಗ, ಪ್ರಹ್ಲಾದನನ್ನು ದಾಟಿಕೊಂಡು ಓಡಿದುವೇ ಹೊರತು ಅವನನ್ನು ಏನೂ ಮಾಡಲಿಲ್ಲ.

ಹಿರಣ್ಯಕಶಿಪುವಿನ ಆಜ್ಞೆಯಂತೆ ಸರ್ಪಗಳಿಂದ ಕಚ್ಚಿಸಿ ಪ್ರಹ್ಲಾದನನ್ನು ಕೊಲ್ಲಿಸಲು ನೋಡಿದಾಗ ಸರ್ಪಗಳು ಪ್ರಹ್ಲಾದನನ್ನು ತಡವಿ ಮುದ್ದಿಸಿ, ಹೆಡೆಯೆತ್ತಿ ಕೊಡೆ ಹಿಡಿದುವು.

ಬೆಟ್ಟದ ಶಿಖರದಿಂದ ಪ್ರಹ್ಲಾದನನ್ನು ದೂಡಿಸಿದ್ದೂ ಆಯಿತು. ಬೆಂಕಿಯಲ್ಲಿ ಹಾಕಿಸಿದರೂ ಅವನ ಬಟ್ಟೆಗೂ ಬೆಂಕಿ ಹಿಡಿಯಲಿಲ್ಲ. ಕಾಲಕೂಟ ವಿಷವನ್ನು ಕುಡಿಸಿದರೂ ಪ್ರಹ್ಲಾದನು ಸುರಕ್ಷಿತನಾಗಿಯೇ ಇದ್ದನು. ಕಡೆಗೆ ಹಿರಣ್ಯಕಶಿಪು ಪ್ರಹ್ಲಾದನನ್ನು ನೋಡಿ "ಎಲೋ, ಶುಂಠಾ, ನೀನು ಸಾಯದೇ ಇರಲು ಕಾರಣವೇನು? ಆ ರಹಸ್ಯ ಹೇಳು, ಕೇಳುತ್ತೇನೆ" ಎಂದನು.

ಪ್ರಹ್ಲಾದನು ನಗುತ್ತಾ "ಅಪ್ಪಾ, ಇದರಲ್ಲಿ ರಹಸ್ಯವೇನೂ ಇಲ್ಲ. ಆಯುಷ್ಯ ತೀರದವರನ್ನು



ಅತ್ತ ಹಿರಣ್ಯಕಶಿಪು ಘೋರವಾದ ತಪಸ್ಸನ್ನು ಮಾಡಲು, ಬ್ರಹ್ಮನು ಪ್ರತ್ಯಕ್ಷನಾದನು. ಆಗ ಹಿರಣ್ಯಕಶಿಪು, ತನಗೆ ಭೂಮಿಯ ಮೇಲಾಗಲಿ, ಆಕಾಶದ ಮೇಲಾಗಲಿ, ಹಗಲಲ್ಲಾಗಲಿ, ಇರುಳಲ್ಲಾಗಲಿ, ಮನೆಯೊಳಗಾಗಲಿ, ಹೊರಗಾಗಲಿ, ಮೃಗಗಳಿಂದಾಗಲಿ, ಮನುಷ್ಯರಿಂದಾಗಲಿ, ದೇವತೆಗಳಾರಿಂದಲೇ ಆಗಲಿ, ಜೀವವಿರುವ ಪ್ರಾಣಿಗಳಿಂದಾಗಲಿ, ಜೀವವಿಲ್ಲದವುಗಳಿಂದಾಗಲಿ, ಸೃಷ್ಟಿಯಲ್ಲಿರುವ ಯಾವ ರೂಪದಿಂದಲೇ ಆಗಲಿ ಹೀಗೆ ಅನೇಕ ವಿಧಗಳಿಂದ ತನಗೆ ಸಾವು ಬಾರದಂತಹ ವರವನ್ನು ಕೇಳಿದನು. ಬ್ರಹ್ಮನು ಹಾಗೆಯೇ ವರಗಳನ್ನೆಲ್ಲ ಕೊಟ್ಟು ಅಂತರ್ಧಾನನಾದನು.

ಹೀಗೆ ವರಗಳನ್ನು ಹೊಂದಿದ ಮೇಲೆ ಇನ್ನು ತನಗೆ ಯಾರೂ ಇದಿರಿಲ್ಲವೆಂಬ ಗರ್ವದಿಂದ ಹಿರಣ್ಯಕಶಿಪು ತಪಸ್ಸಿನಿಂದ ಎದ್ದು ಬರುತ್ತಿರುವಾಗ, ನಾರದನಿಂದ ನಡೆದ ಸಂಗತಿಯನ್ನು ಕೇಳಿ ನಾರದನ ಆಶ್ರಮಕ್ಕೆ ಹೋಗಿ, ತನ್ನ ಹೆಂಡತಿಯನ್ನೂ, ಕುಮಾರನನ್ನೂ ನೋಡಿದನು. ಕುಮಾರನಿಗೆ ಪ್ರಹ್ಲಾದನೆಂದು ನಾಮಕರಣ ಮಹೋತ್ಸವವನ್ನು ನಡೆಸಿದ ಮೇಲೆ ಕುಮಾರನನ್ನೂ, ಹೆಂಡತಿಯನ್ನೂ ರಾಜಧಾನಿಗೆ ಕರೆದುಕೊಂಡು ಹೋದನು.

ಇಂದ್ರನು ಮಾಡಿದ ಕೆಲಸವನ್ನು ತಿಳಿದು ಮೊದಲು ಅವನಿಗೆ ಪ್ರತೀಕಾರ ಮಾಡಲು ನಿಶ್ಚಯಿಸಿದನು ಹಿರಣ್ಯಕಶಿಪು. ಅವನು ಕೂಡಲೇ ಸ್ವರ್ಗದ ಮೇಲೆ ದಂಡಯಾತ್ರೆ ಮಾಡಿ, ಇಂದ್ರನನ್ನು ಓಡಿಸಿ, ಸ್ವರ್ಗ ಸಿಂಹಾಸನವನ್ನು ಸ್ವಾಧೀನಪಡಿಸಿಕೊಂಡನು. ದಿಕ್ಕುಗಳೆಲ್ಲವನ್ನೂ ಜಯಿಸಿ ದಿಕ್ಪಾಲಕರನ್ನು ತನ್ನ ಆಜ್ಞೆಗೆ ಒಳಪಡಿಸಿಕೊಂಡನು. ದೇವತೆಗಳನ್ನೆಲ್ಲಾ ಹಿಡಿದು ದನಗಳನ್ನು ಬಡಿಯುವ ಹಾಗೆ ಬಡಿದನು. ಶಚೀದೇವಿಯನ್ನು ಅವಮಾನಪಡಿಸಲು ನೋಡಿದಾಗ ಲೀಲಾವತಿ ಅವನನ್ನು ತಡೆದಳು. ಈ ರೀತಿಯಾಗಿ ಹಿರಣ್ಯಕಶಿಪು ಮೇಲೆ ಮೇಲೆ ವಿಜೃಂಭಿಸಿ ಮುನಿಗಳ ಆಶ್ರಮಗಳನ್ನು ಸುಡಿಸಿ ಹಾಕಿದನು. ವಿಷ್ಣುವಿನ ಮೇಲೆ ವಿಶ್ವಾಸವಿಟ್ಟವರನ್ನೆಲ್ಲಾ ಚಿತ್ರಹಿಂಸೆಗಳಿಂದ ವಧಿಸಿದನು. ವಿಷ್ಣುವಿಗೆ ವಿರುದ್ಧವಾಗಿ ವರ್ತಿಸುವುದೇ ಅವನ ಪರಮ ಧ್ಯೇಯವಾಗಿ ಹೋಯಿತು.

ಆದರೂ ವಿಷ್ಣು ತನ್ನ ಇದಿರಿಗೆ ಬರಲಿಲ್ಲವೆಂದುಕೊಂಡು, ಆ ರೋಷವಿಲ್ಲದ ಹೇಡಿಯ ವಾಸಸ್ಥಾನವನ್ನೇ ಮುಳುಗಿಸಿಬಿಡುತ್ತೇನೆಂದು ವೈಕುಂಠಕ್ಕೆ ದಾಳಿ ಹೊರಟನು. ಅಲ್ಲೆಲ್ಲಿಯೂ ವಿಷ್ಣು ಕಾಣಲಿಲ್ಲ.

"ನನಗೆ ಹೆದರಿ ಅದೃಶ್ಯನಾಗಿ ಎಲ್ಲೋ ಮೂಲೆಯಲ್ಲಿ ಅಡಗಿದ್ದಾನೆ ಹೇಡಿ ಹಂದಿ!" ಎಂದು ಹಿರಣ್ಯಕಶಿಪು ತನ್ನ ಮನೆಗೆ ಹಿಂದಿರುಗಿದನು.

ಪ್ರಹ್ಲಾದನು ದಿನದಿನಕ್ಕೆ ಪ್ರವರ್ಧಮಾನವಾಗಿ ಬೆಳೆಯುತ್ತಾ, ಯಾವಾಗಲೂ ವಿಷ್ಣು ಸ್ಮರಣೆ ಮಾಡುತ್ತಾ ಆಟಪಾಟಗಳ ಲೀಲೆಗಳಿಂದ ಎಲ್ಲರನ್ನೂ ಸಂತೋಷಪಡಿಸುತ್ತಾ ಇದ್ದನು. ಅದೆಲ್ಲ ಸರಿಯಾಗಿದ್ದರೂ, ಅವನ ವಿಷ್ಣು ಸ್ಮರಣೆಯ ಸಂಗತಿ



ಮಾತ್ರ ಹಿರಣ್ಯಕಶಿಪುವನ್ನು ವಿಚಾರಕ್ಕೀಡುಮಾಡಿತು. ತನಗೆ ವಿಷ್ಣುವನ್ನು ಸ್ಮರಿಸುವ ಮಗನು ಏಕೆ ಹುಟ್ಟ ಬೇಕು? ಇದನ್ನು ಚಿಕ್ಕಂದಿನಲ್ಲೇ ಸರಿಪಡಿಸಿಬಿಡ ಬೇಕೆಂದು, ಗುರುಪುತ್ರರಾದ ಚಂಡ ಮತ್ತು ಅಮರ್ಕರ ಕೈಗೆ ಒಪ್ಪಿಸಿ ವಿದ್ಯಾಬುದ್ಧಿಗಳನ್ನು ಚೆನ್ನಾಗಿ ಕಲಿಸ ಬೇಕೆಂದು ಹೇಳಿದನು.

ಪ್ರಹ್ಲಾದನು ಗುರುಕುಲದಲ್ಲಿ ಹರಿಧ್ಯಾನದೊಂದಿಗೆ ಎಲ್ಲಾ ವಿದ್ಯೆಗಳನ್ನೂ ಕಲಿತು ಮುಗಿಸಿದನು. ತನ್ನ ಗೆಳೆಯರಾದ ಹುಡುಗರಿಗೂ, ಸಹ ವಿದ್ಯಾರ್ಥಿಗಳಿಗೂ ವಿಷ್ಣುವಿನ ಮಹತ್ವವನ್ನು ಹೇಳುತ್ತ ಅವರನ್ನೆಲ್ಲ ವಿಷ್ಣುಭಕ್ತರನ್ನಾಗಿ ಮಾಡಿದನು ಪ್ರಹ್ಲಾದ.

ವಿದ್ಯಾವಂತನಾದ ಪ್ರಹ್ಲಾದನನ್ನು ಕರೆದುಕೊಂಡು ಚಂಡಾಮರ್ಕರು ಹಿರಣ್ಯಕಶಿಪುವಿನ ಬಳಿಗೆ ಹೋಗಿ ಒಪ್ಪಿಸಿದರು. ಹಿರಣ್ಯಕಶಿಪು ತನ್ನ ಕುಮಾರನನ್ನು ತೊಡೆಯ ಮೇಲೆ ಕೂಡಿಸಿಕೊಂಡು, "ಕಂದಾ, ಪ್ರಹ್ಲಾದ, ನೀನು ಕಲಿತ ವಿದ್ಯೆಗಳಲ್ಲಿ ಒಳ್ಳೆಯ ಒಂದು ವಾಕ್ಯವನ್ನು ಹೇಳು ನೋಡುವಾ!" ಎಂದನು.

ಅದಕ್ಕೆ ಪ್ರಹ್ಲಾದನು "ಅಪ್ಪಾ, ಗುರುಗಳು ಹೇಳಿ ಕೊಟ್ಟ ವಿದ್ಯೆಗಳನ್ನೆಲ್ಲಾ ಮನಸ್ಸುಗೊಟ್ಟು ಕಲಿತಿದ್ದೇನೆ. ಎಲ್ಲಾ ವಿದ್ಯೆಗಳಿಗಿಂತಲೂ ದೊಡ್ಡ ವಿದ್ಯೆ ವಿಷ್ಣುವಿನಲ್ಲಿ ಅಚಲ ಭಕ್ತಿಯಿಂದಿರುವುದೇ. ಎಲ್ಲಾ ವಿದ್ಯೆಗಳಿಗೂ ವಿಷ್ಣುಭಕ್ತಿಯೇ ಆಧಾರ!" ಎಂದು ಹೇಳುವುದನ್ನು ಕೇಳುತ್ತಿದ್ದಂತೆ ಹಿರಣ್ಯಕಶಿಪುವಿನ ಕೋಪವು ಏರುತ್ತಾ ಹೋಯಿತು.

ಹಿರಣ್ಯಕಶಿಪು ಪ್ರಹ್ಲಾದನನ್ನು ಕೆಳಕ್ಕೆ ದೂಡಿ, ಕೆಂಗಣ್ಣಿನಿಂದ ಚಂಡಾಮರ್ಕರನ್ನು ನೋಡಿ, "ಇದುವೋ ನೀವು ಇವನಿಗೆ ಕಲಿಸಿದ ವಿದ್ಯೆ?" ಎಂದು ಕೇಳಿದನು,

ಚಂಡಾಮರ್ಕರಿಬ್ಬರೂ ಹೆದರಿ ನಡುಗುತ್ತ, "ನಮ್ಮ ತಪ್ಪೇನೂ ಇಲ್ಲ ಪ್ರಭೂ. ನಮ್ಮ ಮೇಲೆ ಕೋಪಿಸಬೇಡಿ!" ಎಂದು ಪ್ರಾರ್ಥಿಸಿಕೊಂಡು, ಗುರುಕುಲದಲ್ಲಿ ಪ್ರಹ್ಲಾದನು ಯಾವ ವಿಧವಾಗಿ ಪ್ರವರ್ತಿಸಿದನೆಂಬುದನ್ನು ಬಿನ್ನವಿಸಿಕೊಂಡರು.

ಹಿರಣ್ಯಕಶಿಪು ಮಗನನ್ನು ನೋಡಿ, "ಮಗನೇ, ಪ್ರಹ್ಲಾದಾ! ವಿಷ್ಣು ಮಹಾಕಳ್ಳ. ಹಂದಿಯ ರೂಪ ತಾಳಿ ನಿನ್ನ ಚಿಕ್ಕಪ್ಪನನ್ನು ಕೊಂದಿದ್ದಾನೆ. ನಮ್ಮ ರಾಕ್ಷಸ ಕುಲಕ್ಕೆ ಅವನು ಪರಮ ಶತ್ರು. ನೀನು ವಿಷ್ಣುವನ್ನು ಹೊಗಳುವುದು ಕ್ಷಮಿಸಲಾಗದ ಅಪರಾಧ. ಅದು ಕುಲಕ್ಕೆ ದ್ರೋಹ. ವಿಷ್ಣು ಭಕ್ತಿ ಬಿಟ್ಟು ಬಿಡು, ಮರೆತುಬಿಡು!" ಎಂದನು.

ಕೂಡಲೇ ಪ್ರಹ್ಲಾದನು, "ಅಪ್ಪಾ, ದಾನವೇಶ್ವರನಾದ ನೀನು ಹೇಗೆ ಬೇಕಾದರೂ ನನ್ನನ್ನು ಶಾಸಿಸ ಬಹುದು. ಆದರೆ ನಾನೇನು ಮಾಡಲಿ? ಕಬ್ಬಿಣದ ತುಂಡು ಅಯಸ್ಕಾಂತವನ್ನು ಹೇಗೆ ಅಂಟಿಕೊಳ್ಳು ವುದೋ ಹಾಗೆಯೇ ನನ್ನ ಮನಸ್ಸು ಆ ವಿಷ್ಣುವಿನ ಮೇಲೆಯೇ ಲಗ್ನವಾಗಿ ಹೋಗಿದೆ. ಮಂದಾರ ಪುಷ್ಪದ ಮಕರಂದವನ್ನು ದುಂಬಿಯಿಂದ ಬಿಡಲು

ಯಾವುದೂ ಕೊಲ್ಲಲಾರದು. ಆನೆ, ಹಾವು, ಕಲ್ಲು, ಬೆಂಕಿ, ನೀರುಗಳಲ್ಲಿಯೂ, ಪ್ರಪಂಚದ ಎಲ್ಲದರಲ್ಲಿಯೂ ನಿನ್ನಲ್ಲಿಯೂ, ನನ್ನಲ್ಲಿಯೂ ಇರುವವನು ಆ ವಿಷ್ಣುವೇ. ಈ ಸತ್ಯವನ್ನು ನೀನು ತಿಳಿದುಕೊಳ್ಳಲಿಲ್ಲ. ನನ್ನನ್ನು ಕೊಲ್ಲಬೇಕೆಂದು ನಿನಗೆ ತೋರುವುದೂ, ನಾನು ಸಾಯದಿರುವುದೂ ಆತನ ಲೀಲಾವಿಲಾಸವೇ! ಮತ್ತೇನಿಲ್ಲ ಅಪ್ಪಾ !" ಎಂದನು.

ಆ ಮಾತು ಕೇಳಿ ಹಿರಣ್ಯಕಶಿಪು ಕೋಪಾವೇಶದಿಂದ ಪ್ರಹ್ಲಾದನನ್ನು ದರದರ ಎಳೆದುಕೊಂಡು ಸಭಾಮಂಟಪದ ಮಧ್ಯದಲ್ಲಿ ನಿಲ್ಲಿಸಿ, ತನ್ನ ಗದೆಯನ್ನು ಹಿಡಿದನು. ಆ ದೃಶ್ಯವನ್ನು ನೋಡಿ ಲೀಲಾವತಿ ಮೂರ್ಛೆ ಹೋಗಿಬಿದ್ದಳು. ಸುತ್ತಲೂ ರಾಕ್ಷಸ ಪ್ರಮುಖರು ಬೊಂಬೆಗಳ ಹಾಗೆ ನಿಂತಿದ್ದರು.

ಸಭಾಮಂಟಪದ ಇದಿರಿನಲ್ಲಿ ಲೋಹದಿಂದ ನಿರ್ಮಿತವಾದ ದೊಡ್ಡದೊಂದು ಜಯಸ್ತಂಭವಿದ್ದಿತು. ಹಿರಣ್ಯಕಶಿಪು ಪ್ರಹ್ಲಾದನಿಗೆ ಆ ಜಯಸ್ತಂಭವನ್ನು ತೋರಿಸುತ್ತ "ಎಲೋ ಕುಲದ್ರೋಹಿ! ಅಗೋ, ಅದು ನನ್ನ ವಿಜಯಸ್ತಂಭ! ನನ್ನ ತಮ್ಮನನ್ನು ಕೊಂದ ವಿಷ್ಣುವಿನೊಂದಿಗೆ ಹೋರಾಡಿ ನಿನ್ನ ಎದುರಿನಲ್ಲೇ ಅವನನ್ನು ಸಂಹರಿಸಿ ನನ್ನ ಹಗೆ ತೀರಿಸಿಕೊಳ್ಳುತ್ತೇನೆ. ಆಗ ತಾನೇ ನೀನು ಅವನನ್ನು ಮರೆಯುವಿ! ಬರಲಿ ನನ್ನ ಮುಂದೆ ಆ ವಿಷ್ಣು! ಎಲ್ಲದರಲ್ಲೂ ಇರುವ ಅವನು ಆ ಕಂಬದಲ್ಲಿ ಇದ್ದಾನೋ? ಹೇಳು!" ಎಂದು ಕೇಳಿದನು.

"ಆ ಸಂದೇಹವೇ ಬೇಡ ಅಪ್ಪಾ. ಎಲ್ಲದರಲ್ಲೂ ಇರುವವನು ಆ ಕಂಬದಲ್ಲಿಯೂ ಇದ್ದಾನೆ" ಎಂದನು ಪ್ರಹ್ಲಾದ.

ಹಿರಣ್ಯಕಶಿಪು ಸರಸರನೆ ಹೋಗಿ ಗದೆಯಿಂದ ಆ ಕಂಬವನ್ನು ಹೊಡೆದನು. ಮರುಕ್ಷಣದಲ್ಲಿ ಪ್ರಳಯ ಭಯಂಕರ ಧ್ವನಿಯೊಂದು ಭೂಮಿ ಆಕಾಶಗಳ ಅಂತರಾಳದಲ್ಲಿ ಮೊಳಗಿತು. ಆ ಧ್ವನಿಯೊಂದಿಗೆ ಚರಾಚರಗಳೆಲ್ಲಾ ನಡುಗಿದುವು. ಕಂಬದಿಂದ ಹೊಗೆ ಹೊರಟು ಮೇಘ ಮಂಡಲದಲ್ಲಿ ಹರಡಿತು. ಮೇಘಗಳ ತುಣುಕುಗಳು ನಾಲ್ಕು ಸುತ್ತಲೂ ಬೀಳುತ್ತಿರಲು, ಸ್ತಂಭವು ಎರಡಾಗಿ ಸೀಳಿಕೊಂಡಿತು. ಅದರೊಳಗಿನಿಂದ ಹೊರಟ ಕಣ್ಣು ಕೋರೈಸುವ ಪ್ರಕಾಶದ ನಡುವೆ, ವಿಚಿತ್ರ ವಿಲಕ್ಷಣವಾದ ಆಕೃತಿಯೊಂದು ಹೊರಟಿತು. ಅದೇ ವಿಷ್ಣುವಿನ ದಶಾವತಾರಗಳಲ್ಲಿ ನಾಲ್ಕನೆಯದಾದ ನರಸಿಂಹಾವತಾರ. ಸಿಂಹದ ತಲೆಯೂ ಉಗುರುಗಳೂ, ಸೃಷ್ಟಿಯಲ್ಲಿಲ್ಲದ ರೂಪದಲ್ಲಿ ನರಸಿಂಹಮೂರ್ತಿ ಪ್ರಳಯ ಗರ್ಜನೆಯಿಂದ ಹೊರಗೆ ಹಾರಿದನು. ಆ ಗರ್ಜನೆ ಪಾಂಚಜನ್ಯ ಶಂಖ ಧ್ವನಿಯಂತೆ ಮೊಳಗಿತು. ಸುದರ್ಶನ ಚಕ್ರವು ನರಸಿಂಹನ ಸುತ್ತಲೂ ತಿರುಗುತ್ತಿದ್ದಿತು.






ಕಂಬದಿಂದ ಹೊರಬಿದ್ದ ವಿಲಕ್ಷಣಾವತಾರ ಸ್ವರೂಪವನ್ನು ನೋಡಿದ ಕೂಡಲೇ, ಹಿರಣ್ಯಕಶಿಪು ತನ್ನ ಕುಮಾರನನ್ನು ಆಲಿಂಗಿಸಿಕೊಂಡು "ಭಲೇ ಪ್ರಹ್ಲಾದಾ! ನಿನ್ನ ಮೂಲಕವಾಗಿ ಇಷ್ಟು ದಿನ ನಾನು ಹುಡುಕುವ ನನ್ನ ಶತ್ರು ವಿಷ್ಣು ಈಗ ಸಿಕ್ಕಿದ. ಹಗೆ ತೀರಿಸಿಕೊಳ್ಳುವ ಅವಕಾಶ ಬಂತು. ಇವನನ್ನು ಈಗಲೇ ಮುಗಿಸಿ ಬಿಡುತ್ತೇನೆ" ಎಂದು ಹೇಳಿ ಗದೆಯನ್ನೆತ್ತಿಕೊಂಡು ನರಸಿಂಹಾವತಾರದೊಂದಿಗೆ ಹೋರಾಡಲು ಎದೆಯುಬ್ಬಿಸಿ ನಿಂತನು. ಆಗ ನರಸಿಂಹನು ಊರು ಕೇರಿಗಳೆಲ್ಲ ನಡುಗುವಂತೆ ಪ್ರಳಯಗರ್ಜನೆ ಮಾಡುತ್ತ, ಹಾರಿ ಹಿರಣ್ಯಕಶಿಪುವನ್ನು ಅಪ್ಪಿ ಅಮುಕಿ ಹಿಡಿದು, ಮಗುವಿನಂತೆ ಎತ್ತಿ ಸಭಾಮಂಟಪದ ದ್ವಾರದ ಬಳಿಗೆ ತಂದನು. ಹಿರಣ್ಯಕಶಿಪುವಿನ ಕೈಯಲ್ಲಿದ್ದ ಗದೆ ಜಾರಿ ಬಿದ್ದಿತು.

ಹೊರಗೂ ಒಳಗೂ ಅಲ್ಲದ ದ್ವಾರದ ಹೊಸ್ತಿಲ ಮೇಲೆ, ರಾತ್ರಿಯೂ ಹಗಲೂ ಅಲ್ಲದ ಮುಸ್ಸಂಜೆಯ ಸಮಯದಲ್ಲಿ, ಆಕಾಶವೂ ಭೂಮಿಯೂ ಅಲ್ಲದ ತನ್ನ ತೊಡೆಗಳ ಮೇಲೆ ಅಂಗಾತ ಮಲಗಿಸಿ, ಸಜೀವವೂ ನಿರ್ಜೀವವೂ ಅಲ್ಲದ ಉಕ್ಕಿನಂತಹ ಉಗುರುಗಳಿಂದ, ಹಿರಣ್ಯಕಶಿಪು ಬ್ರಹ್ಮನಿಂದ ಪಡೆದ ವರಗಳಿಗೆಲ್ಲ ಭಿನ್ನ ರೀತಿಯಲ್ಲಿ ವಿಷ್ಣು, ನರನೂ ಮೃಗವೂ ಅಲ್ಲದ ರೂಪದಲ್ಲಿ ಹಿರಣ್ಯಕಶಿಪುವಿನ ಎದೆಯನ್ನೂ ಹೊಟ್ಟೆಯನ್ನೂ ಸೀಳಿ ಕೊಂದುಬಿಟ್ಟನು.

ಆಗ ರಾಕ್ಷಸ ಸೈನ್ಯವು ಸಮೂಹವಾಗಿ ನರಸಿಂಹನನ್ನು ಇದಿರಿಸಲು ಬರುತ್ತಿರಲು, ವಿಷ್ಣುಚಕ್ರವು ಅವರನ್ನೆಲ್ಲಾ ತರಿದು ಹಾಕಿತು.

ನರಸಿಂಹಮೂರ್ತಿ ಹಿರಣ್ಯಕಶಿಪುವಿನ ಕರುಳನ್ನು ಎತ್ತಿ ಬಿಡಿಸಿ ತನ್ನ ಕಂಠಹಾರವಾಗಿ ಹಾಕಿಕೊಂಡನು. ನರಸಿಂಹನ ಅತ್ಯುಗ್ರವಾದ ಅಟ್ಟಹಾಸವನ್ನು ನೋಡಿ ದೇವತೆಗಳೆಲ್ಲಾ ಹೆದರಿದರು. ಆಗ ಪ್ರಹ್ಲಾದನು ನರಸಿಂಹಮೂರ್ತಿಯನ್ನು ಸ್ತುತಿಸುತ್ತ ಶಾಂತನಾಗುವಂತೆ ಮಾಡಿದನು.

ನರಸಿಂಹನು ಪ್ರಹ್ಲಾದನೊಂದಿಗೆ, ತಂದೆಗೆ ಉತ್ತರಕ್ರಿಯೆಗಳನ್ನು ಚೆಂದಾಗಿ ಮಾಡಿ, ರಾಜ್ಯ

೬. ಶ್ರೀವಿಕ್ರಮ ವಾಮನಾವತಾರ



ಪಾಲನೆ ಮಾಡುವಂತೆ ಹೇಳಿ ಆಶೀರ್ವದಿಸಿ, ಅಂತರ್ಧಾನನಾದನು. ಜಯವಿಜಯರ ಮೊದಲನೇ ಜನ್ಮ ಹೀಗೆ ಮುಗಿಯಿತು.

ವಿಷ್ಣುವಿನ ಆಣತಿಯಂತೆಯೇ ಪ್ರಹ್ಲಾದನು ಚಿರಕಾಲ ರಾಜ್ಯ ಪರಿಪಾಲನೆ ಮಾಡಿ, ತನ್ನ ಕುಮಾರನಾದ ವಿರೋಚನನಿಗೆ ಪಟ್ಟಗಟ್ಟಿ, ವಿಷ್ಣು ಭಕ್ತಿ ತತ್ಪರನಾಗಿ ವನಕ್ಕೆ ಹೋಗಿ ತಪಸ್ಸಿಗೆ ಕುಳಿತನು.

ವಿರೋಚನನ ತರುವಾಯ ಅವನ ಕುಮಾರನಾದ ಬಲಿ ಪಟ್ಟಕ್ಕೆ ಬಂದು ರಾಜ್ಯಪಾಲನೆ ಮಾಡ ತೊಡಗಿದನು. ರಾಕ್ಷಸರ ಶಿಲ್ಪಿಯಾದ ಮಯನು ನೀರ ಮೇಲೆಯೂ, ನೆಲದ ಮೇಲೆಯೂ ಅಂತರಿಕ್ಷದಲ್ಲಿಯೂ, ಪ್ರಯಾಣ ಮಾಡಬಲ್ಲ ದೊಡ್ಡ ವಾಹನವನ್ನು ನಿರ್ಮಾಣ ಮಾಡಿ ಅವನಿಗೆ ಕೊಟ್ಟನು.

ಅಮೃತವು ತಮಗೆ ದಕ್ಕದಂತೆ ಮಾಡಿದ ಅನ್ಯಾಯದಿಂದಾಗಿ ರಾಕ್ಷಸರ ಹೃದಯದಲ್ಲಿ ಪ್ರತೀಕಾರವಾಂಛೆ ಇದ್ದೇ ಇದ್ದಿತು. ಇದು ನ್ಯಾಯವಾದ ಪಗೆಯೇ ಎಂದುಕೊಂಡು ಬಲಿ ದೇವತೆಗಳೊಂದಿಗೆ ತನ್ನ ಹಿರಿಯರ ಹಾಗೆಯೇ ಹಗೆ ಇಟುಕೊಂಡು ಯುದ್ಧಕ್ಕೆ ಇಳಿದನು.

ದೇವತೆಗಳು ಅಮೃತ ಸೇವಿಸಿ ಅಮರರಾದೆವೆಂಬ ಧೈರ್ಯೋತ್ಸಾಹದಲ್ಲಿ ಬಲಿಯನ್ನು ಬಲವಾಗಿ ಇದಿರಿಸಿ ಹೋರಾಡಿದರು. ಬಲಿಗೂ ಇಂದ್ರನಿಗೂ ಮುಖಾಮುಖೀ ಸೆಣಸಾಟ ಬಹಳ ಜೋರಿನಿಂದ ನಡೆಯಿತು. ದೇವ ಪ್ರಮುಖರಿಗೂ, ರಾಕ್ಷಸ ಪ್ರಮುಖರಿಗೂ ಖಾಡಾ ಖಾಡೀ ಯುದ್ಧ ನಡೆಯಿತು. ಆ ದೇವದಾನವ ಸಂಗ್ರಾಮದಲ್ಲಿ ರಾಕ್ಷಸರು ಪೂರ್ತಿ ಸೋತು ಹೋದರು. ಹತರಾಗಿ ಬಿದ್ದ ರಾಕ್ಷಸರನ್ನು, ರಾಕ್ಷಸರ ಕುಲಗುರುವಾದ ಶುಕ್ರಾಚಾರ್ಯನು, ಮೃತಸಂಜೀವಿನೀ ವಿದ್ಯೆಯಿಂದ ತಿರುಗಿ ಬದುಕಿಸಿಬಿಟ್ಟನು.

ಒಂದು ಸಾರಿ ಸೋತು ಹೋದುದರಿಂದ ಬಲಿ ಇನ್ನಿಷ್ಟು ದೃಢ ಸಂಕಲ್ಪ ತೊಟ್ಟು ಹಟ ಹಿಡಿದು ತನ್ನ ರಾಕ್ಷಸ ಸೈನಿಕರನ್ನೆಲ್ಲಾ ಒಂದು ಗೂಡಿಸಿ, ತಾನೇ ನಾಯಕನಾದನು. ಸೈನಿಕರಿಗೆ ನವೋತ್ಸಾಹ ಬರುವಂತಾಗಲು ಮೊದಲು ಭೂಮಂಡಲವನ್ನೆಲ್ಲಾ ಜಯಿಸಿ ಕಟ್ಟುದಿಟ್ಟವಾದ ತನ್ನ ಪರಿಪಾಲನೆಯನ್ನು ನೆಲೆಗೊಳಿಸಿ ಬಲೀಂದ್ರ ಚಕ್ರವರ್ತಿ ಎನ್ನಿಸಿಕೊಂಡನು. ಶುಕ್ರನು ಅವನಿಂದ ನೂರು ಅಶ್ವಮೇಧ ಯಾಗಗಳನ್ನೂ ಮಾಡಿಸಿದನು.

ಇದನ್ನೆಲ್ಲ ನೋಡಿ ಇಂದ್ರನು ಹೆದರಿಕೊಂಡಿರುವಾಗಲೇ ಬಲೀಂದ್ರನು ಸ್ವರ್ಗದ ಮೇಲೆ ವಿಜೃಂಭಿಸಿಕೊಂಡು ದಾಳಿ ಬಂದನು. ಅವನ ಮಹಾ ರಭಸವನ್ನು ತಾಳಿಕೊಳ್ಳಲಾಗದೆ, ಇಂದ್ರಾದಿ ದೇವತೆಗಳೆಲ್ಲಾ ಸ್ವರ್ಗವನ್ನು ಬಿಟ್ಟುಕೊಟ್ಟು ಗುಡ್ಡಗಾಡುಗಳಿಗೆ ಓಡಿಹೋದರು. ಇಂದ್ರನ ಉಚ್ಚೈಶ್ರವ ಕುದುರೆ ಬಲೀಂದ್ರನ ವಶವಾಯಿತು, ದಿಕ್ಪಾಲಕರು ಬಲಿಗೆ ವಶವರ್ತಿಗಳಾಗಿ ತಲೆ ತಗ್ಗಿಸಿ ತಿರುಗ ತೊಡಗಿದರು. ಸ್ವರ್ಗ ಮರ್ತ್ಯ ಪಾತಾಳಗಳೆಂಬ ಮೂರು

ಲೋಕಗಳನ್ನೂ ಬಲಿಚಕ್ರವರ್ತಿ ಏಕಛತ್ರಾಧಿಪತಿಯಾಗಿ ಆಳತೊಡಗಿದನು.

ಆಗ ಇಂದ್ರನ ತಾಯಿಯಾದ ಅದಿತಿ ತನ್ನ ಗಂಡ ಕಶ್ಯಪ ಪ್ರಜಾಪತಿಯ ಬಳಿಗೆ ಹೋಗಿ, ತನ್ನ ಸಂತತಿಯವರಾದ ದೇವತೆಗಳೂ, ಇಂದ್ರನೂ, ಶಚೀದೇವಿಯೂ ಅರಣ್ಯದಲ್ಲಿ ಪಡುವ ಕಷ್ಟಗಳನ್ನು ಹೇಳಿಕೊಂಡು, ಅವರ ರಾಜ್ಯವು ಅವರಿಗೆ ಸಿಗುವ ಹಾಗೆ ಮಾಡಬೇಕೆಂದು ಪ್ರಾರ್ಥಿಸಿಕೊಂಡಳು.

ಅದಕ್ಕೆ ಕಶ್ಯಪನು ತನ್ನ ಹೆಂಡತಿಯೊಂದಿಗೆ ವಿಷ್ಣು ವ್ರತವನ್ನು ಶ್ರದ್ಧೆಯಿಂದ ಆಚರಿಸುವಂತೆ ಹೇಳಿದನು. ಅದಿತಿಯ ಪೂಜಾರಾಧನೆಗಳಿಂದ ವಿಷ್ಣು ಪರಮ ಪ್ರೀತನಾದನು. ತಾನು ಅವಳ ಹೊಟ್ಟೆಯಲ್ಲಿ ಹುಟ್ಟಿ ಕಷ್ಟ ಪರಿಹಾರ ಮಾಡುವೆನೆಂದು ಅಭಯವನ್ನಿತ್ತನು.

ಈ ವಿಧವಾಗಿ ವಿಷ್ಣು ಅದಿತಿಕಶ್ಯಪರಿಗೆ ಕುಬ್ಜ ರೂಪದಿಂದ ಹುಟ್ಟಿದನು. ಇದು ವಿಷ್ಣುವಿನ ಮುಖ್ಯವಾದ ದಶಾವತಾರಗಳಲ್ಲಿ ಐದನೆಯದಾದ ವಾಮನಾವತಾರ.

ವಾಮನನಿಗೆ ತಂದೆ ಉಪನಯನ ಮಾಡಿ, ವೇದ ವಿದ್ಯೆಗಳನ್ನು ಪೂರ್ತಿ ಕಲಿಸಿದನು. ಇಂದ್ರನಿಗೆ ತಮ್ಮನಾದ ವಾಮನನು ಅದಿತಿ ತಾಯಿಯ ಮುದ್ದು ಕುಮಾರನಾಗಿ ಬೆಳೆದನು.

ಆಗ ಬಲಿಚಕ್ರವರ್ತಿ ನರ್ಮದಾ ನದಿಯ ತೀರದಲ್ಲಿ ಯಾಗಗಳೊಳಗೆಲ್ಲಾ ದೊಡ್ಡದಾದ ವಿಶ್ವಜಿದ್ಯಾಗವನ್ನು ಶುಕ್ರಾಚಾರ್ಯನ ಪೌರೋಹಿತ್ಯದಲ್ಲಿ ಪ್ರಾರಂಭಿಸಿದ್ದನು. ಅದರ ಅಂಗಕ್ರಿಯೆಯಾಗಿ ದೊಡ್ಡ ದೊಡ್ಡ ದಾನಗಳನ್ನು ಮಾಡಿಕೊಂಡಿದ್ದನು.

ವಾಮನನು ಜನಿವಾರ, ಕೃಷ್ಣಾಜಿನ, ಕಮಂಡಲು, ಓಲೆಕೊಡೆಗಳನ್ನು ಧರಿಸಿ ಬಾಲ ವಟುವಾಗಿ ಹಾವುಗೆಯನ್ನು ಮೆಟ್ಟಿಕೊಂಡು, ಮೂರ್ತೀಭವಿಸಿ ನಡೆಯುವ ಬ್ರಹ್ಮ ತೇಜಸ್ಸಿನಂತೆ ಬಲಿಚಕ್ರವರ್ತಿಯ ಬಳಿಗೆ ಹೊರಟನು.



ಬುಡುಬುಡು ನಡಿಗೆಗಳಿಂದ ಬರುವ ವಾಮನ ವಟುವನ್ನು ನೋಡಿ ಯಾಗಶಾಲೆಯಲ್ಲಿದ್ದವರೆಲ್ಲಾ ಮುಗ್ಧಮೋಹಿತರಾದರು. ವಾಮನನು ಬಲಿಚಕ್ರವರ್ತಿಯ ಇದಿರಿಗೆ ಹೋಗಿ "ಜಯಜಯ ಬಲೀಂದ್ರಾ !" ಎಂದನು ಆನಂದವನ್ನು ಸ್ಪಂದಿಸುವ ಧ್ವನಿಯಿಂದ.

ವಾಮನನ್ನು ನೋಡಿದ ಕೂಡಲೇ ಬಲೀಂದ್ರನಿಗೆ ಅತ್ಯಾನಂದವಾಯಿತು. "ಬಾ ಪುಟ್ಟವಟು ಕಂದಾ! ಯಾರು ನೀನು ? ಇನ್ನೂ ಹಾಲಿನ ಹಸೆಯಾರದ ಎಳೆಮೂಗಿನ ವಟುವಾಗಿ ಯಾವ ಕಡೆಗೆ ಹೊರಡಿರುವೆಯಪ್ಪಾ ?" ಎಂದು ಕೇಳಿದನು.

"ಬಲೀಂದ್ರನೆಂಬ ನಿನ್ನ ಕೀರ್ತಿ ಕೇಳಿ ನಿನ್ನ ಬಳಿಗೇ ಬಂದಿದ್ದೇನೆ. ನಾನು ಯಾರೆಂದು ಬೇರೆ ಹೇಳಬೇಕೆ ? ಇರುವವರೆಲ್ಲರೂ ನನ್ನವರೇ. ಆದರೂ ಯಾಚಿಸಲಿಕ್ಕೆ ಬಂದಿದ್ದೇನೆ. ನಿನ್ನ ತಾತ ಮುತ್ತಾತಂದಿರು ವೀರಾಧಿವೀರರಾಗಿದ್ದರೆ, ನಿನ್ನ ಬಲ



ಪರಾಕ್ರಮಗಳು ದಿಗಂತಗಳನ್ನು ದಾಟಿವೆ. ವರಬಲ ಪಡೆದವರನ್ನೆಲ್ಲಾ ನೀನು ನಿನ್ನ ಸ್ವತಃ ಸತ್ವಬಲದಿಂದ ವಿಾರಿರುವೆ. ಇದನ್ನೆಲ್ಲ ಕೇಳಿ, ಯಾಚಿಸುವ ನೆಪದಲ್ಲಿ ನೋಡಲು ಬಂದೆನು" ಎಂದು ಹೇಳುತ್ತಿರಲು ಬಲಿಚಕ್ರವರ್ತಿ ನಗುತ್ತ, "ನಿನ್ನ ಮಾತುಗಳು ವಿಚಿತ್ರವಾಗಿವೆ. ಯಾಗ ದೀಕ್ಷಿತನಾದ ನನ್ನ ಮುಂದೆ ಪರಾಕ್ರಮದ ವಿಷಯ ಹೇಳುತ್ತಿ. ಯುದ್ಧಮಾಡಲು ಹೇಳಲಾರೆಯಷ್ಟೆ? ಏಕೆಂದರೆ ಯುದ್ಧದ ಪ್ರಸಕ್ತಿ ಯಾವುದನ್ನೂ ಈಗ ಎತ್ತುವಂತಿಲ್ಲ" ಎಂದು ವಿನೋದವಾಗಿ ಹೇಳಿದನು.

"ಏನು ಮಾತು ಚಕ್ರವರ್ತೀ! ನನ್ನೊಡನೆ ಪರಿಹಾಸವಾಗಿ ಹೇಳುವೆಯೆಂದು ಕಾಣುತ್ತದೆ. ಮಹೋನ್ನತ ಬಲ ವಿಕ್ರಮನಾದ ನಿನ್ನ ಮುಂದೆ ಭೂಮಿಗೆ ಅಂಟಿದಂತಿರುವ ಗಿಡ್ಡ ವಾಮನನಾದ ನಾನು ಯುದ್ಧ ಕೇಳುವುದೆಂದರೇನು? ಅಂತ್ಯ ವಿಲ್ಲದ ದಾನಗಳಿಂದ ಮಹಾದಾತನಾಗಿರುವ ನಿನ್ನ ಕೀರ್ತಿಯನ್ನು ಕೇಳಿ ನನಗೆ ಬೇಕಾದುದೊಂದಿಷ್ಟು ನಿನ್ನನ್ನು ಯಾಚಿಸಿ ಪಡೆಯೋಣವೆಂತಲೇ ಬಂದೆನು. ವಟುವಾದ ನನ್ನ ಧರ್ಮ ಯಾಚನೆ ತಾನೆ? ಭಿಕ್ಷೆ, ಭಿಕ್ಷೆಗೆ ಬಂದಿದ್ದೇನಯ್ಯಾ ಬಲೀಂದ್ರಾ!" ಎಂದನು ವಾಮನ.

"ಅಷ್ಟೇನಾ? ಕೇಳು ಕೇಳು, ಯಾಗಾಂಗವಾದ ಈ ದಾನ ವೇಳೆಯಲ್ಲಿ ನೀನು ಏನು ಕೇಳಿದರೂ ಕೊಡಬೇಕು. ಕೊಡುತ್ತೇನೆ" ಎಂದನು ಬಲಿ ಚಕ್ರವರ್ತಿ.

ಆಗ ಇದನ್ನೆಲ್ಲಾ ಗಮನಿಸಿಕೊಂಡಿದ್ದ ಶುಕ್ರಾ ಚಾರ್ಯನು ಬೆಚ್ಚಿ ಬಿದ್ದವನಂತಾಗಿ ಬಲಿಚಕ್ರವರ್ತಿ ಯನ್ನು ಹತ್ತಿರ ಬರುವಂತೆ ಕರೆದು, "ರಾಜಾ, ಈ ವಾಮನನು ಬೇರೆ ಯಾರೂ ಅಲ್ಲ. ಮಹಾವಿಷ್ಣುವೇ ನಿನ್ನನ್ನು ವಂಚಿಸಿ ನಿನ್ನ ಸರ್ವಸ್ವವನ್ನೂ ಅಪಹ ರಿಸಲು ಬಂದಿದ್ದಾನೆ. ಅವನಿಗೆ ಯಾವ ಬಗೆಯ ದಾನ ಪ್ರದಾನವನ್ನೂ ಕೊಡಬಾರದು!" ಎಂದು ಎಚ್ಚರಿಸಿದನು.

ಅದಕ್ಕೆ ಬಲಿಚಕ್ರವರ್ತಿ, "ಹಾಗೇನು! ಸಾಕ್ಷಾತ್ ವಿಷ್ಣುವೇ ನನ್ನ ಮುಂದೆ ಬಂದು ಭಿಕ್ಷಾಂದೇಹಿ ಎಂದು ಕೈ ನೀಡಿದರೆ, ನನ್ನ ಕೈ ಮೇಲಾಗಿ ದಾನ ಕೊಡುವುದೆಂದರೆ ದೊಡ್ಡ ಅದೃಷ್ಟ ಮಾತ್ರವಲ್ಲ, ನನ್ನ ಘನವಿಜಯವನ್ನೇ ಸಾರುವಂತಹುದು. ಕೊಡುತ್ತೇನೆಂದ ಮೇಲೆ ಕೊಡಲಾರೆನೆಂದು ಹೇಳುವೆ ನೆಂದುಕೊಂಡಿರಾ? ಅಸತ್ಯದ ದೋಷಕ್ಕೆ ನನ್ನನ್ನು ದೂಡುವಿರಾ?" ಎಂದನು.

"ಆತ್ಮರಕ್ಷಣೆಗಾಗಿ ಮಾತು ತಪ್ಪಿದರೆ ಅಸತ್ಯ ದೋಷವು ಬಾರದು. ತನ್ನನ್ನು ನಾಶಪಡಿಸುವ ಧರ್ಮವು ಆತ್ಮಹತ್ಯಾ ಪಾತಕಕ್ಕೆ ಸಮನಾದುದು" ಎಂದನು ಶುಕ್ರಾಚಾರ್ಯ.

"ಗುರುಗಳೇ! ಯಾವುದು ಏನಾದರೂ, ಅವನು ನನ್ನನ್ನು ಏನು ಮಾಡಿದರೂ ಅದು ನನಗೆ




ಸೋಲಾಗದು, ಧರ್ಮ ವೀರತ್ವವೇ ಅನಿಸುತ್ತದೆ. ಶಿಬಿಚಕ್ರವರ್ತಿಯ ಹಾಗೆ ದಾನವೀರನೆನ್ನಿಸಿಕೊಳ್ಳುವ ಆಕಾಂಕ್ಷೆ ನನಗಿಲ್ಲ. ಹೇಡಿತನದಿಂದ ಕೇಳಿದವರಿಗೆ ಕೇಳಿದುದನ್ನು ಕೊಡುವಂತಹ ಯಾಗ ದೀಕ್ಷೆಯಲ್ಲಿರುವ ನಾನು ಕೊಡುತ್ತೇನೆಂದು ಬೇರೆ ಹೇಳಿದ ಮೇಲೆ, ಭೀರುವಾಗಿ ತಪ್ಪಿಸಿಕೊಳ್ಳಲಾರೆ. ಅಂಥವನಲ್ಲ ಈ ಬಲಿ" ಎಂದು ಬಲಿಚಕ್ರವರ್ತಿ ಹೇಳಿಬಿಟ್ಟನು.

ಆ ಮಾತು ಕೇಳಿ ಶುಕ್ರಾಚಾರ್ಯನು ಕೋಪದಿಂದ, "ನಿನ್ನ ಗುರು ಪುರೋಹಿತನಾದ ನಾನು ನಿನ್ನ ಹಿತಕ್ಕಾಗಿ ಹೇಳುವುದನ್ನು ಕೇಳದೆ ನಿನ್ನ ಸರ್ವಸ್ವವನ್ನೂ ಕಳೆದು ಕೊಳ್ಳುವಿ !" ಎಂದನು ಶಾಪಕೊಟ್ಟಂತೆ.

ಬಲೀಂದ್ರನು ಕೈ ಮುಗಿದು "ಗುರುದೇವಾ ! ನನ್ನನ್ನು ದಂಡಿಸುವ ಅಧಿಕಾರ ನಿಮಗಿದೆ. ಅದಕ್ಕೊಂದು ಅವಕಾಶ ಕೊಟ್ಟಂತಾಯಿತು. ನಾನೀಗ ಎಲ್ಲದಕ್ಕೂ ತಲೆ ಬಗ್ಗಿಸುವ ದಾನಕೊಡಲು ಸಿದ್ಧನಾದಂತಾಯಿತು. ಗುರು ಧಿಕ್ಕಾರದಿಂದ ಪಡೆದ ಶಾಪವನ್ನು ವಿಷ್ಣು ಅಮಲುಪಡಿಸುವಂತಾಯಿತು. ಅನ್ಯಾಯವಾಗಿ ಬಲಿಯನ್ನು ವಂಚಿಸಿದನೆಂಬ ಹೆಸರು ವಿಷ್ಣುವಿಗೂ ಬಾರದಂತೆ ನಿಮ್ಮ ಶಾಪ ಒಳ್ಳೆಯದನ್ನೇ ಮಾಡಿತು. ನಿಮ್ಮ ಶಾಪವನ್ನು ಸಂತೋಷವಾಗಿ ಸ್ವೀಕರಿಸಿದ್ದೇನೆ !" ಎಂದನು.

ಶುಕ್ರಾಚಾರ್ಯನು ನಿರುತ್ತರನಾಗಿ ತಲೆ ತಗ್ಗಿಸಿಕೊಂಡನು. ಬಲಿ ಅಲ್ಲಿಂದೆದ್ದು ವಾಮನನ ಬಳಿಗೆ ಹೋಗುವಾಗ, ಶುಕ್ರಾಚಾರ್ಯನು "ದಾನವ ರಾಜಾ, ವಿಷ್ಣು ಭಿಕ್ಷೆ ಕೇಳಲು ಬಂದು, ನಿನ್ನನ್ನು ಭಿಕ್ಷುಕನಾಗಿ ಮಾಡುವನೋ, ಅಧಃ ಪಾತಾಳಕ್ಕೇ ದೂಡುವನೋ ಏನು ಮಾಡಿದರೂ ಮಾಡಬಹುದು. ಈಗ ನಿನ್ನ ತ್ರಿಲೋಕಾಧಿಪತ್ಯವೂ, ಸಂಪತ್ತುಗಳೂ, ವೈಭವಗಳೂ ವೃಥಾ ಸಂಪಾದಿಸಿದಂತಾಗುತ್ತವೆ. ಯಾವ ಧರ್ಮವಾದರೂ ಶರೀರರಕ್ಷಣೆಯ ಅನಂತರವೇ ಎಂಬುದನ್ನು ನೆನಪಿಗೆ ತಂದುಕೋ. ಎಚ್ಚರಿಸುತ್ತೇನೆ!" ಎಂದನು.

"ರಾಜ್ಯವೂ, ಸಂಪತ್ತುಗಳೂ ಶಾಶ್ವತವಾದುವೇನಲ್ಲ. ಹೇಗೆ ಸಂಪಾದಿಸಿದೆನೋ ಹಾಗೆಯೇ ಹೋಗುವಂತಹವುಗಳೇ ! ಶರೀರ ಕೂಡಾ ಶಾಶ್ವತವಲ್ಲವಷ್ಟೇ ?" ಎಂದನು ಬಲಿ.

"ಈಗ ನಿನಗಾಗುವ ವಿನಾಶವು ನಿನ್ನೊಬ್ಬನದೇ ಅಲ್ಲ. ದಾನವ ಕುಲಕ್ಕೇ ಮುಪ್ಪು ! ಅವಮಾನ ! ನೆನಪಿಡು !" ಎಂದನು ಶುಕ್ರಾಚಾರ್ಯ.

"ಅಷ್ಟೇ ಅಲ್ಲ ಗುರುದೇವಾ; ಒಬ್ಬ ದಾನವನು ಧರ್ಮಪಾಲನೆ ಮಾಡಿದನು. ವಿಷ್ಣುವಿಗೇ ಭಿಕ್ಷೆ ಹಾಕಿದನು, ಎಂದು ದಾನವಕುಲಕ್ಕೇ ಘನತೆ ಬರುತ್ತದೆ ಸ್ವಾಮಿ!" ಎಂದು ಬಲೀಂದ್ರನು ವಾಮನನ ಬಳಿಗೆ ಹಿಂದಿರುಗಿ ಬಂದನು.

ಆಮೇಲೆ ದಾನಕಾರ್ಯ ಪ್ರಾರಂಭವಾಯಿತು. ಬಲಿಯ ಪತ್ನಿ ವಿಂಧ್ಯಾವಳಿದೇವಿ ಸುವರ್ಣ ಕಲಶ



ದಿಂದ ನೀರು ಹೊಯ್ಯುತ್ತಿರಲು, ಬಲಿ ವಾಮನನ ಪಾದಗಳನ್ನು ಬಂಗಾರದ ಹರಿವಾಣದಲ್ಲಿರಿಸಿ ತೊಳೆದು, ಆ ನೀರನ್ನು ಶಿರಸ್ಸಿಗೆ ಪ್ರೋಕ್ಷಿಸಿಕೊಂಡನು. ಆಮೇಲೆ ಬಲಿ ವಾಮನನನ್ನು ನೋಡಿ, "ಓ ವಾಮನ ಮೂರ್ತೀ! ನಿನ್ನಂಥವನು ದಾನಕ್ಕಾಗಿ ಬರುವುದು ನನ್ನ ಸುಕೃತ. ನಿನಗೆ ಏನು ಬೇಕು ಕೇಳು. ಸಿರಿಯೋ, ಸಂಪತ್ತೋ, ಮನೆ ಮಂದಿರಗಳೋ, ಸುಂದರೀಮಣಿಯರೋ, ಸಸ್ಯಶ್ಯಾಮಲ ಕ್ಷೇತ್ರಗಳೋ, ಸಾಮ್ರಾಜ್ಯ ಸರ್ವಸ್ವವೋ, ನನ್ನ ತನುವ್ರೋ ಎಲ್ಲವೂ ನಿನ್ನವೇ, ಕೇಳು" ಎಂದನು.

"ಮಹಾಬಲೀ, ಮುಗಿಯಿತೇ ನಿನ್ನ ಪಟ್ಟಿ? ಅವುಗಳಾವುದೂ ನನಗೆ ಬೇಡ, ಕೃಷ್ಣಾಜಿನ ಹರಡಿ ಕುಳಿತುಕೊಂಡು ಬ್ರಹ್ಮಾನುಷ್ಠಾನ ಮಾಡಲು ನನ್ನ ಪಾದಗಳಲ್ಲಿ ಮೂರು ಅಡಿ ಸ್ಥಳ ಮಾತ್ರ ನನಗೆ ಸಾಕು. ನಿನ್ನ ದಿಗಂತ ಪರ್ಯಂತವಾದ ಸಾಮ್ರಾಜ್ಯದಲ್ಲಿ ಅದು ಸ್ವಲ್ಪಾತಿಸ್ವಲ್ಪವಾದರೂ ನನಗೆ ಮೂರು ಲೋಕಗಳಿಗೂ ಸಾಟಿಯಾದ ಜಾಗವದು. ಅಷ್ಟು ಮಾತ್ರ ಕೊಡು" ಎಂದನು ಗಿಡ್ಡವಾಮನ.

"ಆ ಮೂರಡಿಗಳ ಜಾಗ ಕೊಟ್ಟಿದ್ದೇನೆ. ತೆಗೆದುಕೋ" ಎಂದು ಬಲಿಚಕ್ರವರ್ತಿ ಗಿಂಡಿಯ ನೀರಿನಿಂದ ಧಾರಾದತ್ತ ಮಾಡಲು ನೋಡುವಾಗ ಗಿಂಡಿಯ ಕೊಂಬಿನಿಂದ ನೀರು ಹೊರ ಬರಲಿಲ್ಲ. ನೀರಿಳಿಯದಿದ್ದರೆ ದಾನಕ್ರಮವು ಸರಿಯಾಗಲಾರದಷ್ಟೆ? ಶುಕ್ರಾಚಾರ್ಯನು ಸೂಕ್ಷ್ಮರೂಪದಲ್ಲಿ ಗಿಂಡಿಯ ಕೊಂಬಿನ ಬಾಯಿಗೆ ಅಡ್ಡಗಟ್ಟಿ ಕುಳಿತಿದ್ದನು.

ಆಗ ವಾಮನನು ದರ್ಭೆಯ ಕಡ್ಡಿ ತೆಗೆದುಕೊಂಡು ಗಿಂಡಿಯ ಕೊಂಬಿನೊಳಗೆ ಹಾಕಿ ಚುಚ್ಚಿದನು. ಶುಕ್ರಾಚಾರ್ಯನ ಒಂದು ಕಣ್ಣು ತೂತಾಗಿ, ಅಲ್ಲಿಂದ ಮಾಯವಾದನು. ಅವನ ಒಂದು ಕಣ್ಣು ಕುರುಡಾಯಿತು. ಒಕ್ಕಣ್ಣ ಶುಕ್ರಾಚಾರ್ಯನೆನಿಸಿದನು. ಅಡ್ಡ ತೊಲಗಿದುದರಿಂದ ಗಿಂಡಿಯಿಂದ ಜಲಧಾರೆ ಸರಾಗವಾಗಿ ಹರಿಯಿತು. ದಾನವಿಧಿ ಪೂರ್ತಿಯಾಯಿತು.

ಆ ಕ್ಷಣದಿಂದ ವಾಮನನು ಬೆಳೆಯ ತೊಡಗಿ ಹಾಗೆಯೇ ಬೆಳೆದು ವಿಶ್ವರೂಪಿಯಾಗಿ ಭೂಮ್ಯಾಕಾಶಗಳ ಆಧಾರ ಸ್ತಂಭವಾದನು. ಅವನ ಆಗಲವು ಭೂಮಿಯನ್ನೆಲ್ಲಾ ಆಕ್ರಮಿಸಿತು. ಅವನ ಒಂದು ಪಾದದ ಅಳತೆಗೆ ಇಡೀ ಭೂಮಂಡಲವು ಸರಿಹೋಯಿತು. ತ್ರಿವಿಕ್ರಮನಾದ ವಿಷ್ಣುಪಾದದ ನೆರಳಿನಲ್ಲಿ ಭೂತಲವೆಲ್ಲಾ ಕ್ಷಣಕಾಲ ಗಾಢಾಂಧಕಾರವಾಯಿತು. ತರುವಾಯ ಶಿವನ ಊರ್ಧ್ವ ತಾಂಡವದಂತೆ ಇನ್ನೊಂದು ಕಾಲನ್ನು ಮೇಲೆತ್ತಿ, ಆ ಒಂದೇ ಪಾದದಿಂದ ಇಡಿಯ ಆಕಾಶವನ್ನೂ ಅಳೆದನು. ಸೂರ್ಯಚಂದ್ರಾದಿ ಗ್ರಹಗಳೂ ನಕ್ಷತ್ರಮಂಡಲಗೆಲ್ಲಾ ಅವನ ಪಾದಕ್ಕೆ ಅಂಟಿಕೊಂಡ ರೇಣುಗಳಾಗಿ ಕಂಡವು. ಆಗ ಬ್ರಹ್ಮನು ತನ್ನ ಕಮಂಡಲುವಿನ ಜಲದಿಂದ ವಿಷ್ಣುಪಾದವನ್ನು ಅಭಿಷೇಕ ಮಾಡಿದನು.

ವಿಷ್ಣುಪಾದದಿಂದ ಜಾರಿದ ನೀರು ಆಕಾಶಗಂಗೆ ಎನಿಸಿ, ಸ್ವರ್ಗಲೋಕದಲ್ಲಿ ಮಂದಾಕಿನಿ ಎಂಬ ಶಾಖೆಯಾಗಿಯೂ ಹರಿಯಿತು.

ಆಗ ವಾಮನನ ಕಂಠಧ್ವನಿ ಕೇಳಿತು: "ಬಲೀಂದ್ರಾ ? ಮೂರನೇ ಪಾದಕ್ಕೆ ಜಾಗವೆಲ್ಲಿದೆ? ತೋರಿಸುವೆಯಾ ?"

"ಓ ತ್ರಿವಿಕ್ರಮ ಮೂರ್ತೀ ! ಇಗೋ, ನಾನು ನಿಂತಿರುವಲ್ಲೇ ನನ್ನ ತಲೆಯಿದೆ. ಅದರ ಮೇಲೆ ಇಡು ಸ್ವಾಮೀ !" ಎಂದು ತಲೆ ಬಾಗಿದನು ಬಲಿ.

ವಿಷ್ಣು ವಿಶ್ವರೂಪವನ್ನು ಉಪಸಂಹರಿಸಿ ಮೊದಲಿನಂತೆ ವಾಮನನಾಗಿ, ಅವನ ತಲೆಯ ಮೇಲೆ ಪಾದವನ್ನಿಟ್ಟು, "ಬಲೀಂದ್ರಾ, ಭೂಮ್ಯಾಕಾಶಗಳನ್ನು ಪೂರ್ತಿ ಅಳೆದುಕೊಂಡ ನನಗೆ ನಿನ್ನ ತಲೆಯನ್ನು ಪೂರ್ತಿ ಅಳೆಯಲು ಸಾಧ್ಯವಾಗಲಿಲ್ಲ. ನಿನ್ನ ತಲೆಯ ಒಂದು ಭಾಗ ಮಾತ್ರ ನನ್ನ ಪಾದಕ್ಕೆ ಸರಿಹೋಯಿತು " ಎಂದನು.

ಆಗ ಪ್ರಹ್ಲಾದನು ಅಲ್ಲಿ ಕಾಣಿಸಿ, " ನಾರಾಯಣಾ. ನನ್ನ ಈ ಮೊಮ್ಮಗನು ನಿನಗೆ ಶತ್ರುವಲ್ಲ. ಇವನು ನಿನ್ನ ಅನುಗ್ರಹಕ್ಕೆ ಪಾತ್ರನು " ಎಂದನು.

ಬಲಿಚಕ್ರವರ್ತಿಯ ಪತ್ನಿ ವಿಂಧ್ಯಾವಳಿ ಕೈ ಜೋಡಿಸಿ "ವಾಮನ ಮೂರ್ತೀ ! ದಯಾಮಯನೆಂಬ ಹೆಸರನ್ನು ಸಾರ್ಥಕಗೊಳಿಸು. ನನ್ನ ಪತಿಗೆ ಯಾವ ಕೇಡೂ ಬಾರದಂತೆ ಮಾಡುವುದು ನಿನ್ನ ಭಾರ !" ಎಂದಳು.

ವಾಮನನೆಂದನು : "ಅಮ್ಮಾ, ನಿನ್ನ ಗಂಡನಿಗೆ ಕೆಡುಕಾಗುವಂತೆ ಮಾಡಲು ಬ್ರಹ್ಮನಿಗೂ ಸಾಧ್ಯವಿಲ್ಲ. ಆದುದರಿಂದಲೇ ನಾನು ಭಿಕ್ಷುಕನಾಗಿ ಬಂದು ದಾನ ಕೇಳಿದೆ. ಇವನ ಧರ್ಮ ಬಲವು ಅಂತಹುದು. ಕೇಳುವವನು ಕೆಳಗೆ, ಕೊಡುವವನು ಮೇಲೆಯೇ ತಾಯೀ !" ಎಂದು ಹೇಳಿ ಪ್ರಹ್ಲಾದನನ್ನು ನೋಡಿ, "ಬಲಿ ನನಗೆ ಎಷ್ಟು ಪ್ರಿಯತಮನೆಂದು ಗೊತ್ತಿದೆಯೆ ?" ಎಂದು ಕೇಳುತ್ತ ವಿಷ್ಣುಕಳೆಯಿಂದ ವಿರಾಜಮಾನನಾಗಿ ಉದ್ದವಾದೊಂದು ದಂಡವನ್ನು ಹಿಡಿದುಕೊಂಡು ಪ್ರತ್ಯಕ್ಷನಾದನು.

"ಓ ಬಲಿಚಕ್ರವರ್ತೀ, ನಿನಗೆ ಸಾಟಿಯಾದವನು ಇನ್ನೊಬ್ಬನಿಲ್ಲ ; ಇನ್ನು ಮುಂದೂ ಇರಲಾರ. ಆದರ್ಶಪಾಲಕರಾದ ಚಕ್ರವರ್ತಿಗಳಲ್ಲಿ ನಿನ್ನ ಹೆಸರೇ ಮೊದಲನೆಯದು. ನಿನ್ನನ್ನು ಸುತಳಕ್ಕೆ ಕಳಹಿಸುತ್ತೇನೆ. ಅಧೋ ಲೋಕಗಳಿಗೆ ಅಧಿಪತಿಯಾಗಿ ಶಾಂತಿ ಸೌಖ್ಯಗಳಿಂದ ಅಲ್ಲಿ ಚಿರಂಜೀವಿಯಾಗಿರುವಿ. ನಿನ್ನ ಹೆಂಡತಿಯೂ ನಿನ್ನ ತಾತ ಪ್ರಹ್ಲಾದನೂ ನಿನ್ನೊಂದಿಗೇ ಇರುತ್ತಾರೆ. ಸುತಳದ ದ್ವಾರವನ್ನು ನಾನು ಈಗ ಕಾಣುವ ಹಾಗೆ ದಂಡ ಧಾರಿಯಾಗಿ ಕಾವಲು ಕಾಯುತ್ತಾ, ನಿನಗೆ ರಕ್ಷಕನಾಗಿರುತ್ತೇನೆ " ಎಂದು ಹೇಳಿ ಅಂತರ್ಧಾನನಾದನು.






ವಾಮನಮೂರ್ತಿಗೆ ಪೂರ್ತಿ ದಾನದತ್ತನಾಗಿಹೋದ ಬಲಿಚಕ್ರವರ್ತಿ ಸುತಲ ಲೋಕದಲ್ಲಿ ಪಾತಾಳ ಸಾಮ್ರಾಟನಾಗಿ ಇರ ತೊಡಗಿದನು. ಪ್ರತಿದಿನವೂ ಅವನು ವಿಷ್ಣು ಪಾದಗಳನ್ನು ಪೂಜಿಸುತ್ತಿದ್ದನು. ದೇವತೆಗಳಿಗೆಲ್ಲಾ ಸ್ವಾತಂತ್ರ್ಯ ಬಂದಿತು. ದೇವೇಂದ್ರನಿಗೆ ಮತ್ತೆ ಸ್ವರ್ಗಾಧಿಪತ್ಯ ಲಭಿಸಿತು.

ವಿಷ್ಣು ವಾಮನಮೂರ್ತಿಯಾಗಿ ವೇತ್ರ ದಂಡವನ್ನು ಹಿಡಿದು ಸುತಲದಲ್ಲಿ ಬಲಿಯ ಅರಮನೆಯ ದ್ವಾರವನ್ನು ಕಾದುಕೊಂಡಿದ್ದನು. ಹಾಗಿರುವಾಗ ಒಂದುಸಾರಿ ದಿಗ್ವಿಜಯಕ್ಕೆ ಹೊರಟಿದ್ದ ರಾವಣನು, ಸುತಲವನ್ನು ಜಯಿಸಬೇಕೆಂದುಕೊಂಡು ಅಲ್ಲಿಗೆ ಹೋದನು. ದ್ವಾರ ಪ್ರದೇಶದಲ್ಲಿದ್ದ ಕುಳ್ಳ ಕಾವಲುಗಾರನನ್ನು ನೋಡಿ, ಲಕ್ಷ್ಯಮಾಡದೆ ರಾವಣನು ಒಳಗೆ ಪ್ರವೇಶಿಸಲಿರುವಾಗ, ವಾಮನಮೂರ್ತಿ ಮಹೋನ್ನತನಾಗಿ ಬೆಳೆದು, ಕಾಲಿನ ಉಂಗುಷ್ಠದಿಂದ ರಾವಣನನ್ನು ಚಿಮ್ಮಿಬಿಟ್ಟನು, ಆ ಬೀಸುವಿಕೆಯಲ್ಲಿ ಹಾರಿದ ರಾವಣನು ಲಂಕೆಯಲ್ಲಿ ಮೂರ್ಛೆ ಹೋಗಿ ಬಿದ್ದನು. ಆ ಮೇಲೆ ಅವನು ಎಂದೂ ಪಾತಾಳ ಲೋಕದ ಗೋಜಿಗೆ ಹೋಗಲಿಲ್ಲ.

ತಾನು ಸುಭಿಕ್ಷವಾಗಿರುವಂತೆ ಪಾಲಿಸಿಕೊಂಡಿದ್ದ ಭೂಮಿಯ ಮೇಲೆ, ಮಳೆ ಬೆಳೆಗಳು ಹೇಗಿವೆ ಎಂದು ನೋಡಲು ವರ್ಷಕ್ಕೆ ಒಂದು ದಿನ ಬಲಿ ಭೂಮಿಯ ಮೇಲೆ ಅದೃಶ್ಯ ರೂಪದಲ್ಲಿ ಬಂದು, ಸಸ್ಯಗಳಿಗೆ ಪುಷ್ಟಿಯನ್ನೂ, ಜೀರ್ಣ ಕಾರಕತ್ವವನ್ನೂ, ಬಲವರ್ಧಕಗಳನ್ನೂ ನೀಡುವನು. ಅವುಗಳಿಗೆ ಕ್ರಿಮಿ ಕೀಟಕಗಳ ಬಾಧೆ ಬಾರದಂತೆ ಕಾಪಾಡುವನು. ಅವನ ಆಗಮನವನ್ನು ಸ್ವಾಗತಿಸುವ ರೂಪದಲ್ಲಿ ದೀಪಾವಳಿ ಹಬ್ಬದ ಕಾರ್ಯಕ್ರಮಗಳು ನಡೆಯುತ್ತವೆ. ಬಲಿ ಪಾಡ್ಯವು ಬಲಿಯನ್ನು ಪೂಜಿಸುವ ದಿನವಾಗುತ್ತದೆ. ವಾಮನನ ತ್ರಿವಿಕ್ರಮಾವತಾರವನ್ನು ನೆನಪಿಗೆ ತರುವಂತೆ ಜನರು ಊರೊಳಗೆಲ್ಲಾ ಆಕಾಶ ದೀಪಗಳನ್ನು ಬೆಳಗಿಸುತ್ತಾರೆ.

ದಕ್ಷಿಣ ಮಹಾ ಸಮುದ್ರದಲ್ಲಿ ಬಲಿ ಚಕ್ರವರ್ತಿ ಭೂಮಿಯ ಮೇಲೆ ಬರುವ ದ್ವಾರವಾಗಿ ಒಂದು

೭. ದತ್ತಾತ್ರೇಯ ಚರಿತ್ರೆ



ದ್ವೀಪವು ಉಂಟಾಗುತ್ತದೆ. ಅದು ಬಲಿದ್ವೀಪವೆಂದು ಪ್ರಸಿದ್ಧವಾಗುತ್ತದೆ. ಹೀಗೆಯೇ ಕಾಲಕ್ರಮದಲ್ಲಿ ಬಲಿಚಕ್ರವರ್ತಿಯ ವಂಶದವರಾದ ಪಲ್ಲವ ಚಕ್ರವರ್ತಿಗಳು, ತಮ್ಮ ವಂಶಪುರುಷನ ಹೆಸರಿನಲ್ಲಿ ಮಹಾಬಲಿಪುರವನ್ನು ಶಿಲ್ಪವೈಭವಗಳಿಂದ ನಿರ್ಮಿಸುತ್ತಾರೆ. ಕಾಂಚೀಪುರದಲ್ಲಿ ಉನ್ನತವಾದ ವಾಮನನ ತ್ರಿವಿಕ್ರಮ ರೂಪಶಿಲ್ಪವನ್ನು ಸ್ಥಾಪಿಸುತ್ತಾರೆ. ಈ ರೀತಿಯಾಗಿ ಬಲಿ ಚಕ್ರವರ್ತಿಯ ಕೀರ್ತಿ ಚಿರಸ್ಥಾಯಿಯಾಗಿ ನಿಂತಿರುವಂತಾಗುತ್ತದೆ.

ಸೂತ ಪುರಾಣಿಕನು ಹೀಗೆ ಹೇಳುತ್ತ, ಬಲಿ ಚಕ್ರವರ್ತಿ ಆಳಿಕೊಂಡಿದ್ದಾಗ, ಅಡಗಿ ತಲೆ ತಗ್ಗಿಸಿಕೊಂಡಿದ್ದ ಕ್ಷತ್ರಿಯ ರಾಜನು, ಬಲಿಯ ಅಧಿಕಾರ ಹೋದ ಮೇಲೆ, ತಲೆಯೆತ್ತತೊಡಗಿದುದನ್ನು ಹೇಳತೊಡಗಿದನು.

ಅಂತಹ ಕ್ಷತ್ರಿಯರಲ್ಲಿ ಹೆಚ್ಚು ಬಲಿಷ್ಠರಾದವರು ವಿಜೃಂಭಿಸತೊಡಗಿ ಬಲವಿರುವವನಿಗೇ ಭೂಮಿ ಎಂಬ ಸ್ಥಿತಿ ಮತ್ತೆ ಬಂತು. ರಾಜರ ನಿರಂಕುಶ ಪಾಲನೆಯಿಂದ ಪ್ರಜೆಗಳಿಗೆ ಕಷ್ಟ ಬಂತು.

ಆಗ ವಿಷ್ಣು ದಶಾವತಾರಗಳಲ್ಲಿ ಆರನೆಯದಾದ ಪರಶುರಾಮಾವತಾರವನ್ನೆತ್ತಿ, ಕಾಡನ್ನು ಕಡಿದು ಹಾಕುವ ಹಾಗೆ, ಇಪ್ಪತ್ತೊಂದು ಸಾರಿ ಭೂಮಂಡಲವನ್ನು ತಿರುಗಿ, ತನ್ನ ಕೊಡಲಿಯಿಂದ ಕ್ಷತ್ರಿಯರನ್ನೆಲ್ಲಾ ಕಡಿಗಡಿದು ಹಾಕಿದನು. ಯಾವ ಕಾಲಕ್ಕೆ ಯಾವುದು ಅಗತ್ಯವೋ ಆಗ ಅದನ್ನು ಸಾಧಿಸಲು ಅವತರಿಸುವನೆಂಬುದನ್ನು ನಿರೂಪಿಸಿದನು ವಿಷ್ಣು.

ಆಗಿನ ಧರಾತಳವನ್ನಾಳುವ ರಾಜರುಗಳಲ್ಲೆಲ್ಲಾ ಹೆಸರಾದ ನಾಯಕನಾಗಿ, ಸಾಮ್ರಾಟನಾಗಿದ್ದವನು ಹೈಹಯ ಚಕ್ರವರ್ತಿ ಕಾರ್ತವೀರ್ಯಾರ್ಜುನನೇ. ಅವನು ವಿಷ್ಣುವಿನ ಸುದರ್ಶನ ಚಕ್ರದ ಅಂಶದಿಂದ ಹುಟ್ಟಿದ ಮಹಾ ಪ್ರತಾಪಿ.

ಹಾಗೇಕೆ ಹುಟ್ಟಿದನೆಂದರೆ, ಒಂದು ಸಮಯದಲ್ಲಿ ವಿಷ್ಣು ಯೋಗನಿದ್ರೆಯಲ್ಲಿದ್ದಾಗ, ಶಂಖಚಕ್ರಗಳು ತಮ್ಮೊಳಗೆ ಅದೂ ಇದೂ ಮಾತಾಡುತ್ತ, ವಾದಕ್ಕೆ ಬಿದ್ದವು. "ನನ್ನನ್ನು ಯಾರೆಂದುಕೊಂಡಿ? ಸಹಸ್ರ ಕಿರಣನಾದ ಸೂರ್ಯನನ್ನು ವಿಶ್ವಕರ್ಮನು ಸಾಣೆ ಹಿಡಿಯುವಾಗ ಉದುರಿದ ರಜಸ್ ಕಣಗಳಿಂದ ನನ್ನನ್ನು ರೂಪಿಸಿದ್ದಾನೆ. ಸಾವಿರ ಕೋಣಗಳಿಂದ ಗಿರಿಗಿರಿ ತಿರುಗುತ್ತಿದ್ದ ಅನೇಕ ಮಂದಿ ರಾಕ್ಷಸರನ್ನು ಸಂಹರಿಸಿದವನು ನಾನು. ನನ್ನನ್ನು ಧರಿಸಿಕೊಂಡುದರಿಂದಲೇ ಈ ವಿಷ್ಣುವಿಗೆ ಚಕ್ರಿ ಎಂಬ ಹೆಸರು ಬಂದಿದೆ. ನಿನ್ನದೇನಿದೆ? ಬರೀ ಧ್ವನಿ ಎಬ್ಬಿಸುವುದರ ಹೊರತು ಮತ್ತೇನಾದೀತು ನಿನ್ನಿಂದ ?" ಎಂದು ಚಕ್ರವು ನುಡಿಯಿತು.

ಅದನ್ನು ಕೇಳಿ ಪಾಂಚಜನ್ಯ ಶಂಖವು "ಏನು ಗರ್ವ ನಿನಗೆ ಚಕ್ರಪುರುಷಾ ! ಗರ್ವಿಷ್ಠನಾದ ನೀನು ಭೂಮಿಯಲ್ಲಿ ಗರ್ವವೇ ಮೂರ್ತಿವಂತನಾದ ರಾಜನಾಗಿ ಹುಟ್ಟು. ವಿಷ್ಣು ಸಾಧಾರಣ ಮುನಿಕುಮಾರನಾಗಿ ಅವತರಿಸಿ, ಕಟ್ಟಿಗೆ ಕಡಿಯುವ ಕೊಡಲಿಯಿಂದ ನಿನ್ನ



ಗರ್ವ ಮುರಿಯುತ್ತಾನೆ" ಎಂದು ಶಾಪವಾಕ್ಯಗಳನ್ನು ಉಸುರಿತು. ಇದನ್ನು ಕೇಳಿ ವಿಷ್ಣುವೂ ತಲೆದೂಗಿದನು.

ಶಂಖದ ಶಾಪ ಪಡೆದ ಚಕ್ರಪುರುಷನು ಕಾರ್ತವೀರ್ಯಾರ್ಜುನನಾಗಿ ಹುಟ್ಟಿ ಹೈಹಯ ಸಾಮ್ರಾಜ್ಯವನ್ನು ನಾಲ್ಕು ದಿಕ್ಕುಗಳಿಗೂ ವಿಸ್ತರಿಸುವಂತೆ ಮಾಡಿದನು. ಅವನು ಭಗವಂತನ ಅವತಾರವಾದ ದತ್ತಾತ್ರೇಯನ ಮಹಾಭಕ್ತ. ದತ್ತಾತ್ರೇಯನ ಅನುಗ್ರಹದಿಂದ ಅಣಿಮಾದಿ ಅಷ್ಟಸಿದ್ಧಿಗಳನ್ನೂ, ಅನೇಕ ಶಕ್ತಿಗಳನ್ನೂ ಪಡೆದುಕೊಂಡವನು. ಅಗತ್ಯಬಿದ್ದಾಗ ಅನೇಕ ಆಯುಧಗಳೊಂದಿಗೆ ಸಾವಿರ ಕೈಗಳು ಅವನಿಗೆ ಬರುತ್ತಿದ್ದುವು...ಎಂದು ಸೂತ ಪುರಾಣಿಕ ಮುನಿ ಹೇಳುತ್ತಿರಲು ನೈಮಿಷಾರಣ್ಯದ ಮುನಿಗಳು "ಸೂತ ಮುನೀಂದ್ರಾ, ದತ್ತಾತ್ರೇಯನ ಅವತಾರ ಹೇಗಾಯಿತು ? ಆ ಚರಿತ್ರೆಯನ್ನು ಕೇಳುವ ಕುತೂಹಲದಲ್ಲಿದ್ದೇವೆ" ಎಂದು ಕೇಳಿಕೊಂಡರು.

ಸೂತನು ದತ್ತಾತ್ರೇಯನ ಕಥೆಯನ್ನು ಹೇಳತೊಡಗಿದನು.

ಒಂದು ಸಾರಿ ಅತ್ರಿ ಮಹರ್ಷಿ ತನಗೆ ಪುತ್ರನಾಗಬೇಕೆಂದು ಭಗವಂತನಾದ ಮಹಾವಿಷ್ಣುವನ್ನು ತ್ರಿಮೂರ್ತಿ ರೂಪದಲ್ಲಿ ನೆನೆಯುತ್ತ ತಪಸ್ಸು ಮಾಡಲು ಕುಳಿತನು. ಅವನಿಗೆ ಮೆಚ್ಚಿದ ವಿಷ್ಣು ತನ್ನ ಇರ್ಕೆಲಗಳಲ್ಲಿ ಬ್ರಹ್ಮ, ಮಹೇಶ್ವರರನ್ನೂ ಕೂಡಿಕೊಂಡು ಅವನ ಮುಂದೆ ಪ್ರತ್ಯಕ್ಷನಾಗಿ "ಅತ್ರಿ ಮಹರ್ಷೀ, ನಾನು ನಿನಗೆ ದತ್ತವಾಗಿರುವೆನು. ನಾವು ಮೂವರೂ ಒಂದೇ ಆದುದರಿಂದ ತ್ರಿಮೂರ್ತಿಗಳ ಅಂಶಗಳಿಂದ ನಿನಗೆ ಮಗನಾಗಿ ಜನಿಸುತ್ತೇನೆ. ದತ್ತಾತ್ರೇಯನೆಂದು ನನಗೆ ಹೆಸರು ಬರುವಂತಾಗಲಿ" ಎಂದನು. ಮರುಕ್ಷಣವೇ ತ್ರಿಮೂರ್ತಿಗಳೂ ಅಂತರ್ಧಾನವಾದರು.

ಆದೇ ಸಮಯದಲ್ಲಿ ನಾರದನು, ತ್ರಿಮೂರ್ತಿಗಳ ಅರ್ಧಾಂಗಿಗಳೆಂದು ಗರ್ವಿಸಿಕೊಂಡಿರುವ ಸರಸ್ವತಿ, ಲಕ್ಷ್ಮಿ, ಪಾರ್ವತಿಯರ ಮುಂದೆ ಅತ್ರಿ ಮಹಾ ಮುನಿಯ ಪತ್ನಿಯಾದ ಅನಸೂಯೆಯ ಪಾತಿವ್ರತ್ಯದ ಮಹಿಮೆಗೆ ಸಾಟಿಯಿಲ್ಲವೆಂದು ವಾದ ಮಾಡಿ ನಿರೂಪಿಸಿದನು. ತ್ರಿಮೂರ್ತಿಗಳ ಪತ್ನಿಯರಿಂದ ಸಾಧ್ಯವಾಗದ ಕೆಲಸಗಳನ್ನು ಅವಳು ಮಾಡಿರುವುದಾಗಿ ಹೇಳಿ ತೋರಿಸಿದನು.

ಅನಸೂಯೆ ಗಂಗೆಯನ್ನು ಪೀಡಿಸುತ್ತಿದ್ದ ಪಾಪ ಪಿಶಾಚಿಗಳನ್ನು ನಿರ್ಮೂಲಿಸಿದವಳು. ನಾರದನು ಕೊಟ್ಟ ಕಬ್ಬಿಣದ ಕಡಲೆಗಳನ್ನು ಬೇಯಿಸಿ ಬಡಿಸಿದವಳು. ಸೂರ್ಯನು ಉದಯಿಸದಂತೆ ಮಾಡಿದ ಸುಮತಿಯನ್ನು ಒಪ್ಪಿಸಿ, ಸೂರ್ಯೋದಯವಾದರೆ ಸತ್ತುಹೋದ ಅವಳ ಗಂಡನನ್ನು ಬದುಕಿಸಿ, ಲೋಕವನ್ನು ರಕ್ಷಿಸಿದ್ದಾಳೆ ಅನಸೂಯ.

ಇದನ್ನೆಲ್ಲ ಕೇಳಿ ತ್ರಿಮೂರ್ತಿಗಳ ಪತ್ನಿದೇವಿಯರಿಗೆ ಅನಸೂಯೆಯ ಮೇಲೆ ಅಸೂಯೆಯುಂಟಾಯಿತು. ತಮ್ಮ ಗಂಡಂದಿರು ಬಂದ ಕೂಡಲೇ ಅನಸೂಯೆಯ



ಪಾತಿವ್ರತ್ಯವನ್ನು ಭಗ್ನಗೊಳಿಸಿ ಬರಬೇಕೆಂದು ತಮ್ಮ ಗಂಡಂದಿರನ್ನು ಒತ್ತಾಯ ಮಾಡಿ ಕಳುಹಿಸಿದರು.

ಅದಕ್ಕಾಗಿ ಬ್ರಹ್ಮ, ವಿಷ್ಣು, ಮಹೇಶ್ವರರು ಯತೀಶ್ವರರ ವೇಷಗಳಿಂದ ಅತ್ರಿಯ ಆಶ್ರಮದ ಮುಂದೆ ಹೋಗಿ "ಭವತಿ ಭಿಕ್ಷಾಂ ದೇಹಿ" ಎಂದು ಕೂಗಿ ಹೇಳಿಕೊಂಡು ನಿಂತರು.

ಆಗ ಅತ್ರಿ ತಪಸ್ಸಿಗೆ ಹೋದವನು ಹಿಂದಿರುಗಿ ಬಂದಿರಲಿಲ್ಲ. ಆದುದರಿಂದ ಅತಿಥಿ ಸತ್ಕಾರ ಮೊದಲಾದ ಬಾಧ್ಯತೆಗಳೆಲ್ಲವೂ ಅನಸೂಯೆಯ ಮೇಲೆಯೇ ಇದ್ದಿತು. ಅನಸೂಯಾದೇವಿ ಹೊರಗೆ ಬಂದು ದೊಡ್ಡ ಯತಿಗಳ ರೂಪದಲ್ಲಿ ನಿಂತಿರುವ ತ್ರಿಮೂರ್ತಿಗಳನ್ನು ನೋಡಿದಳು. ವಿನಯ ವಿಧೇಯತೆಗಳಿಂದ ಅವರನ್ನು ಒಳಗೆ ಆಹ್ವಾನಿಸಿ, ಅರ್ಘ್ಯಪಾದ್ಯಗಳನ್ನಿತ್ತು, ಭೋಜನಕ್ಕೆ ಸಿದ್ಧರಾಗಬೇಕೆಂದು ಕೇಳಿಕೊಂಡಳು.

ಆಗ ಕಪಟ ಯತಿಗಳು ಮೂವರೂ ಏಕ ಕಂಠದಿಂದ, "ಎಲೈ ಸಾಧ್ವೀ, ನಮಗೊಂದು ಬಿಡಲಾಗದ ವ್ರತವಿದೆ, ಅದನ್ನು ಹೇಳದೆ ಉಪಾಯವಿಲ್ಲ. ಸಾಧ್ಯವಾಗದಿದ್ದರೆ ಹೇಳಿಬಿಡು. ನಾವು ಕೋಪಿಸುವೆವೆಂದು ಮಾತ್ರ ತಿಳಿಯಬೇಡ. ನಮ್ಮ ವ್ರತವೇನೆಂದರೆ, ನೀನು ಜನಿಸಿದ ರೂಪದಲ್ಲಿ ಬಡಿಸಿದರೇನೇ ನಾವು ಭೋಜನ ಮಾಡುವುದು !" ಎಂದರು.

ಅದನ್ನು ಕೇಳಿ ಅನಸೂಯೆ, "ಹಾಗೆಯೇ ಆಗಲಿ, ಅದಕ್ಕೇನು?" ಎಂದು ಹೇಳಿ, ಅವರ ಮೇಲೆ ತನ್ನ ಪತಿಯನ್ನು ನೆನೆದು ತೀರ್ಥವನ್ನು ಪ್ರೋಕ್ಷಿಸಿದಳು. ಮರುಕ್ಷಣದಲ್ಲಿ ಮೂವರು ಯತಿಗಳೂ ಮುದ್ದು ಗುಲುಕುವ ಮೂರು ಸುಂದರ ಶಿಶುಗಳಾಗಿ ಹೋದರು.

ಅನಸೂಯೆಯಲ್ಲಿ ಮಾತೃತ್ವವು ಉಕ್ಕಿತು. ಅವಳು ಆ ಮಕ್ಕಳು ಕೋರಿಕೊಂಡಂತೆ ಹಾಲನ್ನವನ್ನು ಕಿವಿಚಿ, ಅವುಗಳನ್ನು ತನ್ನ ಮಡಿಲಲ್ಲಿಟ್ಟುಕೊಂಡು ತಿನ್ನಿಸಿದಳು. ಲಾಲಿಸಿ ಹಾಲೂಡಿದಳು. ತ್ರಿಮೂರ್ತಿಗಳು ಹಸುಮಗುಗಳಾಗಿ ಅನಸೂಯೆಯ ಮಡಿಲಲ್ಲಿ ಹಾಯಾಗಿ ನಿದ್ದೆ ಮಾಡಿದುವು.

ಅನಸೂಯೆ ಆ ಮೂರು ಮಕ್ಕಳನ್ನೂ ಬಟ್ಟೆಯ ತೊಟ್ಟಿಲಲ್ಲಿ ಮಲಗಿಸಿ ಜೋಗುಳ ಹಾಡಿದಳು. "ಮೂರು ಲೋಕಗಳನ್ನಾಳುವ ಮುಮ್ಮೂರ್ತಿಗಳೂ ನನ್ನ ಕಂದಗಳಾದರು. ಏನು ನನ್ನ ಅದೃಷ್ಟ! ಪತಿಯ ತಪಸ್ಸು ಸಾರ್ಥಕವಾಯಿತು. ಬ್ರಹ್ಮಾಂಡವೇ ಇವರಿಗೆ ಉಯ್ಯಾಲೆ. ನಾಲ್ಕು ವೇದಗಳೇ ತೊಟ್ಟಿಲ ಸಂಕೋಲೆಗಳು. ಓಂಕಾರ ಪ್ರಣವ ನಾದವೇ ಜೋಗುಳ ಹಾಡು!" ಎಂದು ಹಾಡುತ್ತಾ ತ್ರಿಮೂರ್ತಿಗಳನ್ನೂ ತೂಗಿದಳು ಅನಸೂಯೆ.

ಆಗ ಎಲ್ಲಿಂದಲೋ ಬಂದ ಬೆಳ್ಳಗಿನ ಎತ್ತು ಆಶ್ರಮ ದ್ವಾರದ ಹತ್ತಿರ ನಿಂತು ತಲೆಯಾಡಿಸುತ್ತಾ ಕೊರಳ ಮಣಿಗಂಟೆಗಳ ಕಿಣಿಕಿಣಿ ನಾದ ಹೊರಡಿಸಿತು.

ದೊಡ್ಡದೊಂದು ಗರುಡಪಕ್ಷಿ, ರೆಕ್ಕೆಗಳನ್ನು ಬೀಸುತ್ತಾ ಆಶ್ರಮದ ಸುತ್ತಲೂ ತಿರುಗ ತೊಡಗಿತು.



ರಾಜಹಂಸವೊಂದು ವಿಕಸಿತ ಪದ್ಮವನ್ನು ಕಚ್ಚಿಕೊಂಡು ಹಾರುತ್ತಾ ಬಂದು ಆಶ್ರಮದ ಬಾಗಿಲ ಮುಂದೆ ನೆಲಕ್ಕಿಳಿಯಿತು.

ಮುದ್ದುಗುಲುಕುವ ನಾಲ್ಕು ಬಣ್ಣಗಳ ನಾಯಿ ಮರಿಗಳು ಬಾಲವಾಡಿಸುತ್ತಾ ಆ ಮನೆಯೊಳಗೆ ಹೊಕ್ಕುವು. ಅವುಗಳಿಗೆ ಜತೆಯಾಗಿ ನಾಗರಹಾವೊಂದು ಹೆಡೆಯೆತ್ತಿ ಆಡಿಸುತ್ತಾ ಬಂದಿತು.

ಅಷ್ಟರಲ್ಲಿ ಮಹತೀ ವೀಣೆಯನ್ನು ಝೇಂಕರಿಸಿಕೊಂಡು, ನೀಲಾಂಬರಿ ರಾಗವನ್ನು ಹೊರಡಿಸುತ್ತ ನಾರದನೂ, ಅವನ ಹಿಂದೆ ಲಕ್ಷ್ಮಿ, ಸರಸ್ವತಿ ಪಾರ್ವತಿಯರೂ ಅಲ್ಲಿಗೇ ಬಂದರು.

ನಾರದನು ಅನಸೂಯೆಯನ್ನು ನೋಡಿ, "ಅಮ್ಮಾ, ತ್ರಿಮೂರ್ತಿಗಳ ವಾಹನಗಳು ಮೂರೂ ನಿನ್ನ ಮನೆಯ ಬಾಗಿಲಲ್ಲಿ ನಿಂತಿರುವುದನ್ನು ನೋಡಿ ಅವರು ಇಲ್ಲಿಯೇ ಇರುವರೆಂದು ತಿಳಿದು ಬಂದೆನು. ಇನ್ನೂ ಹಿಂದಿರುಗಿ ಬಾರದಿರುವ ತಮ್ಮ ಗಂಡಂದಿರನ್ನು ಹುಡುಕಿಕೊಂಡು ಮೂವರು ದೇವಿಯರೂ ಬಂದಿದ್ದಾರೆ. ಅವರ ಗಂಡಂದಿರನ್ನು ಅವರಿಗೆ ಬಿಟ್ಟು ಕೊಡಮ್ಮಾ!" ಎಂದನು.

ಅದನ್ನು ಕೇಳಿ ಅನಸೂಯೆ ಮೂವರು ಮಹಾದೇವಿಯರಿಗೂ ನಮಸ್ಕಾರ ಮಾಡಿ, "ಅಮ್ಮಗಳಿರಾ! ಆ ಉಯ್ಯಾಲೆಯ ತೊಟ್ಟಿಲಲ್ಲಿ ನಿದ್ರಿಸಿಕೊಂಡಿರುವವರು ನಿಮ್ಮವರೇ ಆದರೆ, ಕರೆದುಕೊಂಡು ಹೋಗಿರಿ. ಅತಿಥಿಗಳಾಗಿ ಬಂದ ಯತೀಶ್ವರರು ತೃಪ್ತಿಯಿಂದ ಮಲಗಿದ್ದಾರೆ" ಎಂದಳು.

ದೇವಿಯರು ಮೂವರೂ ಬೆರಗಾಗಿ ನೋಡಿದರು. ಲಕ್ಷ್ಮೀ ಪಾರ್ವತಿ ಸರಸ್ವತಿಯರು ಯಾವ ಮಗು ತಮ್ಮವನೆಂದು ತಿಳಿಯದೆ ತಳಮಳಿಸುವುದನ್ನು ನೋಡಿ, ನಾರದನು. "ನಿಮ್ಮ ಗಂಡಂದಿರ ಗುರುತು ತಿಳಿಯಲಿಲ್ಲವೆಂದರೇನಮ್ಮಾ? ನಾಚಿಕೊಳ್ಳಬೇಡಿ. ಎತ್ತಿಕೊಳ್ಳಿ!" ಎಂದನು. ಮೂವರು ದೇವಿಯರೂ ಒಂದೊಂದು ಮಗುವನ್ನು ಎತ್ತಿಕೊಂಡರು.

"ಅಯ್ಯೋ, ನಾನೊಬ್ಬಳು!" ಎಂದು ಅನಸೂಯೆ ಓಡಿಹೋಗಿ ಒಳಗಿನಿಂದ ತೀರ್ಥ ತಂದು ಆ ಶಿಶುಗಳ ಮೇಲೆ ಪ್ರೋಕ್ಷಿಸಿದಳು. ಮರುಕ್ಷಣದಲ್ಲಿ ಮೂರು ಶಿಶುಗಳೂ ನಿಜರೂಪ ತಾಳಿ ಹಾರಿ ನಿಂತರು. ಆಗ ಸರಸ್ವತಿ ಶಿವನನ್ನೂ, ಲಕ್ಷ್ಮಿ ಬ್ರಹ್ಮನನ್ನೂ, ಪಾರ್ವತಿ ವಿಷ್ಣುವನ್ನೂ ತೆಗೆದುಕೊಂಡಂತೆ ಗೊತ್ತಾಗಿ ಮೂವರು ದೇವಿಯರೂ ನಾಚಿಕೊಂಡು ದೂರ ಹೋಗಿ ನಿಂತರು. ಆಗ ಬ್ರಹ್ಮ, ವಿಷ್ಣು, ಮಹೇಶ್ವರರು ಒಬ್ಬರನ್ನೊಬ್ಬರು ಅಂಟಿಕೊಂಡು, ಒಬ್ಬರೊಳಗೊಬ್ಬರು ಕೂಡಿ ನಿಂತರು.

ಅದೇ ಹೊತ್ತಿಗೆ ಅತ್ರಿ ತಪಸ್ಸು ಮುಗಿಸಿ ಪುತ್ರವರವನ್ನು ಪಡೆದು ಅಲ್ಲಿಗೆ ಬಂದನು. ತನ್ನ ಮನೆಯಲ್ಲಿ ತ್ರಿಮೂರ್ತಿಗಳೂ ಒಂದಾಗಿರುವುದನ್ನು ನೋಡಿ, ಅವನು ಕೈಗಳನ್ನು ಜೋಡಿಸುವುದರೊಳಗೆ, ಬ್ರಹ್ಮ ವಿಷ್ಣು ಮಹೇಶ್ವರರು ಒಂದೇ ಮೂರ್ತಿ

ಯಾಗಿ "ತಂದೆಯೇ, ನಿಮ್ಮ ತಪೋಭೀಷ್ಟ ಸಿದ್ಧಿಸಿ ನಾವು ನಿಮ್ಮ ಮಗನಾದೆವು. ನಮ್ಮನ್ನು ದತ್ತಾತ್ರೇಯನೆಂದು ಕರೆಯಿರಿ" ಎಂದರು.

ನಡುವಿನಲ್ಲಿ ವಿಷ್ಣುವಿನ ಮುಖ, ಇಕ್ಕಡೆಗಳಲ್ಲಿ ಬ್ರಹ್ಮ ಶಿವರ ಮುಖಗಳಿಂದ, ಆರು ಕೈಗಳಲ್ಲಿ ಶಂಖ, ಚಕ್ರ, ಗದಾ, ಪದ್ಮ, ತ್ರಿಶೂಲ, ಕಮಂಡಲುಗಳೊಂದಿಗೆ ಭುಜದಲ್ಲಿ ನೇತಾಡುವ ಜೋಳಿಗೆಯಲ್ಲಿ ಭಿಕ್ಷಾಪಾತ್ರೆಯನಿಟ್ಟುಕೊಂಡು ತ್ರಿ ಮೂ ರ್ತಿ ಗ ಳ ಸಮ್ಮಿಲನದ ಏಕ ಮೂರ್ತಿಯಾಗಿ ವಿಷ್ಣು ಅತ್ರಿ ಅನಸೂಯರ ಕುಮಾರನಾಗಿ ದತ್ತಾತ್ರೇಯಾವತಾರವನ್ನು ಎತ್ತಿದನು.

ನಾರದನು ನಾದನಾಮಕ್ರಿಯಾ ರಾಗದಿಂದ ವೀಣೆಯನ್ನು ಮೊಳಗಿಸುತ್ತ, ದತ್ತಾತ್ರೇಯನನ್ನು ಸ್ತುತಿ ಮಾಡಿದನು. ಶಿವನ ವಾಹನವಾದ ನಂದಿ ಹೋರಿಕರುವಾಗಿ ಅವನೊಂದಿಗಿದ್ದಿತು. ನಾಲ್ಕು ವೇದಗಳು ನಾಲ್ಕು ನಾಯಿಗಳ ರೂಪದಲ್ಲಿ ಅವನನ್ನು ಅನುಸರಿಸಿಕೊಂಡಿದ್ದವು. ಸರ್ಪ, ಗರುಡ, ಹಂಸಗಳು ಅವನ ಪರಿಸರಗಳಲ್ಲಿಯೇ ಅನುಸರಿಸಿಕೊಂಡಿದ್ದುವು. ದತ್ತಾತ್ರೇಯನು ಮಹರ್ಷಿಯಾಗಿ ವನಾಂತರಗಳಲ್ಲಿ ತಿರುಗುತ್ತ, ಆತ್ಮಾನು ಸಂಧಾನ ಮಾಡಿಕೊಂಡಿರುವನು. ಅನೇಕ ದಿವ್ಯಶಕ್ತಿಗಳನ್ನೂ, ಸಿದ್ಧಿಗಳನ್ನೂ ಪ್ರಸಾದಿಸುವ ದತ್ತಾತ್ರೇಯನನ್ನು ಸಿದ್ಧರೂ, ಜ್ಞಾನಿಗಳೂ, ಮುನಿಗಳೂ ಆರಾಧಿಸಿಕೊಂಡಿರುತ್ತಾರೆ. ಎಲ್ಲಾ ದೇವತೆಗಳೂ ದತ್ತಾತ್ರೇಯನಿಗೆ ವಶವರ್ತಿಗಳೇ. ಇಂತಹ ದತ್ತಾತ್ರೇಯನು ಹೈಹಯ ರಾಜವಂಶದವರಿಗೆ ಆರಾಧ್ಯ ದೈವವಾಗಿದ್ದನು.

ಕಾರ್ತವೀರ್ಯಾರ್ಜುನನು ದ ತ್ತಾ ತ್ರೇ ಯ ನ ನ್ನು ಅರ್ಚಿಸಿ, ಮಹಾ ಬಲ ಸಂಪನ್ನನಾಗಿ. ತನ್ನ ಸೈನ್ಯವನ್ನು ಸಾಗಿಸಿಕೊಂಡು ಜೈತ್ರ ಯಾತ್ರೆಗೆ ಹೊರಟ.

ಹಾಗೆ ಹೊರಟವನು ಅರಣ್ಯದಲ್ಲಿರುವ ಜಮದಗ್ನಿಯ ಆಶ್ರಮಕ್ಕೆ ಹೋಗುವಂತಾಯಿತು.



ಮಹರ್ಷಿಯಾದ ಜಮದಗ್ನಿಗೆ ರಾಮನೆಂಬವನು ಕಡೆಯ ಮಗನು. ತಂದೆಯ ಮಾತೆಂದರೆ ಅವನಿಗೆ ವೇದವಾಕ್ಯ. ಯಾವಾಗಲೂ ಕೊಡಲಿ ಹಿಡಿದುಕೊಂಡು ಕಾಡಿನಲ್ಲಿ ತಿರುಗುತ್ತ, ಊರುಗಳನ್ನೂ, ಆಶ್ರಮಗಳನ್ನೂ ನಿರ್ಮಿಸಲಿಕ್ಕಾಗಿ, ಭೂಮಿಯನ್ನು ಸಾಗುವಳಿಗೆ ಅನುಕೂಲಪಡಿಸಲಿಕ್ಕಾಗಿ ಕಾಡುಗಳನ್ನು ಕಡಿದು ಹಾಕುವುದು ಅವನ ಮುಖ್ಯ ಕೆಲಸ. ಅವನು ಹಿಮಾಲಯದಲ್ಲಿ ಕುಳಿತು ತಪಸ್ಸು ಮಾಡಿ, ಶಿವನನ್ನು ಮೆಚ್ಚಿಸಿದ್ದನು. ಶಿವನು ಅವನಿಗೆ ಮಹಾ ಪ್ರಭಾವಶಾಲಿಯಾದ ಕೊಡಲಿಯನ್ನು ಕೂಡಾ ಕೊಟ್ಟಿದ್ದನು. ಆ ಕೊಡಲಿಯಿಂದಲೇ ಅವನಿಗೆ ಪರಶುರಾಮನೆಂದು ಹೆಸರು ಬಂದಿತ್ತು. ಭೃಗುವಂಶದವನಾದುದರಿಂದ ಅವನನ್ನು ಭಾರ್ಗವರಾಮನೆಂದೂ ಹೇಳುವರು.

ಒಂದುಸಾರಿ ಪರಶುರಾಮನ ತಾಯಿ ರೇಣುಕಾದೇವಿ ನದಿಗೆ ಹೋದವಳು ಎಷ್ಟು ಹೊತ್ತಾದರೂ ಹಿಂದಿರುಗಿ ಬರಲಿಲ್ಲ. ಜಮದಗ್ನಿ ದಿವ್ಯ ದೃಷ್ಟಿಯಿಂದ

ಹೆಂಡತಿ ಏನು ಮಾಡುವಳೆಂಬುದನ್ನು ಕಂಡು ಹಿಡಿದನು. ಚಿತ್ರರಥನೆಂಬ ಗಂಧರ್ವನು ಅಪ್ಸರಸಿಯರೊಂದಿಗೆ ಜಲಕ್ರೀಡೆಯಾಡುವ ಸೊಬಗನ್ನು ಮೈಮರೆತು ನೋಡುತ್ತಾ ಇದ್ದಳು ರೇಣುಕೆ. ಜಮದಗ್ನಿಗೆ ತಾಳಲಾಗದಷ್ಟು ಕೋಪ ಬಂದಿತು.

ಹೆಂಡತಿ ಬಂದ ಕೂಡಲೇ ಜಮದಗ್ನಿ ಕುಮಾರರನ್ನು ಕರೆದು ತಾಯಿಯ ತಲೆಯನ್ನು ಕಡಿದುಹಾಕಲು ಹೇಳಿದನು. ಆ ಕೆಲಸ ತಮ್ಮಿಂದಾಗದೆಂದು ಕುಮಾರರು ಹೇಳಿದರು. ಆಗಲೇ ಕಾಡಿನಿಂದ ಮನೆಗೆ ಬಂದ ಪರಶುರಾಮನೊಂದಿಗೆ ಜಮದಗ್ನಿ "ರಾಮಾ, ಅಣ್ಣಂದಿರ ತಲೆಗಳನ್ನೂ, ನಿನ್ನ ತಾಯಿಯ ತಲೆಯನ್ನೂ ಕಡಿದು ಹಾಕು" ಎಂದನು. ಕೂಡಲೇ ಪರಶುರಾಮನು ಅಣ್ಣಂದಿರ ತಲೆಗಳನ್ನೂ, ತಾಯಿಯ ತಲೆಯನ್ನೂ ಕೊಡಲಿಯಿಂದ ಕಡಿದು ಉರುಳಿಸಿದನು.

ಜಮದಗ್ನಿ ಪರಶುರಾಮನನ್ನು ಮೆಚ್ಚಿಕೊಂಡು, "ಏನು ಬೇಕೋ ಕೇಳು" ಎಂದು ಕೇಳಲು, "ಅಣ್ಣಂದಿರನ್ನೂ, ತಾಯಿಯನ್ನೂ ಬದುಕಿಸಿ ಕೊಡು ಅಪ್ಪಾ!" ಎಂದನು ಪರಶುರಾಮ.

ಜಮದಗ್ನಿ ಹಾಗೆಯೇ ಅವರನ್ನೆಲ್ಲ ಮತ್ತೆ ಬದುಕಿಸಿದನು. ತನ್ನ ತಪೋ ಮಹಿಮೆಯ ಮೇಲೆ ಪರಶುರಾಮನಿಗಿರುವ ವಿಶ್ವಾಸಕ್ಕೂ ಸೂಕ್ಷ್ಮಬುದ್ಧಿಗೂ ಜಮದಗ್ನಿ ಸಂತೋಷಪಟ್ಟು, "ಪರಶುರಾಮಾ, ನೀನು ಕಾರಣ ಜನ್ಮದವನು. ಚಿರಂಜೀವಿಯಾಗಿರುವಿ" ಎಂದು ಮನದುಂಬಿ ಆಶೀರ್ವಾದ ಮಾಡಿದನು.

ಕಾರ್ತವೀರ್ಯಾರ್ಜುನನು ವಿಜಯ ಯಾತ್ರೆಯನ್ನು ಮುಗಿಸಿ ತನ್ನ ರಾಜಧಾನಿಯಾದ ಮಾಹಿಷ್ಮತೀ ನಗರಕ್ಕೆ ಬಹಳ ಉತ್ಸಾಹದಿಂದ ಹಿಂದಿರುಗುವ ದಾರಿಯಲ್ಲಿ ಜಮದಗ್ನಿಯ ಆಶ್ರಮವನ್ನು ನೋಡಿದನು. ಆಗ ರಾಜನೂ, ಪರಿವಾರವೂ, ಸೇನೆಯವರೂ ತುಂಬಾ ಹಸಿವೆಯಿಂದಿದ್ದರು.

ಜಮದಗ್ನಿಯ ಆಶ್ರಮದಲ್ಲಿ ಕಾಮಧೇನುವಿನ ಅಂಶದಿಂದ ಹುಟ್ಟಿದ ಹೋಮಧೇನುವಿದ್ದಿತು. ಅದರ ಸಹಾಯದಿಂದ ರಾಜನಿಗೂ, ರಾಜ ಪರಿವಾರದವರಿಗೂ, ಸೈನಿಕರಿಗೂ ಜಮದಗ್ನಿ ಔತಣದೂಟವನ್ನೇ ಮಾಡಿಸಿದನು. ಎಷ್ಟು ಮಂದಿಗಾದರೂ ಬೇಕಾದುದನ್ನು ಕೊಡುವ ಆ ಧೇನುವಿನ ಮಹಿಮೆಯನ್ನು ನೋಡಿ, ಕಾರ್ತವೀರ್ಯನಿಗೆ ಆ ಧೇನು ತನ್ನ ಹತ್ತಿರ ಇರಬೇಕೆಂದು ತೋರಿತು. ಅದೊಂದಿದ್ದರೆ ಸೈನ್ಯಕ್ಕಾಗಿ ಮಾಡುವ ಖರ್ಚು ಉಳಿಯುತ್ತದೆಂದೆನಿಸಿತು. ತಾನು ಕೂಡಾ ಬೇಕಾದುದನ್ನು ಪಡೆಯಬಹುದೆಂಬ ದುರಾಶೆಯಿಂದ, ಆ ಧೇನುವನ್ನು ಮಾಹಿಷ್ಮತಿ ನಗರಕ್ಕೆ ಸಾಗಿಸಿಕೊಂಡು ಹೋಗಿರೆಂದು ಸೈನಿಕರಿಗೆ ಆಜ್ಞೆ ಮಾಡಿದನು. ಕ್ರೂರರಾದ ಸೈನಿಕರು ಅಡ್ಡಬಂದ ಜಮದಗ್ನಿಯನ್ನು ಕೆಡವಿ ಧೇನುವನ್ನು ಎಳೆದುಕೊಂಡು ಹೊರಟರು.





ಉನ್ಮತ್ತರಾದ ಸೈನಿಕರಿಂದ ದೂಡಲ್ಪಟ್ಟು ಬಿದ್ದ ಜಮದಗ್ನಿ ಚಲನವಿಲ್ಲದೆ ಬಿದ್ದಲ್ಲೇ ಬಿದ್ದುಕೊಂಡಿದ್ದನು. ರೇಣುಕಾದೇವಿ ಗಂಡನ ಶರೀರದ ಮೇಲೆ ಬಿದ್ದು ಒಂದೇ ಸಮನೆ ಅಳುತ್ತಿದ್ದಳು. ಅರಣ್ಯದೊಳಗೆ ಹೋಗಿದ್ದ ಪರಶುರಾಮನು ಆಶ್ರಮಕ್ಕೆ ಹಿಂದಿರುಗಿದಾಗ ತಾಯಿಯ ರೋದನಾ ಧ್ವನಿ ಅವನ ಕಿವಿಗಳನ್ನು ಸೇರಿತು.

ನಡೆದ ಸಂಗತಿಯನ್ನು ತಿಳಿದ ಮೇಲೆ ಪರಶುರಾಮನು ತನ್ನ ಪರಶುವನ್ನೆತ್ತಿಕೊಂಡು ಝಳಪಿಸುತ್ತ ಹಿಂದಿರುಗಿ ನೋಡದೆಯೇ ಮಾಹಿಷ್ಮತೀ ನಗರದ ಕಡೆಗೆ ಓಡಿದನು.

ಆಗ ಭೃಗು ಮಹರ್ಷಿ ಎಲ್ಲಿಂದಲೋ ಬರುತ್ತ ಜಮದಗ್ನಿಯ ಆಶ್ರಮವನ್ನು ಪ್ರವೇಶಿಸಿದನು. ಅವನು ನಡೆದ ಸಂಗತಿಯನ್ನು ತಿಳಿದು, ರೇಣುಕೆಗೆ ಸಮಾಧಾನ ಹೇಳಿ ಜಮದಗ್ನಿಯನ್ನು ಬಿಟ್ಟು ಹೋಗುತ್ತಿರುವ ಕೊನೆಯ ಪ್ರಾಣವನ್ನು ತನ್ನ ಯೋಗ ಶಕ್ತಿಯಿಂದ ನಿಲ್ಲಿಸಿ ಬದುಕುವಂತೆ ಮಾಡಿದನು. ರೇಣುಕೆ ಸಂತೋಷ ಕೃತಜ್ಞತೆಗಳಿಂದ ಭೃಗುವಿನ ಪಾದಗಳನ್ನು ಆನಂದಬಾಷ್ಪ ಸುರಿಸಿ ತೊಳೆದಳು.

ಅಲ್ಲಿ ಮಾಹಿಷ್ಮತೀ ನಗರದಲ್ಲಿ ಬಲಾತ್ಕಾರದಿಂದ ಸಾಗಿಸಿಕೊಂಡು ಬಂದ ಧೇನು, ತಾವು ಕೇಳುವುದನ್ನು ಕೊಡಲಿಲ್ಲವೆಂಬ ಕಾರಣದಿಂದ ಸೈನಿಕರು ಅದನ್ನು ಹೊಡೆಯುತ್ತ ತಿವಿಯುತ್ತ ಬಗೆಬಗೆಯಾಗಿ ಹಿಂಸಿಸಿಕೊಂಡಿದ್ದರು. ಆ ಸಮಯಕ್ಕೆ ಸರಿಯಾಗಿ ಪರಶುರಾಮನು ಪ್ರಳಯಕಾಲದ ರುದ್ರನಂತೆ ಅಲ್ಲಿಗೆ ಬಂದನು. ಅವನ ರೌದ್ರಾಕಾರವನ್ನು ನೋಡಿ ಸೈನಿಕರೆಲ್ಲ ಓಡಿಹೋದರು. ಪರಶುರಾಮನು ಧೇನುವನ್ನು ತಡವಿ, ಆಶ್ರಮಕ್ಕೆ ಹೋಗುವಂತೆ ಹೇಳಿ ತಟ್ಟಿ ಕಳುಹಿಸಿದನು. ಧೇನು ಉತ್ಸಾಹದಿಂದ ಹುಂಗುಡುತ್ತಾ ಹೊರಟುಹೋಯಿತು.

"ಓ ರಾಜಾಧಮಾ ! ಸಂರಕ್ಷಕನಾಗಿರಬೇಕಾದ ರಾಜನು ದುಷ್ಟನಾದಾಗ ತಕ್ಕ ಶಿಕ್ಷೆ ಅನುಭವಿಸಲೇ ಬೇಕು. ಮನೆಯೊಳಗಿನಿಂದ ಬಾರೋ ಹೊರಗೆ !"

೮. ಪರಶುರಾಮಾವತಾರ



ಎಂದು ಪರಶುರಾಮನು ರಾಜಪ್ರಾಸಾದದ ಮುಂದೆ ನಿಂತು ಕೂಗಿದನು, ಕೊಡಲಿಯನ್ನು ತಿರುಗಿಸುತ್ತಾ.

ಕಾರ್ತವೀರ್ಯನು ಮೊದಲು ಪರಶುರಾಮನನ್ನು ನೋಡಿ ಸಾಧಾರಣ ಮುನಿಕುಮಾರನೆಂದು ಕೊಂಡನು. ಆದರೆ ಅವನ ಕರ್ಕಶ ಮಾತುಗಳನ್ನೂ, ಕೋಪೋದ್ರೇಕವನ್ನೂ ರಭಸವನ್ನೂ ನೋಡಿ ಸಾವಿರ ಕೈಗಳನ್ನು ಬರಿಸಿಕೊಂಡು ಅವನಿದಿರು ನಿಂತನು. ಇಬ್ಬರಿಗೂ ದ್ವಂದ್ವಯುದ್ಧವು ತೊಡಗಿತು.

ಕಾರ್ತವೀರ್ಯಾರ್ಜುನನು ಪ್ರಯೋಗಿಸಿದ ಅಸ್ತ್ರಗಳನ್ನೂ, ಶಸ್ತ್ರಗಳನ್ನೂ ಪರಶುರಾಮನು ತನ್ನ ಕೊಡಲಿಯಿಂದ ಛಿದ್ರ ಛಿದ್ರ ಮಾಡಿ ಹಾರಿಸಿದನು. ಅವನ ಸಾವಿರ ಕೈಗಳನ್ನೂ ಮರದ ಕೊಂಬೆಗಳನ್ನು ಕಡಿಯುವ ಹಾಗೆ ಕಡಿದು ಹಾಕಿದನು. ಕಾರ್ತವೀರ್ಯನು ಬರಿ ಮುಂಡದೊಂದಿಗೆ ನೆಲಕ್ಕೆ ಬಿದ್ದನು. ಆಗ ಅವನಿಗೆ ತಾನು ಶಾಪವಶದಿಂದ ಹುಟ್ಟಿದ ಸುದರ್ಶನನೆಂಬುದು ನೆನಪಿಗೆ ಬಂದಿತು. ಪರಶುರಾಮನು ವಿಷ್ಣುವೇ ಎಂದು ತಿಳಿದು ಮನಸ್ಸಿನಲ್ಲಿಯೇ ಅವನಿಗೆ ನಮಸ್ಕಾರ ಮಾಡುತ್ತ ದೇಹವನ್ನು ಬಿಟ್ಟು ಹೋಗಿ, ವಿಷ್ಣುವಿನ ಸುದರ್ಶನ ಚಕ್ರದಲ್ಲಿ ಲೀನನಾದನು.

ಪರಶುರಾಮನು ತನ್ನ ಆಶ್ರಮಕ್ಕೆ ಹಿಂದಿರುಗಿ ತಂದೆ ಕ್ಷೇಮವಾಗಿರುವುದನ್ನು ನೋಡಿ, ತಾನು ಮಾಡಿ ಬಂದ ಕಾರ್ಯವನ್ನು ಕುರಿತು ಉತ್ಸಾಹದಿಂದ ಹೇಳಿದನು.

ಅದನ್ನು ಕೇಳಿದ ಜಮದಗ್ನಿ "ಅಪ್ಪಾ, ನೀನು ಮಾಡಿದ ಕೆಲಸ ಮುನಿಗಳಾದ ನಮಗೆ ತಕ್ಕ ಕೆಲಸವಲ್ಲ. ಇದಕ್ಕೆ ಪರಿಹಾರ ಮಾಡಿಕೊಳ್ಳಲು ನೀನು ತಪಸ್ಸು ಮಾಡಬೇಕು" ಎಂದನು.

"ತಂದೆಯೇ, ರಾಜನಾದವನು ಅಧರ್ಮ ಕಾರ್ಯ ಮಾಡಿದಾಗ ಅವನನ್ನು ಶಿಕ್ಷಿಸುವ ಅರ್ಹತೆ ಎಲ್ಲರಿಗೂ ಬರುತ್ತದೆ. ನಿಮ್ಮ ಅಪ್ಪಣೆಯಾದುದರಿಂದ ತಪಸ್ಸು ಮಾಡುತ್ತೇನೆಯೇ ಹೊರತು, ಅದು ಪ್ರಾಯಶ್ಚಿತ್ತದ ತಪಸ್ಸು ಮಾತ್ರ ಅಲ್ಲ" ಎಂದು ಹೇಳಿ ಅರಣ್ಯಕ್ಕೆ ಹೋಗಿ ತಪಸ್ಸಿನಲ್ಲಿ ಮಗ್ನನಾದನು.

ಕಾರ್ತವೀರ್ಯನಿಗೆ ಸಾವಿರಮಂದಿ ಕುಮಾರರಿದ್ದರು. ಅವರು ಹೈಹಯಕ್ಷತ್ರಿಯರನ್ನೆಲ್ಲಾ ಸೇರಿಸಿಕೊಂಡು, ತಂದೆಯನ್ನು ಕೊಂದ ಪರಶುರಾಮನ ಮೇಲೆ ದ್ವೇಷವಿಟ್ಟುಕೊಂಡು ಜಮದಗ್ನಿಯ ಆಶ್ರಮಕ್ಕೆ ದಾಳಿ ಇಟ್ಟರು.

ಆಗ ಜಮದಗ್ನಿ ತಪಸ್ಸಿನ ಸಮಾಧಿಯಲ್ಲಿ ನಿಶ್ಚಲನಾಗಿ ಕುಳಿತಿದ್ದನು. ರೇಣುಕಾ ದೇವಿ, ಹೆದರಿ ಇಪ್ಪತ್ತೊಂದು ಸಾರಿ ರಾಮನನ್ನು ಬಾಬಾ ಎಂದು ಕೊರಳೆತ್ತಿ ಕೂಗಿ ಕೂಗಿ ಕರೆದಳು.

ಹೈಹಯರು ಜಮದಗ್ನಿಯ ತಲೆಯನ್ನು ಕಡಿದು ಬಿಟ್ಟರು. ರೇಣುಕೆ ಗಂಡನ ಮುಂಡದ ಮೇಲೆ ಬಿದ್ದು ಮತ್ತೆ ಇಪ್ಪತ್ತೊಂದು ಸಾರಿ "ರಾಮಾ ರಾಮಾ" ಎಂದು ಕೂಗಿ ಮೂರ್ಛೆ ಹೋದಳು.



ಜಮದಗ್ನಿಯ ತಲೆ ಮುಂಡದಿಂದ ಹಾರಿ ದೂರ ಹೋಗಿ ಬಿದ್ದು ಹೊರಳಿ ಕಲ್ಲುಗಳ ಮಧ್ಯೆ ಸಿಕ್ಕಿಕೊಂಡಿತು. ರಾಜಪುತ್ರರು ಆಶ್ರಮಕ್ಕೆ ಬೆಂಕಿ ಹಚ್ಚಿದರು. ಅಲ್ಲಿದ್ದವರೆಲ್ಲರೂ ಆ ಉರಿಯಲ್ಲಿ ಸಿಕ್ಕಿಕೊಂಡರು. ಗಂಡನ ಮುಂಡದೊಂದಿಗೆ ರೇಣುಕೆಯೂ ಸುಟ್ಟು ಹೋದಳು.

ಅರಣ್ಯದಲ್ಲಿ ತಪಸ್ಸು ಮಾಡಿಕೊಂಡಿದ್ದ ಪರಶುರಾಮನಿಗೆ ಧ್ಯಾನ ಭಂಗವಾಯಿತು. ತಾಯಿಯ ಕರೆ ಇಪ್ಪತ್ತೊಂದು ಸಾರಿ ಅವನ ಕಿವಿಗಳಲ್ಲಿ ಮಾರ್ಮೊಳಗುತ್ತಿದ್ದುವು. ಮನಸ್ಸಿನಲ್ಲಿ ಕೆಡುಕಿನ ಅಲೆಗಳು ಏಳುತ್ತಿರಲು, ದೊಡ್ಡ ದೊಡ್ಡ ಹೆಜ್ಜೆಗಳಿಂದ ಆಶ್ರಮಕ್ಕೆ ಬಂದನು.

ಆಗ ಅವನ ಕಣ್ಣಿಗೆ ಬಿದ್ದ ದೃಶ್ಯ, ಆಶ್ರಮವು ಉರಿಯುತ್ತಾ ಇದ್ದಿತು. ತಂದೆತಾಯಿಯರು ಮಸಿಯಾಗಿ ಹೋಗಿದ್ದರು. ಉರಿಯನ್ನು ಆರಿಸಲು ಬರುವ ಸುತ್ತು ಮುತ್ತಲಿನ ಆಶ್ರಮ ವಾಸಿಗಳನ್ನು ಹೈಹಯ ಸೈನಿಕರು ಅಮಾನುಷವಾಗಿ ಚಿತ್ರವಧೆ ಮಾಡಿಕೊಂಡಿದ್ದರು.

ಪರಶುರಾಮನಿಗೆ ಬಂದ ಕೋಪಕ್ಕೆ ಮೇರೆ ಇರಲಿಲ್ಲ. ಪರಶುವನ್ನು ತನಗೆ ಪ್ರಸಾದಿಸಿದ ಶಿವನನ್ನು ಸ್ಮರಿಸಿ, ಆ ಪರಶುವನ್ನೆತ್ತಿಕೊಂಡು ಮಹಾರೌದ್ರ ಜ್ವಾಲೆಯಾಗಿ ಉರಿದೆದ್ದನು. ಮುಳ್ಳಿನ ಪೊದೆಗಳನ್ನು ತರಿದು ಒಟ್ಟುವ ಹಾಗೆ ಹದ್ದಿಗೆ ಸಿಕ್ಕಿದ ದುಷ್ಟರನ್ನು ಹತಮಾಡತೊಡಗಿದನು. ಹೈಹಯ ಸೈನಿಕರೊಬ್ಬರೂ ಬದುಕಿ ಹಿಂದೆ ಹೋಗಲಿಲ್ಲ.

ಕಲ್ಲಿನ ನಡುವೆ ಸಿಕ್ಕಿಕೊಂಡ ಜಮದಗ್ನಿಯ ತಲೆಯನ್ನು ಎತ್ತಿ ತನ್ನ ಎದೆಗೆ ತಿಕ್ಕಿಕೊಂಡು, " ಅಪ್ಪಾ ! ಕಣ್ಣೀರು ಕೂಡಾ ಬಾರದಂತೆ ನನ್ನ ಗುಂಡಿಗೆ ಉರಿಯುತ್ತಾ ಇದೆ. ನಿಮ್ಮ ತಲೆಯನ್ನು ಶತ್ರುಗಳ ರಕ್ತದ ಮಡುವಿನಲ್ಲಿ ಮುಳುಗಿಸಿ ಅಂತ್ಯಕ್ರಿಯೆ ಮಾಡುತ್ತೇನೆ " ಎಂದು ಹೇಳುತ್ತಾ ಪರಶುರಾಮನು, ಉನ್ನತವಾದ ಶಿಲಾಗ್ರದ ಮೇಲೆ ಏರಿ ನಿಂತು ಪರಶುವನ್ನು ಮೇಲೆತ್ತಿ, " ಈ ಕೊಡಲಿಯಿಂದ ಭೂಮಿಯ ಮೇಲೆ ರಾಜನೊಬ್ಬನೂ ಇಲ್ಲದಂತೆ ಮಾಡುತ್ತೇನೆ. ದುಷ್ಟ ರಾಜರ ತಲೆಗಳೆಲ್ಲಾ ಈ ಕೊಡಲಿಯಿಂದ ಉರುಳುತ್ತವೆ." ಎಂದು ಇಪ್ಪತ್ತೊಂದು ಸಾರಿ ಗರ್ಜಿಸಿ ಪ್ರತಿಜ್ಞೆ ಮಾಡಿದನು. ಅವನ ಪ್ರತಿಜ್ಞಾ ಗರ್ಜನೆಗಳು ದಿಕ್ಕುಗಳಲ್ಲೆಲ್ಲಾ ಪ್ರತಿಧ್ವನಿಸಿದುವು. ಅವನ ಭೀಷಣ ಪ್ರತಿಜ್ಞೆಯನ್ನು ಕೇಳಿ, ಬ್ರಹ್ಮ ಋಷಿಗಳು ಓಡಿ ಬಂದು ಅವನಿಗೆ ಶಾಂತ ವಚನಗಳನ್ನು ಹೇಳಿದರು.

ಭೃಗುಮಹರ್ಷಿ, " ಕಂದಾ, ದುಷ್ಟರನ್ನು ಶಿಕ್ಷಿಸಲು ಭಗವಂತನಿದ್ದಾನೆ. ಸಾಧುಸಜ್ಜನರನ್ನು ರಕ್ಷಿಸುವುದು ಅವನ ಹೊಣೆ. ನೀನು ಶಾಂತನಾಗಿರಬೇಕಪ್ಪಾ " ಎಂದನು.

" ಆ ಭಗವಂತನು ಆಕಾಶದಿಂದ ಇಳಿದು ಬರುವವನಲ್ಲ. ಮನುಷ್ಯನಾಗಿ ಹುಟ್ಟಿ ಮನುಷ್ಯರ



ನಡುವಿನಲ್ಲಿಯೇ ಇರುತ್ತಾನೆ. ಅಂತಹವನು ನಾನೇ ಎಂದು ಪಿತಾಮಹರೇಕೆ ತಿಳಿಯುವುದಿಲ್ಲ? ಆದುದರಿಂದಲೇ ಶಾಂತ ವಚನಗಳು ನನ್ನನ್ನು ಸಮಾಧಾನಪಡಿಸಲಾರವು!" ಎಂದು ಹೇಳಿ ಪರಶುರಾಮನು ನೆಟ್ಟಗೆ ಹಿಮಾಲಯಕ್ಕೆ ಹೋಗಿ, ಶಿವನನ್ನು ಧ್ಯಾನಿಸಿ ತಪಸ್ಸಿಗೆ ಕುಳಿತನು.

ಶಿವನು ಪ್ರಸನ್ನನಾಗಿ ಪರಶುರಾಮನನ್ನು ಶಾಂತಪಡಿಸಲು ನೋಡಿದನು. ಆಗ ಪರಶುರಾಮನು, "ಮಹಾದೇವಾ! ಅದಕ್ಕಲ್ಲ ನಾನು ನಿನ್ನನ್ನು ಧ್ಯಾನಿಸಿದ್ದು. ನಿನ್ನಾಜ್ಞೆಯಿಲ್ಲದೆ ಇರುವೆಯೂ ಕಚ್ಚಲಾರದು. ಲಯಮೂರ್ತಿಯಾದ ನಿನಗೆ ಹೆಚ್ಚಿಗೆ ಹೇಳಬೇಕಾದುದೇನಿಲ್ಲ. ನನ್ನ ಪ್ರತಿಜ್ಞೆ ನೆರವೇರಲು ಬೇಕಾಗುವ ಬಲವನ್ನು ನನಗೆ ಕೊಡು" ಎಂದು ಕೈ ಮುಗಿದನು.

ಶಿವನು ಅವನಿಗೆ ಎಲ್ಲಾ ಅಸ್ತ್ರಗಳನ್ನೂ ಕೊಟ್ಟು, ಪ್ರತ್ಯೇಕವಾದೊಂದು ದಿವ್ಯಾಸ್ತ್ರವನ್ನೂ ಕೊಟ್ಟು, "ಇದು ಭಾರ್ಗವಾಸ್ತ್ರವೆಂದು ಪ್ರಸಿದ್ಧವಾಗಿ ನಿನ್ನ ಹೆಸರಿನಲ್ಲಿ ಚಿರಸ್ಥಾಯಿಯಾಗಿರುತ್ತದೆ. ನೀನು ಕಾರಣ ಜನ್ಮದವನು. ಅವತಾರ ಮೂರ್ತಿ. ಹೋಗು. ನಿನಗೆ ಯಾವ ತಡೆಯೂ ಇಲ್ಲ" ಎಂದು ಸಂತೋಷದಿಂದ ಆಶೀರ್ವಾದ ಮಾಡಿದನು.

ಪರಶುರಾಮನು, ಗೋಲೋಕದಲ್ಲಿರುವ ವಿಷ್ಣುವಿನ ಮತ್ತೊಂದು ರೂಪವಾದ ಕೃಷ್ಣನನ್ನು ಧ್ಯಾನಿಸಿ ಕೃಷ್ಣ ಕವಚವನ್ನು ಪಡೆದನು. ಕೃಷ್ಣನು ಅವನಿಗೆ ತನ್ನ ಅಂಶವನ್ನು ದೊಡ್ಡದೊಂದು ಧನುಸ್ಸಿನಲ್ಲಿ ಸೇರಿಸಿ ಕೊಟ್ಟು, ರಾಮಾವತಾರದಲ್ಲಿ ಅದನ್ನು ವಾಪಸು ಪಡೆದುಕೊಳ್ಳುವೆನೆಂದೂ ಹೇಳಿದನು.

ಇಷ್ಟು ಬಲಗಳನ್ನು ಸಂಪಾದಿಸಿಕೊಂಡ ಮೇಲೆ, ಪರಶುರಾಮನು ಕ್ಷತ್ರಿಯರ ಮೇಲೆ ಮುಗಿಬೀಳತೊಡಗಿದನು. ನಿಜಕ್ಕೂ ಆಗ ರಾಜರೆಲ್ಲಾ ಕೊಬ್ಬಿ ಬಹಳ ದುಷ್ಟರೇ ಆಗಿದ್ದರು. ಅವರ ದುಷ್ಪರಿಪಾಲನೆಯಲ್ಲಿ ನರಳಿದ ಪ್ರಜೆಗಳೆಲ್ಲಾ ಪರಶುರಾಮನನ್ನು ಆಶ್ರಯಿಸಿದರು. ಕಾರ್ತವೀರ್ಯನ ಕುಮಾರರೆಲ್ಲಾ ಪರಶುರಾಮನ ಹೆಸರು ಕೇಳಿದ ಕೂಡಲೇ ನಗರವನ್ನು ಬಿಟ್ಟು ಓಡಿ ಹೋದರು. ಪರಶುರಾಮನು ಆ ನಗರದ ಮೇಲೆ ಆಗ್ನೇಯಾಸ್ತ್ರವನ್ನು ಪ್ರಯೋಗಿಸಿದನು. ಪರಶುರಾಮನ ಪ್ರೀತಿಗಾಗಿ ಮಾಹಿಷ್ಮತೀ ನಗರವು ಇಪ್ಪತ್ತೊಂದು ದಿನಗಳವರೆಗೆ ಉರಿಯುತ್ತಾ ನಾಮ ರೂಪಗಳಿಲ್ಲದೆ ಹೋಯಿತು.

ಓಡಿದರೂ ಬಿಡಲಿಲ್ಲ ಪರಶುರಾಮ. ಕಾರ್ತವೀರ್ಯನ ಸಾವಿರ ಮಂದಿ ಕುಮಾರರೂ, ಹೈಹಯವಂಶದ ಕ್ಷತ್ರಿಯರೂ, ಇತರ ಅನೇಕ ದೇಶಗಳ ಕ್ಷತ್ರಿಯ ರಾಜರೂ ಒಂದಾಗಿ ಕೂಡಿ ತಮ್ಮೆದಿರು ಬಂದ ಪರಶುರಾಮನನ್ನು ಇದಿರಿಸಿದರು. ಬಲಿಪಶುಗಳನ್ನು ಕಡಿದು ಹಾಕಿದ ಹಾಗೆ ಪರಶುರಾಮನು ಅವರೆಲ್ಲರನ್ನೂ ತರಿದು ಹಾಕಿ, ಅವರ ರಕ್ತಗಳನ್ನು ಐದು ಮಡುಗಳ ತುಂಬಾ ತುಂಬಿಸಿದನು. ಐದು



ದಗ್ನಿಯ ತಲೆಯನ್ನು ಅವುಗಳಲ್ಲಿ ಮುಳುಗಿಸಿ ಪಿತೃತರ್ಪಣ ಮಾಡಿದ ಮೇಲೆ, ಪರಶುರಾಮನು ಆ ತಲೆಗೆ ಅಗ್ನಿ ಸಂಸ್ಕಾರ ಜರುಗಿಸಿದನು.

ಶಮಂತ ಪಂಚಕವೆಂದು ಹೆಸರು ಪಡೆದ ಆ ಐದು ರಕ್ತದ ಮಡುಗಳಿರುವ ಪ್ರದೇಶವೇ, ಮುಂದಿನ ಕಾಲದಲ್ಲಿ ಕುರುಕ್ಷೇತ್ರವೆಂಬ ಹೆಸರಿನಿಂದ ಖ್ಯಾತವಾಯಿತು. ಆ ಪ್ರದೇಶವು ಮತ್ತೊಂದು ಸಾರಿ ಬಲಿಯನ್ನು ಬಯಸಿ ಅಲ್ಲಿಯೇ ಮಹಾಭಾರತ ಯುದ್ಧವು ನಡೆದು ರಕ್ತದ ನೆರೆಯೇ ಪ್ರವಹಿಸಿತು.

ಪರಶುರಾಮನು ಯಜ್ಞಮಾಡಿ ಶುಚಿಭೂತನಾಗಿ ತಂದೆಗೆ ಉತ್ತರ ಕ್ರಿಯೆಗಳನ್ನು ಯಥಾವಿಧಿಯಾಗಿ ಮುಗಿಸಿದ ಮೇಲೆ, ಕ್ಷತ್ರಿಯರ ಸಂಹಾರ ಕಾರ್ಯಕ್ಕೆ ಹೊರಟನು. ಹುಡುಕಿ ಹುಡುಕಿ ಕ್ಷತ್ರಿಯರನ್ನು ತನ್ನ ಚಪಗೊಡಲಿಗೆ ಆಹುತಿ ಕೊಟ್ಟನು. ಕ್ಷತ್ರಿಯ ಮಾತೆಯರು ವಂಶಾಂಕುರಗಳಾದ ಮಕ್ಕಳನ್ನು ಬ್ರಾಹ್ಮಣ ಕಾಂತೆಯರ ಹಾಗೆ ವೇಷ ಬದಲಾಯಿಸಿ, ಮಕ್ಕಳನ್ನು ಬ್ರಾಹ್ಮಣ ಪುತ್ರರ ಹಾಗೆ ಮಾಡಿ, ಕೆಲವಾರು ತಲೆಗಳು ತಪ್ಪಿ ಉಳಿಯುವಂತೆ ಮಾಡಿದರು.

ಈ ವಿಧವಾಗಿ ಪರಶುರಾಮನು ಇಪ್ಪತ್ತೊಂದು ಸಾರಿ ಭೂಮಿಯಲ್ಲಿ ತಿರುಗಿ ಕ್ಷತ್ರಿಯರೆಂಬವರಾರೂ ಕಾಣದಂತೆ ಮಾಡಿದನು. ತಾಯಿಯ ಪ್ರೀತ್ಯರ್ಥವಾಗಿ ಈ ಇಪ್ಪತ್ತೊಂದು ಸಂಹಾರ ಪ್ರದಕ್ಷಿಣೆಗಳಿಂದ ಅವನ ಪ್ರತಿಜ್ಞೆ ಪೂರ್ತಿಯಾಯಿತು. ಹೀಗೆ ಎಲ್ಲಾ ಕ್ಷತ್ರಿಯ ರಾಜರನ್ನೂ ಕೊಂದುದರಿಂದ ಪರಶುರಾಮನು ತನ್ನ ಅಧೀನವಾದ ಭೂಮಿಯನ್ನೆಲ್ಲಾ ಕಶ್ಯಪನಿಗೆ ದಾನಮಾಡಿ, ದಕ್ಷಿಣ ಸಮುದ್ರ ತೀರದ ಮಹೇಂದ್ರ ಪರ್ವತದ ಮೇಲೆ ತಪಸ್ಸಿನಲ್ಲಿ ಮಗ್ನನಾಗಿ ಕುಳಿತನು.

ಬ್ರಾಹ್ಮಣರ ಮನೆಗಳಲ್ಲಿಯೂ, ಮುನಿಗಳ ಆಶ್ರಮಗಳಲ್ಲಿಯೂ ಬೆಳೆದು ದೊಡ್ಡವರಾದ ಕ್ಷತ್ರಿಯ ಕುಮಾರರಿಗೆಲ್ಲಾ, ಕಶ್ಯಪ ಪ್ರಜಾಪತಿ ಪರಶುರಾಮನು ಕೊಟ್ಟ ಭೂಮಿಯನ್ನು ಹಂಚಿ ಕೊಟ್ಟನು. ಅದರಿಂದ ಬೇರೆ ಬೇರೆ ರಾಜ್ಯಗಳು ಏರ್ಪಟ್ಟುವು. ರಾಜವಂಶಗಳೂ ತಲೆ ಎತ್ತಿದುವು. ಅಂತಹ ರಾಜವಂಶಗಳಲ್ಲಿ ಇಕ್ಷ್ವಾಕು ಸಂತತಿಗೆ ಸೇರಿದ ರಘು ಮಹಾರಾಜನು ರಘುವಂಶಕ್ಕೆ ಮೂಲ ಪುರುಷನಾದನು.

ಈ ರಘುವಂಶದಲ್ಲಿ ವಿಷ್ಣು ದಶರಥ ಮಹಾರಾಜನ ಹಿರಿಯ ಮಗನಾಗಿ ರಾಮಾವತಾರವನ್ನೆತ್ತಿ ಆದರ್ಶ ಮಾನವನೆನಿಸಿದನು. ಮಾನವತ್ವದ ಆಚರಣೆ ಹೇಗಿರಬೇಕೆಂಬುದಕ್ಕೆ ರಾಮನೇ ಉದಾಹರಣೆ. ರಾಮನಿಂದ ದೊಡ್ಡ ರೀತಿಯಲ್ಲಿ ರಾಕ್ಷಸ ಸಂಹಾರವಾಯಿತು. ಅವನ ರಾಜ್ಯ ಪರಿಪಾಲನಾ ವಿಧಾನವು ರಾಮರಾಜ್ಯವೆಂದು ಅಜರಾಮರವಾಯಿತು. ರಾಜನಾದವನು ಪ್ರಜೆಗಳ ಅಭಿಮತವನ್ನು ಒಪ್ಪಿಕೊಳ್ಳಲು ಎಂತಹ ತ್ಯಾಗವನ್ನಾದರೂ ಮಾಡಬೇಕಾಗಿ ಬರುತ್ತದೆಂಬುದನ್ನು ರಾಮನು ನಿರೂಪಿಸಿದನು.



"ದಶಾವತಾರಗಳಲ್ಲಿ ಏಳನೆಯದಾದ ರಾಮಾವತಾರವು ವಾಲ್ಮೀಕಿ ಮಹರ್ಷಿಯ ರಚನೆಯಲ್ಲಿ ರಾಮಾಯಣ ಕಾವ್ಯವಾಗಿ ವ್ಯಾಪ್ತಿಹೊಂದಿತು." ಹೀಗೆ ಹೇಳಿ ಸೂತಪುರಾಣಿಕನು ರಾಮನ ಕಥೆಯನ್ನು ಹೇಳಲು ಉಪಕ್ರಮಿಸಿದನು :

ಹಿರಣ್ಯಕಶಿಪು, ಹಿರಣ್ಯಾಕ್ಷರು ವಿಷ್ಣುವಿನ ಕೈಯಲ್ಲಿ ಹತರಾದ ಮೇಲೆ, ಎರಡನೇ ಸಾರಿಯ ರಾಕ್ಷಸ ಜನ್ಮದಲ್ಲಿ ರಾವಣ ಮತ್ತು ಕುಂಭಕರ್ಣರಾಗಿ ಹುಟ್ಟಿದ್ದರು. ಇವರಿಬ್ಬರೂ ಲೋಕಭಯಂಕರರಾಗಿ ವಿಜೃಂಭಿಸಿಕೊಂಡಿದ್ದರು.

ರಾವಣಾಸುರನು ದೊಡ್ಡ ತಪಸ್ಸು ಮಾಡಿ, ಬ್ರಹ್ಮನಿಂದ, ದೇವ, ಯಕ್ಷ, ಗಂಧರ್ವ ಮೊದಲಾದ ಯಾರಿಂದಲೂ ತನಗೆ ಹಾನಿಯಾಗದಂತೆ ವರವನ್ನು ಕೇಳಿ ಪಡೆದಿದ್ದನು. ಮಾನವ ಮಾತ್ರರು ತನ್ನನ್ನೇನೂ ಮಾಡುವಂತಿಲ್ಲವೆಂಬ ಗರ್ವದಲ್ಲಿ ಮಾನವರನ್ನು ವರದಲ್ಲಿ ಹೇಳಿರಲಿಲ್ಲ.

ಕುಂಭಕರ್ಣನ ಆಕಾರವೇ ಪರ್ವತದಂತಹುದು. ಅವನು ಕೂಡಾ ಭಾರಿ ತಪಸ್ಸನ್ನು ಮಾಡಿ ಬ್ರಹ್ಮನನ್ನು ಒಲಿಸಿ, ಆರು ತಿಂಗಳು ನಿದ್ದೆ, ಆರು ತಿಂಗಳು ಜಾಗರಣೆ ಎಂಬ ವರವನ್ನು ಕೇಳಿ ಪಡೆದುಕೊಂಡನು. ಅವನು ಜಾಗರಣೆಯಲ್ಲಿರುವಾಗ ಮನುಷ್ಯರನ್ನು ಹಿಡಿದು ಕೊಂದು ತಿಂದುಬಿಡುವನು.

ರಾವಣನು ಕುಬೇರನ ಪುಷ್ಪಕ ವಿಮಾನವನ್ನು ಎಳೆದುಕೊಂಡು, ಅವನನ್ನು ಲಂಕೆಯಿಂದ ಹೊರಗೆ ದೂಡಿ, ಲಂಕಾನಗರವನ್ನು ತನ್ನ ಸ್ವಾಧೀನಕ್ಕೆ ತೆಗೆದುಕೊಂಡನು. ಹೀಗೆ ಲಂಕೇಶ್ವರನಾಗಿ ರಾಕ್ಷಸರೆಲ್ಲರನ್ನೂ ತನ್ನೊಂದಿಗೆ ಸೇರಿಸಿಕೊಂಡು, ಲೋಕಗಳನ್ನೆಲ್ಲಾ ಜಯಿಸುತ್ತಾ ವೀರವಿಹಾರ ಮಾಡಿದನು.

ರಾವಣನಿಗೆ ಹತ್ತು ತಲೆಗಳಿದ್ದುವು. ಅವನು ಒಮ್ಮೆ ಕೈಲಾಸಕ್ಕೆ ಹೋಗಿ, ನಂದೀಶ್ವರನನ್ನು ನೋಡಿ ಕೋತಿಮೂತಿಯವನೆಂದು ನಂದೀಶ್ವರನಿಗೆ ಎಗತಾಳಿ ಮಾಡಿದನು. ಅದರಿಂದ ಕೋತಿಗಳಿಂದಲೇ ಲಂಕೆಗೆ ಕೇಡು ಬರುವುದೆಂದು ನಂದೀಶ್ವರನು ಅವನನ್ನು ಶಪಿಸಿದನು.

ರಾವಣನು ತನ್ನ ಇಪ್ಪತ್ತು ಭುಜಗಳ ತೀಟೆ ತೀರುವ ಹಾಗೆ ಕೈಲಾಸಪರ್ವತವನ್ನು ಎತ್ತಿ ನಡುಗಿಸಿದನು. ಆಗ ಶಿವನು ತನ್ನ ಕಾಲಿನ ಹೆಬ್ಬೆರಳಿನಿಂದ ಒತ್ತಿದ ಕೂಡಲೇ ಪರ್ವತದ ಕೆಳಗೆ ಅವನ ಕೈಗಳು ಸಿಕ್ಕಿಕೊಂಡು ದೊಡ್ಡದನಿಯಿಂದ ಆರ್ತನಾದ ಮಾಡಿದನು. ಅದರಿಂದಲೇ ಅವನಿಗೆ ರಾವಣನೆಂಬ ಹೆಸರು ಬಂತು. ಅದಕ್ಕೆ ಮೊದಲು ದಶಕಂಠನೆಂದೇ ಕರೆಯಿಸಿಕೊಳ್ಳುತ್ತಿದ್ದನು.

ರಾವಣನು ತನ್ನ ಒಂದೊಂದು ತಲೆಯನ್ನೂ ಖಂಡಿಸಿಕೊಂಡು, ಶಿವನನ್ನು ಅನೇಕ ವಿಧವಾಗಿ ಸ್ತೋತ್ರ ಗಾನ ಮಾಡಿ ಮೆಚ್ಚಿಸಿ ಶಿವನ ಅನುಗ್ರಹಕ್ಕೆ ಪಾತ್ರನಾದನು. ರಾವಣನು ಬಹು ದೊಡ್ಡ ಶಿವಭಕ್ತನೂ ಹೌದು.

ಅಷ್ಟೇ ದೊಡ್ಡ ಅಹಂಕಾರಿಯೂ ಹೌದು. ಎಷ್ಟು ಪರಾಕ್ರಮಶಾಲಿಯೋ ಅಷ್ಟೇ ಕ್ರೂರನೂ ನಿಜ. ಪರಸ್ತ್ರೀಯರನ್ನು ಅಪಹರಿಸುವುದರಲ್ಲಿ ಅವನಿಗೆ ಅವನೇ ಸಾಟಿ. ಸ್ತ್ರೀಯರನ್ನು ಬಲಾತ್ಕರಿಸುವುದೊಂದು ವೀರತ್ವದ ಲಕ್ಷಣವೆಂದೇ ತಿಳಿದಿದ್ದನು. ಅವನಿಗೆ ಆ ಬಗೆಯ ಭಾವನೆಯುಂಟಾಗಿತ್ತು.

ಹೀಗಾಗಿ ಕಡೆಗೆ ಇಷ್ಟ ಪಡದ ಸ್ತ್ರೀಯನ್ನು ಬಲವಂತ ಪಡಿಸಿದರೆ ಹತ್ತು ತಲೆಗಳೂ ಉರುಳುತ್ತವೆಂಬ ಶಾಪವನ್ನೇ ಪಡೆದನು.

ಈ ರಾವಣಾಸುರನ ಪತ್ನಿಯ ಹೆಸರು ಮಂಡೋದರಿ. ಇವಳು ಮಯನ ಮಗಳು. ಅವಳು ಗಂಡನ ಹಿತವನ್ನು ಬಯಸಿ ಆಗಾಗ ರಾವಣನಿಗೆ ಒಳ್ಳೆಯ ಮಾತುಗಳನ್ನು ಹೇಳುತ್ತಿದ್ದಳು. ರಾವಣನ ಸವತಿ ತಮ್ಮನಾದ ವಿಭೀಷಣನೂ ಉತ್ತಮ ಗುಣವವನು. ಅವನು ಕೂಡಾ ರಾವಣನಿಗೆ ಹಿತವನ್ನು ಹೇಳುತ್ತಿದ್ದನು. ಆದರೆ ರಾವಣನು ಒಬ್ಬರ ಮಾತನ್ನು ಕೇಳುವವನಲ್ಲ. ತನಗೆಲ್ಲಾ ಗೊತ್ತೆಂಬ ಅಹಂಕಾರವೇ ಹೆಚ್ಚಾಗಿರುವವನು.

ವಿಂಧ್ಯಪರ್ವತಕ್ಕೆ ದಕ್ಷಿಣದಲ್ಲಿರುವ ಭೂಭಾಗವೂ, ಸಮುದ್ರವೂ, ದ್ವೀಪಗಳೂ ರಾವಣರಾಜ್ಯವೆಂದು ಲಂಕಾ ಮಹಾ ಸಾಮ್ರಾಜ್ಯವಾಗಿದ್ದಿತು. ಅಲ್ಲಿ ರಾಕ್ಷಸ ಸಮೂಹಗಳು ವಾಸವಾಗಿರುತ್ತ, ನರಭಕ್ಷಕರಾಗಿ, ಆರ್ಯಾವರ್ತದಲ್ಲಿ ಯಜ್ಞಯಾಗಾದಿಗಳು ನಡೆಯದಂತೆ ಧ್ವಂಸ ಕಾರ್ಯ ಮಾಡುತ್ತ, ಋಷಿಗಳಿಗೆ ಚಿತ್ರಹಿಂಸೆ ನೀಡುತ್ತ ಅಟ್ಟಹಾಸ ಮಾಡಿ ವಿನೋದಿಸಿಕೊಂಡಿದ್ದರು.

ಕೃಶಧ್ವಜನೆಂಬ ರಾಜರ್ಷಿ ವೇದಪಾರಾಯಣ ಮಾಡಿಕೊಂಡಿದ್ದಾಗ ಹುಟ್ಟಿದ ವೇದವತಿ ಎಂಬ ಕನ್ಯೆ ವಿಷ್ಣುವೇ ತನ್ನ ಗಂಡನಾಗಬೇಕೆಂದು ಬಯಸಿ ತಪಸ್ಸು ಮಾಡುತ್ತಿದ್ದಳು. ಆಗ ರಾವಣನು ಅವಳನ್ನು ನೋಡಿ, ವಿಷ್ಣುವಿಗಿಂತಲೂ ತಾನೇ ಅಧಿಕನೆಂದು ಹೇಳಿ, ತನ್ನೊಂದಿಗೆ ಬಾರೆಂದು ಅವಳ ತಲೆ ಮುಡಿಗೆ ಕೈ ಹಾಕಿ ಎಳೆದನು.

ಆಗ ವೇದವತಿ, "ದುರಾತ್ಮಾ ! ನೀನು ಮುಟ್ಟಿದ ಈ ಶರೀರವನ್ನು ತ್ಯಜಿಸುತ್ತೇನೆ. ನಿನ್ನ ಲಂಕೆಯಲ್ಲಿಯೇ ನಾನು ಹುಟ್ಟಿ ನಿನ್ನ ಸರ್ವನಾಶಕ್ಕೆ ಕಾರಣಳಾಗುತ್ತೇನೆ. ವಿಷ್ಣುವೇ ನನ್ನನ್ನು ವರಿಸುತ್ತಾನೆ." ಎಂದು ಹೇಳುತ್ತ ಯೋಗಾಗ್ನಿಯನ್ನು ಧಳ್ಳುರಿಸಿಕೊಂಡು ಅದರಲ್ಲೇ ದಗ್ಧಳಾಗಿ ಹೋದಳು.

ರಾಕ್ಷಸರನ್ನು ನಿರ್ಮೂಲಮಾಡಿ ಲೋಕ ಕಲ್ಯಾಣ ಮಾಡಬೇಕೆಂಬ ಉದ್ದೇಶದಲ್ಲಿ ಮಹಾ ವಿಷ್ಣು ಅವತಾರ ಎತ್ತ ಬೇಕಾದ ಕಾಲವು ಬಂದಿತು. ವಿಷ್ಣು ಮಾನವನಾಗಿಯೂ, ದೇವತೆಗಳೆಲ್ಲಾ ವಾನರರಾಗಿಯೂ ಜನ್ಮತಾಳಿದರು.





ನಾಶಮಾಡುವ ಆನೆಗಳನ್ನು ಬೇಟೆಯಾಡಲು ಹೊರಟಿದ್ದನು. ಆ ಕತ್ತಲೆಯಲ್ಲಿ ಮುನಿಬಾಲಕನೊಬ್ಬನು ಕಮಂಡಲುವಿನಲ್ಲಿ ನೀರು ಮುಳುಗಿಸಿಕೊಳ್ಳುವಾಗ ಹೊರಟ ಶಬ್ದವನ್ನು ಆನೆ ನೀರು ಹೀರುವ ಶಬ್ದವೆಂದು ತಿಳಿದು ಬಾಣದಿಂದ ಹೊಡೆದನು. ಬಾಣದೇಟಿನಿಂದ ಸಾಯುವ ಬಾಲಕನ ಕೂಗನ್ನು ಕೇಳಿ ದಶರಥನು ನಿಜವನ್ನು ತಿಳಿದು ಓಡಿಬಂದನು. ಬಾಲಕನು ತಾನು ಯಾರೆಂದು ಹೇಳಿ ಪ್ರಾಣಬಿಟ್ಟನು. ದಶರಥನು ತಾನೇ ಕಮಂಡಲುವನ್ನು ತೆಗೆದುಕೊಂಡು ಕುರುಡರಾದ ಆ ಬಾಲಕನ ತಾಯಿ ತಂದೆಯರ ಬಳಿಗೆ ಹೋಗಿ, ಅವರ ದಾಹ ತೀರಿಸಿ ನಡೆದ ಸಂಗತಿಯನ್ನು ಹೇಳಿದನು.

ಆ ಮುನಿ ದಂಪತಿಗಳು ಪುತ್ರಶೋಕದಿಂದ, "ನೀನೂ ನಮ್ಮ ಹಾಗೆಯೇ ಪುತ್ರನನ್ನು ನೆನೆದುಕೊಂಡೇ ಪ್ರಾಣಬಿಡು" ಎಂದು ದಶರಥನನ್ನು ಶಪಿಸಿ ಪ್ರಾಣಗಳನ್ನು ಬಿಟ್ಟರು.

ಸೂರ್ಯವಂಶದ ರಾಜರಲ್ಲಿ ಶರಣಾಗತ ರಕ್ಷಣೆಗೆ ಕೀರ್ತಿ ಪಡೆದವನು ಶಿಬಿ ಚಕ್ರವರ್ತಿ. ಶಿಬಿಯನ್ನು ಪರೀಕ್ಷಿಸಬೇಕೆಂದುಕೊಂಡು ಇಂದ್ರನು ಪಾರಿವಾಳದ ರೂಪ ಧರಿಸಿದನು. ಅಗ್ನಿ ಹದ್ದಿನ ರೂಪ ತಾಳಿ ಪಾರಿವಾಳವನ್ನು ಓಡಿಸುತ್ತಾ ಹೊರಟನು. ಓಡಿ ಓಡಿ ಪಾರಿವಾಳವು ತೇಕುತ್ತಾ ಶಿಬಿ ರಾಜನ ತೊಡೆಯ ಮೇಲೆ ಎರಗಿತು. ಅದನ್ನು ಹಿಡಿಯಲು ಬಂದ ಹದ್ದನ್ನು ನೋಡಿ ಶಿಬಿ, ಪಾರಿವಾಳದ ಭಾರದಷ್ಟು ಮಾಂಸವನ್ನು ತನ್ನ ತೊಡೆಯಿಂದ ತೆಗೆದುಕೊಳ್ಳುವಂತೆ ಹೇಳಿದನು.

ಶಿಬಿ ತನ್ನ ತೊಡೆಯಿಂದ ಮಾತ್ರವಲ್ಲದೆ ಶರೀರದ ಭಾಗಗಳಿಂದ ಎಷ್ಟು ಮಾಂಸವನ್ನು ಕೊಯಿದು ಕೊಯಿದು ತಕ್ಕಡಿಗೆ ಹಾಕಿದರೂ, ಪಾರಿವಾಳದ ಭಾರಕ್ಕೆ ಸರಿಹೋಗಲಿಲ್ಲ. ಕಡೆಗೆ ಶಿಬಿ ತನ್ನನ್ನು ಪೂರ್ತಿಯಾಗಿ ತೆಗೆದುಕೊಳ್ಳುವಂತೆ ಹೇಳಿ ತಕ್ಕಡಿಯಲ್ಲಿ ಕುಳಿತುಬಿಟ್ಟನು.

ಆಗ ಇಂದ್ರನೂ ಅಗ್ನಿಯೂ ನಿಜರೂಪದಲ್ಲಿ ಪ್ರತ್ಯಕ್ಷರಾಗಿ, ಶಿಬಿಗೆ ಅನೇಕ ವರಗಳನ್ನು ಕೊಟ್ಟು ಮೆಚ್ಚಿ ಆಶೀರ್ವದಿಸಿ ಹೊರಟು ಹೋದರು.

ವಸಿಷ್ಠನೊಂದಿಗೆ ಸ್ಪರ್ಧೆಗೆ ಬಿದ್ದು, ದೊಡ್ಡ ತಪೋಬಲದಿಂದ ವಸಿಷ್ಠನಿಗೆ ಸಮಾನನೆಂಬಂತೆ ಗುರುತಿಸಲ್ಪಡುವ ಮಹರ್ಷಿಯಾಗಿ, ಪ್ರಸಿದ್ಧನಾದ ವಿಶ್ವಾಮಿತ್ರನು ಕೂಡಾ ಸೂರ್ಯವಂಶದವನಾದ ರಾಜನೇ!

ಅದೇ ಸೂರ್ಯವಂಶದ ಇಕ್ಷ್ವಾಕುಗಳಿಗೆ ಸೇರಿದವನಾದ ಅಂಬರೀಷನು ದೊಡ್ಡ ರಾಜರ್ಷಿಯೂ, ಪರಮ ವಿಷ್ಣುಭಕ್ತನೂ ಆಗಿರುವ ರಾಜ.

ಅಂಬರೀಷನಿಗೆ ಲಕ್ಷ್ಮಿ ತನ್ನ ಅಂಶದಿಂದ ಮಗಳಾಗಿ ಹುಟ್ಟಿದ್ದಳು. ಅವಳ ಹೆಸರು ಶ್ರೀಮತಿ. ಇವಳು ಚಿಕ್ಕತನದಿಂದಲೇ ವಿಷ್ಣುವನ್ನು ತನ್ನ ಗಂಡನೆಂದು ಭಾವಿಸಿ ಆರಾಧಿಸಿಕೊಂಡು ಬಂದಳು. ಅವಳ ಸೌಂದರ್ಯವನ್ನು ಕುರಿತು ಮೂರು ಲೋಕ



ರಘುವಿನ ಕುಮಾರನು ಅಜ. ಇವನು ಬಹು ದೊಡ್ಡ ಶೂರ, ಇವನನ್ನು ಭೋಜರಾಜನ ಮಗಳು ಇಂದುಮತಿ ಸ್ವಯಂವರದಲ್ಲಿ ವರಿಸಿಕೊಂಡಳು. ಅಜನು ಇಂದುಮತಿಯೊಂದಿಗೆ ತನ್ನ ಮನೆಗೆ ಹೊರಡುತ್ತಿರುವಾಗ, ಸ್ವಯಂವರಕ್ಕೆ ಬಂದಿದ್ದ ರಾಜರೆಲ್ಲರೂ ಒಂದಾಗಿ ಕೂಡಿ ಅವನ ಮೇಲೆ ಬಿದ್ದರು. ಅಜನು ಅವರೆಲ್ಲರನ್ನೂ ಇದಿರಿಸಿ ಯುದ್ಧ ಮಾಡಿ ಗೆದ್ದು ಎಲ್ಲರನ್ನೂ ಓಡಿಸಿಬಿಟ್ಟನು.

ಅಜನು ಇಂದುಮತಿಯೊಂದಿಗೆ ಉದ್ಯಾನವನದಲ್ಲಿ ವಿಹರಿಸಿಕೊಂಡಿರುವಾಗ, ಆಕಾಶಮಾರ್ಗದಲ್ಲಿ ಹೋಗುತ್ತಿದ್ದ ನಾರದನ ವೀಣೆಗೆ ಸುತ್ತಿದ್ದ ದೇವಲೋಕದ ಪುಷ್ಪಮಾಲೆ, ಜಾರಿ ಗಾಳಿಯಲ್ಲಿ ಹಾರುತ್ತಾ ಬಂದು ಇಂದುಮತಿಯ ಕೊರಳಿಗೆ ಬಿತ್ತು. ಕೂಡಲೇ ಇಂದುಮತಿ ಗಾಬರಿಯಿಂದ ಬಿದ್ದು ಸತ್ತುಹೋದಳು.

ಅಜನು ಪ್ರಿಯಸತಿಯ ಆಕಸ್ಮಿಕ ಮರಣಕ್ಕೆ ಪರಿತಪಿಸಿಕೊಂಡಿರುವಾಗ, ನಾರದನು ಬಂದು ಅವನಿಗೆ ಸಮಾಧಾನ ಹೇಳಿ, ಇಂದುಮತಿಯ ಪೂರ್ವ ವೃತ್ತಾಂತವನ್ನು ಹೇಳಿದನು :

ಅದೇನೆಂದರೆ, ಹರಿಣಿ ಎಂಬ ದಿವ್ಯಾಂಗನೆ, ದೊಡ್ಡ ತಪಸ್ಸನ್ನು ಮಾಡುತ್ತಿದ್ದ ತೃಣಬಿಂದುವಿನ ತಪಸ್ಸನ್ನು ಕೆಡಿಸಲು ದೇವೇಂದ್ರನ ಆಜ್ಞೆಯಿಂದ ಬಂದಳು. ಆದರೆ ತೃಣಬಿಂದು ತಪಸ್ವಿಯ ಶಾಪದಿಂದ ಅವಳು ಮಾನವಿಯಾಗಿ ಹುಟ್ಟಬೇಕಾಯಿತು. ಅವಳಿಗೆ ಶಾಪ ವಿಮೋಚನೆಯಾಗುವ ಮಾರ್ಗವನ್ನೂ ತೃಣಬಿಂದು ಸೂಚಿಸಿದ್ದನು.

ಸುರಪುಷ್ಪ ಮಾಲೆ ಅವಳ ಮೇಲೆ ಬಿದ್ದ ಕೂಡಲೇ ಅವಳಿಗೆ ತಾನು ದೇವಕಾಂತೆ ಎಂಬ ಸ್ಫುರಣೆಯುಂಟಾಗಿ, ಮಾನವ ಶರೀರವನ್ನು ಬಿಟ್ಟು ದೇವಲೋಕಕ್ಕೆ ಹೋಗುತ್ತಾಳೆ. ಹಾಗೆಯೇ ಆಯಿತು. ಅಂತಹ ಅಜನ ಕುಮಾರನೇ ದಶರಥನು.

ಇಕ್ಷ್ವಾಕು ವಂಶೀಯರಾದ ರಾಜರು ದೇವತೆಗಳಿಗೂ ರಾಕ್ಷಸರಿಗೂ ಯುದ್ಧವು ನಡೆಯುವಾಗ ದೇವತೆಗಳಿಗೆ ಸಹಾಯವಾಗಿ ಹೋಗುವರು. ಹಾಗೆಯೇ ಒಮ್ಮೆ ದಶರಥನು ಇಂದ್ರನಿಗೆ ಸಹಾಯವಾಗಿ ಹೋದನು. ಆಗ ಶಂಬರಾಸುರನೊಂದಿಗೆ ಯುದ್ಧ ಪ್ರಾರಂಭವಾಗಿತ್ತು. ದಶರಥನೊಂದಿಗೆ ಕೈಕೇಯಿ ಕೂಡಾ ಯುದ್ಧರಂಗಕ್ಕೆ ಹೋದಳು.

ಆ ಯುದ್ಧದಲ್ಲಿ ದಶರಥನು ವೀರಾವೇಶದಿಂದ ಕಾದಾಡುವಾಗ, ರಥದ ಚಕ್ರವು ಕಳಚಲಿರುವುದನ್ನು ನೋಡಿ, ಕೈಕೇಯಿ ಅದು ಕಳಚದಂತೆ ಹಿಡಿದುಕೊಂಡು ಕಾಪಾಡಿದಳು. ದಶರಥನು ಸಂತೋಷಪಟ್ಟು ಎರಡು ವರಗಳನ್ನು ಕೇಳುವಂತೆ ಅವಳಿಗೆ ಹೇಳಿದನು. ತನಗೆ ಬೇಕಾದಾಗ ಆ ಎರಡು ವರ ಕೇಳುವೆನೆಂದೂ, ಆಗ ಕೊಡಿರೆಂದೂ ಕೈಕೇಯಿ ಹೇಳಿದಳು.

ಒಂದಾನೊಂದು ದಿನ ದಶರಥನು ಕತ್ತಲೆಯ ರಾತ್ರಿಯಲ್ಲಿ, ಹೊಲಗದ್ದೆಗಳಿಗೆ ಬಂದು ಬೆಳೆಗಳನ್ನು

ಗಳಲ್ಲಿಯೂ ಅತಿಶಯವಾಗಿ ಹೇಳಿಕೊಳ್ಳುತ್ತಿದ್ದರು. ಒಮ್ಮೆ ನಾರದನೂ, ಪರ್ವತನೂ ಸಂಧಿಸಿಕೊಂಡು ಮಾತಾಡುತ್ತ ವಾದ ವಿವಾದಕ್ಕೆ ತೊಡಗಿದರು. ನಾರದನು ತಾನು ದೊಡ್ಡ ಮಾಯಾತೀತನೆಂಬ ಅಹಂಕಾರದಿಂದ ಪ್ರಗಲ್ಭವಾಡುತ್ತ, ಇಬ್ಬರೂ ತ್ರಿಲೋಕ ಸಂಚಾರಕ್ಕೆ ಹೊರಟರು.

ಅವರಿಬ್ಬರೂ ಅಂಬರೀಷನ ಅರಮನೆಗೆ ಬಂದರು. ಅಂಬರೀಷನು ಅವರನ್ನು ಪೂಜಿಸಿ, ಮಗಳು ಶ್ರೀಮತಿಯನ್ನು ಕರೆದು ನಮಸ್ಕಾರ ಮಾಡಿಸಿ, ಅವಳನ್ನು ಆಶೀರ್ವದಿಸುವಂತೆ ಕೇಳಿಕೊಂಡನು.

ವಿಷ್ಣುವಿನ ಮಾಯೆಯ ಪ್ರಭಾವವು ನಾರದ ಪರ್ವತರನ್ನು ಆವಹಿಸಿತು. ಶ್ರೀಮತಿಯನ್ನು ನೋಡಿ ಮೈಮರೆತು ಅವಳನ್ನು ತನಗೆ ಕೊಟ್ಟು ವಿವಾಹ ಮಾಡುವಂತೆ ಇಬ್ಬರೂ ಅಂಬರೀಷನನ್ನು ಕೇಳಿದರು. ಶ್ರೀಮತಿ ನನಗೆ ತನಗೆ ಎಂದು ಇಬ್ಬರೂ ವಾದ ಮಾಡತೊಡಗಿದರು. ಕೂಡಲೇ ಮದುವೆಗೆ ಏರ್ಪಾಡು ಮಾಡುವಂತೆ ಅಂಬರೀಷನನ್ನು ಒತ್ತಾಯಿಸ ತೊಡಗಿದರು.

ಅಂಬರೀಷನು ಮುನಿಗಳ ಆ ರೀತಿಯನ್ನು ನೋಡಿ ಏನೂ ತೋರದೆ ದಿಗ್ಭ್ರಾಂತನಾದನು. ಆಗ ಶ್ರೀಮತಿ ತನಗೆ ಸ್ವಯಂವರವನ್ನು ಏರ್ಪಡಿಸುವಂತೆ ತಂದೆಯೊಡನೆ ಹೇಳಿದಳು.

ಅಂಬರೀಷನು ನಾರದ ಪರ್ವತರೊಂದಿಗೆ "ನೀವಿಬ್ಬರೂ ಮಹರ್ಷಿಶ್ರೇಷ್ಠರು. ನಾನು ನನ್ನ ಮಗಳಿಗೆ ಸ್ವಯಂವರವನ್ನು ಏರ್ಪಡಿಸುತ್ತೇನೆ. ನನ್ನ ಮಗಳ ಇಷ್ಟದಂತೆ ಮದುವೆಯಾಗುತ್ತದೆ. ಆ ಸ್ವಯಂವರಕ್ಕೆ ನೀವಿಬ್ಬರೂ ಸಹ ಬರಬೇಕೆಂದು ಪ್ರಾರ್ಥನೆ" ಎಂದನು ಕೈಮುಗಿದು.

ಮುನಿಗಳಿಬ್ಬರೂ ಬಾಡಿದ ಮೋರೆಯಿಂದ ಹೊರಟುಹೋದರು. ಶ್ರೀಮತಿಯನ್ನು ಹೇಗಾದರೂ ತನ್ನವಳನ್ನಾಗಿ ಮಾಡಿಕೊಳ್ಳಬೇಕೆಂದು ನಾರದನಿಗೆ ಊಹನೆಗಳ ಸರಮಾಲೆ, ಉಪಾಯಗಳ ಮೇಲೆ ಉಪಾಯ. ಶ್ರೀಮತಿ ನಾರದನನ್ನು ವರಿಸದಿದ್ದರೆ ಸಾಕು, ಎಂದು ಪರ್ವತನಿಗೂ ದೀರ್ಘಾಲೋಚನೆ.

ನಾರದನು ವಿಷ್ಣುವಿನ ಬಳಿಗೆ ಹೋಗಿ, ಮಣಿ ಕಿರೀಟ ಕೌಸ್ತುಭಹಾರ, ವೈಜಯಂತಿಮಾಲೆ ಮೊದಲಾದ ವಿಷ್ಣುಭೂಷಣಗಳನ್ನು ತನಗೆ ಕೊಡುವಂತೆ ಕೇಳಿದನು. ವಿಷ್ಣು ತನ್ನ ರೂಪವನ್ನು ಹಾಗೆಯೇ ನಾರದನಿಗೆ ಕೊಟ್ಟನು.

ನಾರದನು ಹೋದ ಮೇಲೆ ಪರ್ವತನು ಬಂದು ವಿಷ್ಣುವನ್ನು ಸ್ತುತಿಸಿ, ಸ್ವಯಂವರದಲ್ಲಿ ನಾರದನ ಮುಖವು ಕೋತಿಯ ಹಾಗೆ ಕಾಣುವಂತೆ ಬದಲಾಯಿಸಬೇಕೆಂದು ಕೇಳಿಕೊಂಡನು. ಹಾಗೆಯೇ ಆಗಲೆಂದನು ವಿಷ್ಣು.





ದೊಡ್ಡ ರೀತಿಯಲ್ಲಿ ನಡೆದುವು. ಹಾಗೆಯೇ ಚೈತ್ರ ಪೌರ್ಣಮಿಯ ದಿನ ರಾಜಭವನದ ಮೇಲ್ಮಾಳಿಗೆಯ ಮೇಲೆ ಹರಡಿದ ಶುಭ್ರವಾದ ಬೆಳುದಿಂಗಳಿನಲ್ಲಿ ದಶರಥನು ರಾಣಿಯರ ಜತೆಯಲ್ಲಿ ನಾಲ್ವರು ಚಿರಂಜೀವಿಗಳೊಂದಿಗೆ ಆನಂದಲೀಲೆಯಲ್ಲಿದ್ದನು. ಮಂತ್ರಿ ಸುಮಂತ್ರನೂ, ರಾಮನನ್ನು ಯಾವಾಗಲೂ ಎತ್ತಿ ಆಡಿಸಿಕೊಂಡಿರುವ ಅಂತರಂಗಿಕನಾದ ರಾಜ ಬಂಧು ಭದ್ರನೂ ಅಲ್ಲಿಯೇ ಇದ್ದರು. ಬಗೆ ಬಗೆಯ ಚಿತ್ರಾನ್ನಗಳೊಂದಿಗೆ ಅವರೆಲ್ಲರಿಗೂ ಬೆಳದಿಂಗಳೂಟ ನಡೆಯಿತು.

ಕೌಸಲ್ಯೆ ರಾಮನನ್ನು ಎತ್ತಿಕೊಂಡು ಚಂದ್ರನನ್ನು ತೋರಿಸುತ್ತಿರಲು, ರಾಮನು ಚಂದ್ರನ ಕಡೆಗೆ ಕೈ ನೀಡುತ್ತ ಅದು ಬೇಕೆಂದು ಒಂದೇ ಹಟ ಶುರು ಮಾಡಿದನು. ಎಷ್ಟು ಲಲ್ಲೆಮಾಡಿ ಮಂಗಾಡಿಸಿದರೂ ಅವನ ಅಳು ನಿಲ್ಲಲಿಲ್ಲ. ಬಾಲರಾಮನ ಅಳುವಿಕೆ ಎಲ್ಲರ ಗಮನವನ್ನೂ ಸೆಳೆಯಿತು.

ಆಗ ಸುಮಂತ್ರನು ಒಂದು ಕನ್ನಡಿಯನ್ನು ತರಿಸಿ ರಾಮನ ಮುಂದಿಟ್ಟು ಅದರಲ್ಲಿಯ ಚಂದ್ರಬಿಂಬ ವನ್ನು ಶಿಶುರಾಮನಿಗೆ ತೋರಿಸಿದನು. ರಾಮನು ಸಂತೋಷದಿಂದ ನಗುತ್ತ "ಆನು ಲಾಮಾ ಚಂದಾ" ಎಂದು ಮುದ್ದುಮುದ್ದಾಗಿ ತಪ್ಪು ನುಡಿಗಳಿಂದ ಚಪ್ಪಾಳೆ ತಟ್ಟಿದನು. "ಹೌದು, ನೀನು ರಾಮಚಂದ್ರ" ಎಂದು ಎಲ್ಲರೂ ನಗುತ್ತ ಮುದ್ದು ಮುದ್ದಾಗಿ ಹಾಗೆಯೇ ಕರೆಯತೊಡಗಿದರು.

ಆಮೇಲೆ ಭದ್ರನು ರಾಮನನ್ನೆತ್ತಿಕೊಂಡು ಕನ್ನಡಿಯ ಚಂದ್ರನನ್ನು ತೋರಿಸಿ "ಈಗ ನೀನು ಯಾರು ?" ಎಂದನು.

"ಲಾಮ ಬದ್ದಲ !" ಎಂದನು ರಾಮ. ಈ ವಿಧವಾಗಿ ರಾಮಭದ್ರನೆಂಬ ಹೆಸರು ಕೂಡಾ ಅವನಿಗೆ ಬಂತು.

ಆಮೇಲೆ ಲಕ್ಷ್ಮಣ ಭರತ ಶತ್ರುಘ್ನರು ಸಹಾ ಸೇರಿ ಕನ್ನಡಿಯಲ್ಲಿ ಕಾಣಿಸಿದರು. ಮೇಲೆ ತುಂಬಿದ ಚಂದ್ರಬಿಂಬವು ಕೊಡೆಯ ಹಾಗೆ ತೋರಿತು. ಎಲ್ಲರಿಗೂ ಆ ದೃಶ್ಯವು ರಾಮಪಟ್ಟಾಭಿಷೇಕವನ್ನು ಸ್ಫುರಿಸುವಂತೆ ಮಾಡಿತು. ಆಗ ದಶರಥನಿಗೂ, ಮೂವರು ಅಮ್ಮಂದಿರಿಗೂ ಆದ ಸಂತೋಷಕ್ಕೆ ಮೇರೆ ಇರಲಿಲ್ಲ. ಎಲ್ಲರೂ ಬಿಡದೆ ರಾಮನನ್ನೆತ್ತಿ ಮುದ್ದಾಡಿದ್ದೇ ಆಡಿದ್ದು !

ರಾಜಕುಮಾರರು ಬೆಳೆಯುತ್ತಾ ಬರುತ್ತಿದ್ದರು. ಲಕ್ಷ್ಮಣನು ಯಾವಾಗಲೂ ರಾಮನನ್ನು ಅಂಟಿ ಕೊಂಡೇ ಇರುತ್ತಿದ್ದನು. ಅದರಂತೆ ಭರತಶತ್ರುಘ್ನ ರಿಬ್ಬರೂ ಜಂಟಿಗಳ ಹಾಗೆ ಒಂದೇ ಜೀವದಂತಿದ್ದರು. ಹೀಗೆ ಇಬ್ಬರಿಬ್ಬರ ಕಟ್ಟಿನೊಂದಿಗೆ ನಾಲ್ವರೂ ಒಗ್ಗಟ್ಟಾಗಿದ್ದರು. ರಾಮನೇ ಅವರೆಲ್ಲರ ನಾಯಕ.

ಅಣ್ಣತಮ್ಮಂದಿರು ನಾಲ್ವರಾದರೂ ಅವರೆಲ್ಲಾ ಒಟ್ಟಿಗೆ ಒಂದು ಪರಿಪೂರ್ಣ ರೂಪದಂತೆ ಕಾಣುತ್ತಿದ್ದರು.




ಕುಲ ಪುರೋಹಿತರಾದ ವಸಿಷ್ಠರ ಪ್ರೇರಣೆಯಂತೆ ದಶರಥ ಮಹಾರಾಜನು ಪುತ್ರ ಕಾಮೇಷ್ಟಿಯಾಗವನ್ನು ಮಾಡುವಾಗ, ಅಗ್ನಿದೇವನು ಪ್ರತ್ಯಕ್ಷನಾಗಿ ಅವನ ಕೈಗೊಂದು ಪಾಯಸದ ಕಲಶವನ್ನು ಕೊಟ್ಟನು. ಪುತ್ರವರಪ್ರಸಾದವಾದ ಆ ಕಲಶವನ್ನು ದಶರಥನು ಆತ್ಮಾನಂದದಿಂದ ಪಡೆದುಕೊಂಡು ಅದರಲ್ಲಿದ್ದ ಪಾಯಸವನ್ನು ಕೌಸಲ್ಯೆಗೂ ಕೈಕೇಯಿಗೂ ಸಮನಾಗಿ ಹಂಚಿ ಕೊಟ್ಟನು.

ಅವನಿಗೆ ಕೌಸಲ್ಯೆ, ಸುಮಿತ್ರೆ, ಕೈಕೇಯಿ ಎಂಬ ಮೂವರು ರಾಣಿಯರಿದ್ದರೂ ಪಾಯಸವನ್ನು ಇಬ್ಬರಿಗೇ ಹಂಚಿಕೊಟ್ಟಿದ್ದನು. ಕೌಸಲ್ಯೆ ತನಗೆ ಕೊಟ್ಟ ಪಾಯಸದಿಂದ ಸ್ವಲ್ಪವನ್ನು ಸುಮಿತ್ರೆಗಾಗಿ ಬೇರೊಂದು ಪಾತ್ರಕ್ಕೆ ಸುರಿದಳು. ಹಾಗೆಯೇ ಕೈಕೇಯಿ ಕೂಡಾ ತನಗೆ ಬಂದ ಪಾಯಸದಿಂದ ಸ್ವಲ್ಪವನ್ನು ಆ ಪಾತ್ರಕ್ಕೆ ಹಾಕಿದಳು. ಹೀಗೆ ಮೂವರು ರಾಣಿಯರೂ ಭೇದವೇನಿಲ್ಲದಂತೆ ಆ ಪಾಯಸವನ್ನು ಸೇವಿಸಿದರು.

ಚೈತ್ರಶುದ್ಧ ನವಮಿಯ ದಿನ ಕೌಸಲ್ಯೆಯ ಹೊಟ್ಟೆಯಿಂದ ವಿಷ್ಣು ರಾಮನೆಂಬ ಹೆಸರಿನಿಂದ, ನೀಲಮೇಘ ಛಾಯೆಯ ಶರೀರಕಾಂತಿಯಿಂದ ಹುಟ್ಟಿದನು. ಅವನೇ ದಶರಥನ ಹಿರಿಯ ಮಗ.

ಆಮೇಲೆ ಕೈಕೇಯಿಗೆ ಶಂಖ ಪದ್ಮಗಳ ಅಂಶದಿಂದ ಮುತ್ತಿನಂತೆ ಬಿಳೀ ಬಣ್ಣದಿಂದ ಭರತನು ಹುಟ್ಟಿದನು.

ಶೇಷನ ಅಂಶದಿಂದ ಬಂಗಾರದ ವರ್ಣದೊಂದಿಗೆ ಲಕ್ಷ್ಮಣನೂ, ಚಕ್ರಗದೆಗಳ ಅಂಶದಿಂದ ಹವಳದ ಕೆಂಬಣ್ಣದೊಂದಿಗೆ ಶತ್ರುಘ್ನನೂ ಸುಮಿತ್ರೆಯ ಹೊಟ್ಟೆಯಿಂದ ಹುಟ್ಟಿದರು. ಹೀಗೆ ದಶರಥನಿಗೆ ಮೂವರು ರಾಣಿಯರಲ್ಲಿ ನಾಲ್ವರು ಮಕ್ಕಳಾದರು.

ಚೈತ್ರಶುದ್ಧ ನವಮಿಯ ಆ ಸುದಿನವು ರಾಮನವಮಿ ಎಂದು ಹೆಸರು ಪಡೆದು, ಕೋಸಲ ರಾಜ್ಯದೊಳಗೆಲ್ಲಾ ಆನಂದೋತ್ಸವಗಳು ನಡೆಯುತ್ತಿದ್ದುವು. ಅಂತಹ ಮೂರನೇ ಚೈತ್ರವು ಬಂದಿತು. ಅಯೋಧ್ಯಾ ನಗರದಲ್ಲಿ ಚಕ್ರವರ್ತಿಯ ಹಿರಿಯ ಕುಮಾರನ ಜನ್ಮದಿನೋತ್ಸವದ ವಿನೋದಗಳೂ, ದಾನಧರ್ಮಗಳೂ



ಕುಲಗುರುವಾದ ವಸಿಷ್ಠರ ಹತ್ತಿರ ರಾಜಕುಮಾರರು ಸಕಲ ವಿದ್ಯೆಗಳನ್ನೂ ಕಲಿತರು. ರಾಮನು ಚಿಕ್ಕ ವಯಸ್ಸಿನಲ್ಲಿಯೇ ದೊಡ್ಡ ದೊಡ್ಡ ಶಾಸ್ತ್ರಗಳನ್ನು ಓದಿಕೊಂಡನು. ಸಕಲ ಶಾಸ್ತ್ರಗಳೂ, ವೇದ, ವೇದಾಂಗಗಳೂ, ಧರ್ಮ ಸೂಕ್ಷ್ಮಗಳೂ, ಯೋಗ ರಹಸ್ಯಗಳೂ, ಪ್ರಪಂಚ ವ್ಯವಹಾರಗಳೂ ಅವನಿಗೆ ಅವಗತವಾದುವು.

ವಸಿಷ್ಠನು ರಾಮನಿಗೆ ಅವನ ವಂಶವೃತ್ತಾಂತವನ್ನು ಹೇಳಲು ತೊಡಗಿ, "ರಾಮಚಂದ್ರಾ, ನಿಮ್ಮ ವಂಶದ ಆದಿಕರ್ತನು ಸೂರ್ಯನು. ಅಂತಲೇ ನೀನು ರವಿರಾಮನೆನಿಸುವಿ. ಇಕ್ಷ್ವಾಕುಕುಲ ತಿಲಕನು ನೀನು. ನಿನ್ನ ಮುತ್ತಾತನಾದ ರಘು ಮಹಾರಾಜನು ಬಹು ದೊಡ್ಡ ಕೀರ್ತಿಗಳಿಸಿದ್ದಾನೆ. ಈ ರಘುವಂಶ ಸುಧಾಂಬುಧಿಯಲ್ಲಿ ನೀನು ಚಂದ್ರನು. ರಘುರಾಮಚಂದ್ರನು. ನಿನ್ನ ಹೆಸರು ಅಜರಾಮರ!" ಎಂದು ಹೇಳಿ ರಾಮನನ್ನು ಆಶೀರ್ವಾದ ಮಾಡಿದನು.

ಹೀಗೆ ಸೂತಪುರಾಣಿಕನು ಹೇಳಿಕೊಂಡು ಹೋಗುವುದನ್ನು ನೋಡಿ, ನೈಮಿಷಾರಣ್ಯದ ಶೌನಕಾದಿ ಮುನಿಗಳು, "ಅಯ್ಯಾ, ಸೂತ ಮುನೀಂದ್ರಾ, ಸೂರ್ಯವಂಶದ ರಾಜರ ಚರಿತ್ರೆಯನ್ನು ಇನ್ನಿಷ್ಟು ವಿಪುಲವಾಗಿ ಹೇಳಬೇಕು" ಎಂದು ಕೇಳಿಕೊಂಡನು.

ಸೂತನು ಹೇಳತೊಡಗಿದನು: ಮಹಾ ಕಲ್ಪಾರಂಭದಲ್ಲಿ ವಿವಸ್ವಂತನೆಂಬ ಹೆಸರಿನಿಂದ ಪ್ರಕಾಶಿಸಿದ ಸೂರ್ಯನಿಗೆ ಕುಮಾರನಾಗಿ ವೈವಸ್ವತನು ಜನಿಸಿ ಮನುವಾಗಿ ಪ್ರಸಿದ್ಧಿ ಪಡೆದನು.

ಆ ವೈವಸ್ವತ ಮನುವಿಗೆ ಇಕ್ಷ್ವಾಕು ಮೊದಲಾದ ಹತ್ತು ಮಂದಿ ಕುಮಾರರಾದರು.

ಅವರೆಲ್ಲಾ ದೊಡ್ಡ ದೊಡ್ಡ ರಾಜರಾಗಿ ಧರಣಿಯನ್ನು ಆಳಿದರು. ಅವರ ಸಂತತಿಗಳು ಚೆನ್ನಾಗಿ ಬೆಳೆದು ಸೂರ್ಯವಂಶವು ಶಾಖೋಪಶಾಖೆಗಳಾಗಿ ಧರಣಿಮಂಡಲದೊಳಗೆಲ್ಲಾ ಹರಡಿ ಬಹಳ ವಿಸ್ತರವಾಯಿತು.

ಇಕ್ಷ್ವಾಕು ಸಂತತಿಯವರಲ್ಲಿ ದಿಲೀಪನೂ, ರಘುವೂ ಧರ್ಮಪರಾಯಣರಾದ ಬಹು ದೊಡ್ಡ ಚಕ್ರವರ್ತಿಗಳೆಂದು ಹೆಸರು ಪಡೆದರು.

ಒಮ್ಮೆ ದಿಲೀಪ ಮಹಾರಾಜನು ಸಂತಾನ ಪ್ರಾಪ್ತಿಗಾಗಿ, ಕುಲಗುರುವಾದ ವಸಿಷ್ಠನ ಆದೇಶದಂತೆ ಕಾಮಧೇನುವಿನ ಅಂಶವಾದ ನಂದಿನಿ ಎಂಬ ಧೇನುವನ್ನು ಭಕ್ತಿಶ್ರದ್ಧೆಗಳಿಂದ ಆರಾಧಿಸುತ್ತ, ಅದನ್ನು ತಾನೇ ಅರಣ್ಯಕ್ಕೆ ಒಯ್ದು ಹುಲ್ಲುಗಾವಲಿನಲ್ಲಿ ಮೇಯಿಸುತ್ತಿದ್ದನು. ಆ ಧೇನು ಮೇಯುತ್ತಾ ಒಂದು ಗುಹೆಯೊಳಗೆ ಪ್ರವೇಶಮಾಡಿತು. ಆ ಗುಹೆಯೊಳಗಿದ್ದ ಭಯಂಕರವಾದೊಂದು ಸಿಂಹವು ಧೇನುವನ್ನು ಹಿಡಿದುಕೊಂಡಿತು. ಅದನ್ನು ನೋಡಿ ದಿಲೀಪನು ಸಿಂಹವನ್ನು ಕೊಲ್ಲಲು, ಧನುಸ್ಸಿಗೆ ಬಾಣಹೂಡಲು, ಅವನ ಕೈಗಳು ಅಲುಗಿಸಲಾಗದಂತೆ ಸ್ತಂಭನ



ಗೊಂಡುವು. ದಿ ಲೀ ಪ ನು ಆತ್ಮಾಶ್ಚರ್ಯದಿಂದ ಏನೂ ತೋರದೆ ನಿರ್ವಿಣ್ಣನಾಗಿ ನಿಂತನು.

ಆಗ ಸಿಂಹವು ಅವನೊಂದಿಗೆ "ಓ ರಾಜಾ! ಈ ಆಕಳು ನನಗೆ ದೊರೆತ ಆಹಾರವಾಗಿದೆ. ಹಾಗಿರುವಾಗ ನನ್ನನ್ನು ನೀನೀಗ ಕೊಲ್ಲುವುದು ಅಧರ್ಮವಾದುದರಿಂದಲೇ ನಿನ್ನ ಕೈಗಳು ಮರಗಟ್ಟಿ ಹೋದುವು!" ಎಂದಿತು.

ಆ ಮಾತು ಕೇಳಿ ದಿಲೀಪನು ಇದು ಸಾಮಾನ್ಯ ಸಿಂಹವಲ್ಲವೆಂದು ತಿಳಿದು, "ಹಾಗಾದರೆ ನನ್ನನ್ನು ಆಹಾರವಾಗಿ ತೆಗೆದುಕೊಂಡು ಈ ಧೇನುವನ್ನು ಬಿಟ್ಟುಬಿಡು" ಎಂದು ಪ್ರಾರ್ಥಿಸಿದನು. ಆಗ ಆ ಸಿಂಹವು ಮಾಯವಾಗಿ ಹೋಯಿತು.

ನಂದಿನಿ ಧೇನು ದಿಲೀಪನ ಭಕ್ತಿಗೆ ಸಂತೋಷಪಟ್ಟು, ಆ ದೃಶ್ಯವನ್ನು ತಾನೇ ಕಲ್ಪಿಸಿದೆನೆಂದು ಹೇಳಿ, ಅವನಿಗೆ ಸಂತಾನ ಪ್ರಾಪ್ತಿಯಾಗುವಂತೆ ವರವನ್ನು ಕೊಟ್ಟಿತು.

ಹಾಗೆ ಹುಟ್ಟಿದ ದಿಲೀಪನ ಕುಮಾರನೇ ರಘು ಮಹಾರಾಜ. ರಘು ಕೂಡಾ ಮಹಾದಾನಿಯಾಗಿ ಹೆಸರು ಪಡೆದನು.

ಒಮ್ಮೆ ಅತಿಥಿಯಾಗಿ ಬಂದ ತಪಸ್ವಿಯೊಬ್ಬನ ಮನೋವಾಂಛೆಯನ್ನು ಅರಿತು, ರಘು ಮಹಾರಾಜನು ತನ್ನ ರಾಣಿಯನ್ನು ಆ ತಪಸ್ವಿಯ ಆಶ್ರಮಕ್ಕೆ ಕರೆದೊಯ್ದು ಬಿಟ್ಟು ಬಂದನು. ಆದರೆ ತಪಸ್ವಿ ತನ್ನ ತಪ್ಪನ್ನು ತಿಳಿದುಕೊಂಡು ಪಶ್ಚಾತ್ತಾಪಪಟ್ಟು, ಅವಳಿಗೆ ಸಗೌರವವಾಗಿ ನಮಸ್ಕಾರಮಾಡಿ ರಾಜಭವನಕ್ಕೆ ಕಳುಹಿಸಿದನು.

ದಾನವಾಗಿ ಕೊಟ್ಟವಳನ್ನು ಮತ್ತೆ ಪರಿಗ್ರಹಿಸಿಕೊಳ್ಳಲು ರಘುರಾಜನು ಸಮ್ಮತಿಸಲಿಲ್ಲ. ರಾಣಿ ತನ್ನ ಕುತ್ತಿಗೆ ಕಡಿದು ಕೊಲ್ಲುವಂತೆ ಗಂಡನನ್ನು ಬೇಡಿಕೊಂಡಳು.

ಹೆಂಡತಿಯನ್ನು ಕಡಿಯಲು ರಘು ಮಹಾರಾಜನು ಎತ್ತಿದ ಕತ್ತಿ, ಅವಳ ಕೊರಳಿನ ಮೇಲೆ ಹೂವಿನ ರಾಶಿಯಾಗಿ ಬಿದ್ದಿತು. ಆ ರಾಜ ದಂಪತಿಗಳ ಮೇಲೆ ದೇವತೆಗಳು ಹೂವಿನ ಮಳೆ ಸುರಿಸಿದರು.

ರಘು ಮಹಾರಾಜನು ತನ್ನದೆಂದು ಏನನ್ನೂ ಉಳಿಸಿಕೊಳ್ಳದೆ ಇರುವ ಸಂಪದಗಳನ್ನೆಲ್ಲಾ ದಾನವಾಗಿ ಕೊಟ್ಟು ಮುಗಿಸಿದನು, ಅಷ್ಟಕ್ಕೆ ತೃಪ್ತನಾಗದೆ ಇನ್ನಷ್ಟು ಧನವನ್ನು ತರಲು ಕುಬೇರನ ಬಳಿಗೆ ಹೋದನು.

ರಘು ಅಲಕಾನಗರಿಯನ್ನು ತಲಪದಂತೆ ತಡೆಯಲು ದಾರಿಯಲ್ಲಿ ಯಕ್ಷರು ತಮ್ಮ ಮಾಯೆಗಳನ್ನೆಲ್ಲಾ ಅವನ ಮೇಲೆ ಪ್ರಯೋಗಿಸಿ ವಿಫಲರಾದರು. ಕುಬೇರನು ರಘು ಮಹಾರಾಜನನ್ನು ಸಾದರಪೂರ್ವಕವಾಗಿ ಗೌರವಿಸಿ, ಅಪಾರ ಸಂಪತ್ತುಗಳನ್ನು ಅವನಿಗೆ ಕೊಟ್ಟು ಕಳುಹಿಸಿದನು. ಕೇಳುವವರಿಗೆ ಇಲ್ಲವೆನ್ನದೆ ರಘು ಮಹಾರಾಜನು ಕಡೆತನಕವೂ ದಾನಮಾಡಿಕೊಂಡೇ ಇದ್ದನು.



ಶ್ರೀಮತಿಯ ಸ್ವಯಂವರದ ಸಮಾಚಾರ ಕೇಳಿ ಅನೇಕ ದೇಶಗಳ ರಾಜರೂ, ಮೂರು ಲೋಕಗಳ ಪ್ರಮುಖರೂ ಬಂದರು. ವಿಷ್ಣುವಿನ ವೇಷದಲ್ಲಿ ನಾರದನೂ ಬಂದು ಸ್ವಯಂವರ ಮಂಟಪವನ್ನು ಪ್ರವೇಶಿಸಿದನು.

ಅವನನ್ನು ನೋಡಿದ ಕೂಡಲೇ ಅಲ್ಲಿದ್ದವರೆಲ್ಲಾ ಘೊಳ್ಳನೆ ನಕ್ಕರು. ತನ್ನ ಮುಖವು ಕೋತಿಯದಾಗಿದೆ ಎಂಬುದನ್ನು ಆಗ ತಾನೇ ತಿಳಿದುಕೊಂಡು ನಾರದನು ಅವಮಾನದಿಂದ ಕುಂದಿಹೋದನು. ಅಷ್ಟೇ ಅಲ್ಲದೆ ವಿಷ್ಣುವಿನ ಮೇಲೆ ಬಹಳ ಕೋಪ ಬಂದಿತು ಅವನಿಗೆ.

ಶ್ರೀಮತಿ ವಿಷ್ಣುವನ್ನು ಧ್ಯಾನಿಸಿದಳು. ವಿಷ್ಣು ಅವಳ ಮುಂದೆ ಸಾಕ್ಷಾತ್ಕಾರವಾಗಿ ನಿಂತನು. ಶ್ರೀಮತಿ ವಿಷ್ಣುವಿನ ಕೊರಳಿಗೆ ಮಾಲೆ ಹಾಕಿ ವರಿಸಿದಳು. ವಿಷ್ಣುವೂ ಅವಳ ಕೊರಳಿಗೆ ಮಾಲೆ ಹಾಕಿದನು. ಸ್ವಯಂವರದ ಕಾರ್ಯಗಳೆಲ್ಲ ಮುಗಿದ ಮೇಲೆ ವಿಷ್ಣು ಶ್ರೀಮತಿಯನ್ನು ಕರೆದುಕೊಂಡು ವೈಕುಂಠಕ್ಕೆ ಹೋದನು. ಪ್ರತಿಮೆಗಳ ಹಾಗೆ ನೋಡುತ್ತಾ ನಿಂತ ನಾರದಪರ್ವತರಿಗೆ ಪೂರ್ತಿ ನಿರಾಶೆಯಾಯಿತು.

ನಾರದನು ವಿಷ್ಣುವಿನ ಮೇಲೆ ಮತ್ತಿಷ್ಟು ಕೋಪದಿಂದ, ಪರ್ವತನನ್ನು ತನ್ನೊಂದಿಗೆ ಸರಿಪಡಿಸಿಕೊಂಡು ಅಂಬರೀಷನ ಮೇಲೆ ಕೋಪವನ್ನು ಕಾರಿದನು. ಶ್ರೀಮತಿಯನ್ನು ತಮಗಿಬ್ಬರಲ್ಲಿ ಒಬ್ಬರಿಗೆ ಕೊಡುವುದನ್ನು ಬಿಟ್ಟು, ವಿಷ್ಣುವಿಗೆ ಕೊಟ್ಟುದರಿಂದ ಅಂಬರೀಷನನ್ನು ನಾಶಮಾಡುವೆವೆಂದು ಇಬ್ಬರೂ ಶಪಿಸಲು ಸಿದ್ಧರಾದರು.

ಆಗ ವಿಷ್ಣುಚಕ್ರವು ಅವರಿಗೆ ಅಡ್ಡ ಬಂದು, ಕಡೆಗೆ ಅವರಿಬ್ಬರನ್ನೂ ಬಿಡದೆ ಓಡಿಸಿಕೊಂಡು ಹೋಗ ತೊಡಗಿತು.

ಪರ್ವತ, ನಾರದರಿಬ್ಬರೂ ವೈಕುಂಠಕ್ಕೇ ಓಡಿದರು. ಅಲ್ಲಿ ಶ್ರೀಮತಿಯೊಂದಿಗಿರುವ ವಿಷ್ಣುವನ್ನು ನೋಡಿ, ನಾರದನು ಇನ್ನಿಷ್ಟು ಕೋಪದಿಂದ, "ನೀನು ಕೂಡಾ ನಿನ್ನ ಶ್ರೀಮತಿಯನ್ನು ಅಂದರೆ ನಿನ್ನ ಪತ್ನೀರತ್ನವನ್ನು ಆಗಲಿ ವಿಲಪಿಸುವಂತಾಗಲಿ. ನನ್ನನ್ನು ಕೋತಿಯ



೧೦. ದುರ್ವಾಸ ಗರ್ವಭಂಗ





ಮುಖದವನಾಗಿ ಮಾಡಿದೆಯಷ್ಟೆ? ನಿನಗೂ ಕೋತಿಗಳ ಸಹಾಯವೇ ಬೇಕಾಗಿ ಬರಲಿ!" ಎಂದು ವಿಷ್ಣುವನ್ನು ಶಪಿಸಿದನು.

ನಾರದನ ಶಾಪವನ್ನು ಕೇಳಿ ವಿಷ್ಣು ಮಂದಹಾಸ ಬೀರಿದನು, ಶ್ರೀಮತಿ ಲಕ್ಷ್ಮೀದೇವಿಯಾಗಿ ನಿಜರೂಪದಲ್ಲಿ ಕಾಣಿಸಿದಳು. ಅದನ್ನು ನೋಡಿ ನಾರದ ಪರ್ವತರು ಬಹಳವಾಗಿ ನಾಚಿಕೊಂಡು ಲಕ್ಷ್ಮೀನಾರಾಯಣರ ಮುಂದೆ ಅಡ್ಡ ಬಿದ್ದು, ತಾವು ಶಪಿಸಿದುದಕ್ಕಾಗಿ ಪಶ್ಚಾತ್ತಾಪಪಟ್ಟರು.

ನಾರದನು ವಿಷ್ಣುವಿನ ಪಾದವನ್ನು ಕಣ್ಣೀರಿನಿಂದ ತೊಳೆಯುತ್ತ ವಿಷ್ಣುವನ್ನು ಶಪಿಸಿದುದಕ್ಕಾಗಿ ಅಳಲಿಕ್ಕೇ ತೊಡಗಿದನು. ವಿಷ್ಣು ಅವನ ತಲೆಯನ್ನು ತಡವುತ್ತ, "ನಾರದಾ, ತ್ರಿಕಾಲಜ್ಞಾನಿಯಾದ ನೀನು ನಡೆದುದನ್ನು ನೆನೆದು ದುಃಖಿಸುವುದೆಂದರೇನಿದು? ನಿನ್ನ ಬಾಯಿಯಿಂದ ಅಮೋಘವಾದ ವಾಕ್ಯಗಳೇ ಹೊರಟಿವೆ. ಅದು ನನ್ನ ಸಂಕಲ್ಪಕ್ಕೆ ತಕ್ಕ ಹಾಗೆಯೇ ಆಗಿದೆ. ನನ್ನ ರಾಮಾವತಾರದಲ್ಲಿ ಹಾಗೆಯೇ ಆಗಬೇಕು. ಅದು ಲೋಕಕಲ್ಯಾಣಕ್ಕಾಗಿಯೇ" ಎಂದು ಹೇಳಿದನು.

ಆಗಿನಿಂದಲೂ ಅಂಬರೀಷನಿಗೆ ಯಾರಿಂದಲೂ ಎಂತಹ ಕೇಡೂ ಬಾರದಂತೆ, ವಿಷ್ಣುಚಕ್ರವು ನಿರಂತರ ಅವನ ರಕ್ಷಣೆ ಮಾಡಿಕೊಂಡಿರುವಂತೆ ವಿಷ್ಣುವಿನ ಅನುಗ್ರಹವಾಗಿತ್ತು.

ಹಾಗಿರುವಾಗ ಒಮ್ಮೆ ಅಂಬರೀಷನಿಗೆ ದುರ್ವಾಸಮುನಿಯಿಂದ ಸಂಧಿಗ್ಧತೆಯುಂಟಾಯಿತು. ದುರ್ವಾಸನಿಗೆ ತಪೋಬಲದ ಗರ್ವವು ತುಂಬ ಹೆಚ್ಚು, ಗರ್ವದೊಂದಿಗೆ ತಾಮಸಗುಣವೂ ಇದ್ದೇ ಇರುತ್ತದೆ. ಒಂದು ದಿನ ಅವನು ತನ್ನ ಆಶ್ರಮದಿಂದ ಹೊರಡಲಿರುವಾಗ, ನಾರದನು ಆನಂದಪಾರವಶ್ಯತೆಯಲ್ಲಿ ಕಣ್ಣು ಮುಚ್ಚಿಕೊಂಡು ವಿಷ್ಣು ಸಂಕೀರ್ತನೆಯನ್ನು ಹಾಡುತ್ತ ಮಂದವಾದ ನೃತ್ಯದ ನಡಿಗೆಯಲ್ಲಿ ದುರ್ವಾಸನ ಇದಿರಿಗೆ ಬಂದನು.

"ಓಹೋ! ನಾರದಾ! ಕಲಹಭೋಜನದಿಂದ ಹೊಟ್ಟೆ ತುಂಬಿ ಹೋದ ಹಾಗಿದೆ! ಬಹಳ ಆನಂದಪಾರವಶ್ಯತೆಯಲ್ಲಿ ತೇಲುತ್ತಿರುವೆಯೇಕೋ?" ಎಂದನು ದುರ್ವಾಸ.

ನಾರದನು ಕಣ್ಣು ತೆರೆದು ಬಗ್ಗಿ ಬಗ್ಗಿ ನಮಸ್ಕಾರ ಮಾಡುತ್ತ, "ದುರ್ವಾಸ ಮಹರ್ಷಿಗಳಿಗೆ ನಮಸ್ಕಾರ. ಕಲಹಭೋಜನವೇನೂ ಸಿಕ್ಕದೆ ಉಪವಾಸದಲ್ಲಿದ್ದೇನೆ ಬಿಡಿ. ವಿಷ್ಣುಭಕ್ತಿ ತತ್ಪರನಾದವನಿಗೆ ಅಂತಹ ಮಹಾ ವಿಷ್ಣು ಭಕ್ತರನ್ನು ನೋಡಿದಾಗ ಪರಮಾನಂದ ಉಕ್ಕುತ್ತಾ ಇರುತ್ತದೆ. ಅಂಬರೀಷನನ್ನು ನೋಡಿ ಹೀಗೆ ಬರುತ್ತಿದ್ದೇನೆ. ಅಹಾ! ಏನು ವಿಷ್ಣುಭಕ್ತಿ ಅವನದು! ಭಕ್ತಿಯಲ್ಲಿ ಅವನನ್ನು ಮೀರಿಸಿದವರನ್ನು ನಾ ಕಾಣೆ!" ಎಂದು ಮತ್ತೊಂದುಸಾರಿ ಬಾಗಿ ಪ್ರಣಾಮ ಮಾಡಿದನು.

"ಅಷ್ಟು ದೊಡ್ಡ ವಿಷ್ಣುಭಕ್ತನೇ ಅಂಬರೀಷ?" ಎಂದನು ದುರ್ವಾಸ.





" ಸಂದೇಹವೇನಿದೆ? ಅವನು ವಿಷ್ಣುವಿನ ಅನುಗ್ರಹ ಪಡೆದ ರಾಜರ್ಷಿಸತ್ತಮನು. ದ್ವಾದಶೀ ವ್ರತವೇ ಅವನ ಪ್ರಾಣ" ಎಂದನು ನಾರದ.

"ಏನಾಯಿತು ನಿನಗೆ ? ಸಾಮಾನ್ಯ ರಾಜನನ್ನು ಅಳತೆ ಮೀರಿ ಹೊಗಳುತ್ತಿರುವೆ ?" ಎಂದನು ದುರ್ವಾಸ.

"ಅವನನ್ನು ನೋಡಿದರೆ ನಿಮಗೆ ತಿಳಿಯುತ್ತದೆ, ಹೊಗಳಿಕೆ ಅಲ್ಲವೆಂದು. ನಿಮ್ಮಂತಹ ಮಹರ್ಷಿಗಳು ಅವನ ಸದನವನ್ನು ಪಾವನಮಾಡುವುದರಿಂದ ಅವನ ಜನ್ಮ ಧನ್ಯವಾಗುತ್ತದೆ. ಚರಿತಾರ್ಥನಾಗಿ ಇನ್ನಷ್ಟು ಸ್ತುತ್ಯನಾಗುತ್ತಾನೆ. ಆಮೇಲೆ ನೀವೇ ಅವನನ್ನು ನನಗಿಂತ ಹೆಚ್ಚೇ ಹೊಗಳುವಿರಿ !" ಎಂದು ಹೇಳಿ ನಾರದನು ನಾರಾಯಣ ನಾಮಸ್ಮರಣೆ ಮಾಡುತ್ತಾ ತನ್ನ ದಾರಿ ಹಿಡಿದು ಸಾಗಿಹೋದನು.



ನಾರದನ ಮಾತುಗಳು ದುರ್ವಾಸನನ್ನು ಕೆರಳಿಸಿ ಬಿಟ್ಟಿತು. ಆ ದಿನ ದ್ವಾದಶಿಯಾದುದರಿಂದ, ಹಾಗಾದರೆ ಅವನ ಸತ್ವ ನೋಡಿ ಬಿಡೋಣವೆಂದು ಅಂಬರೀಷನ ಬಳಿಗೇ ಹೊರಟನು.

ಮುಂಚಿನ ದಿನ ಏಕಾದಶೀ ವ್ರತವನ್ನು ಉಪವಾಸ ದಲ್ಲಿ ಮುಗಿಸಿ, ದ್ವಾದಶಿಯ ದಿನ ಪಾರಣೆ ಮಾಡಿ ವ್ರತಸಮಾಪ್ತಿ ಮಾಡಲು ಅಂಬರೀಷನು ಸಿದ್ಧ ನಾಗುತ್ತಿದ್ದನು. ಆ ಸಮಯಕ್ಕೆ ಸರಿಯಾಗಿ ಅತಿಥಿ ಯಾಗಿ ಬಂದ ದುರ್ವಾಸನನ್ನು ನೋಡಿ ಅಂಬರೀಷನು, ಪರಮಾನಂದಭರಿತನಾಗಿ ಆದರದಿಂದ ಸ್ವಾಗತ ಹೇಳಿ, ಅರ್ಘ್ಯಪಾದ್ಯಾದಿಗಳಿಂದ ಪೂಜಿಸಿ ಭೋಜನಕ್ಕೆ ಆಹ್ವಾನಿಸಿದನು.

ದುರ್ವಾಸನು ನದಿಯಲ್ಲಿ ಸ್ನಾನಮಾಡಿ ಬರುವೆ ನೆಂದು ಹೇಳಿ ಹೋದನು. ಹೋದವನು ಬಹಳ ಹೊತ್ತಾದರೂ ತಿರುಗಿ ಬರಲಿಲ್ಲ, ದ್ವಾದಶಿಯ ಘಳಿಗೆಗಳು ಮೀರಿ ಹೋಗುವುದರೊಳಗೆ ಪಾರಣೆಯೂ ಅದನ್ನನುಸರಿಸಿ ಭೋಜನವೂ ಮುಗಿಯಬೇಕಿತ್ತು. ತಪ್ಪಿದರೆ ವ್ರತಭಂಗದ ದೋಷ. ಹಾಗೆಂದು ಅತಿಥಿಯನ್ನು ಬಿಟ್ಟು ಭೋಜನ ಮಾಡಿದರೂ ಮಹಾಪಚಾರವೇ ! ಅಂಬರೀಷನು ಧರ್ಮಸಂಕಟದಲ್ಲಿ ಸಿಕ್ಕಿಬಿದ್ದನು.

ಆಗ ಧರ್ಮಸೂಕ್ಷ್ಮಗಳನ್ನು ಅರಿತ ಹಿರಿಯರು ಅಂಬರೀಷನೊಂದಿಗೆ, "ಆ ಘಳಿಗೆ ಮೀರುವುದರೊಳಗೆ ಸ್ವಲ್ಪ ತೀರ್ಥವನ್ನು ಸೇವಿಸಿ ಬಿಟ್ಟರೆ ಪಾರಣೆಯಾ ದಂತಾಗಿ ವ್ರತಭಂಗವಾಗದು. ಅತಿಥಿಯನ್ನು ಬಿಟ್ಟು ಭೋಜನ ಮಾಡಿದಂತೆಯೂ ಆಗದು. ಆಮೇಲೆ ಅತಿಥಿಯೊಂದಿಗೆ ಸಾವಕಾಶವಾಗಿ ಭೋಜನ ಮಾಡ ಬಹುದು" ಎಂದರು.

ಹಾಗೆಯೇ ಅಂಬರೀಷನು ತೀರ್ಥಪಾರಣೆ ಮಾಡಿದನು.

ದ್ವಾದಶಿ ಹೋಗಿ ತ್ರಯೋದಶಿ ಕಾಲಿಟ್ಟ ಘಳಿಗೆಯಲ್ಲಿ, ದುರ್ವಾಸನು ಅವಸರವಸರವಾಗಿ ಬಂದು, ಪಾರಣೆಯಾದುದನ್ನು ತಿಳಿದು, ಕೋಪ







ದಿಂದ ಹಲ್ಲು ಕಡಿಯುತ್ತ, ಜಟಾಜೂಟವನ್ನು ಬಿಚ್ಚಿ ಕೊಡರಿಕೊಳ್ಳುತ್ತ ಕೋಪಮೂರ್ತಿಯಂತೆ ಅಂಬರೀಷನನ್ನು ದುರುದುರು ಕಣ್ಣು ತಿರುಗಿಸಿ ನೋಡುತ್ತ ನಿಂತನು.

"ಅಂಬರೀಷಾ! ಓ ರಾಜಾಧಮಾ! ದೊಡ್ಡ ವಿಷ್ಣುಭಕ್ತನೆಂಬ ಗರ್ವದಲ್ಲಿ ಅತಿಥಿಧರ್ಮಕ್ಕೆ ಅಪಚಾರ ಮಾಡುವಿಯಾ? ನನಗೆ ಅವಮಾನ ಮಾಡಬೇಕಾದರೆ ನಿನಗೆಷ್ಟು ಧೈರ್ಯ! ನಾನು ಯಾರೆಂದು ಗೊತ್ತಿಲ್ಲವೇನು? ನನ್ನ ಹೆಸರು ಕೇಳಿದರೆ ಮೂರು ಲೋಕಗಳೂ, ಮುಮ್ಮೂರ್ತಿಗಳೂ ಹೆದರಲೇಬೇಕು. ನನ್ನ ಶಾಪಕ್ಕೆ ಇದಿರೇ ಇಲ್ಲ! ನೀನು ದುರ್ಮರಣದ ಪಾಲಾಗುವಿ!" ಎಂದು ಹುಂಕರಿಸುವ ದುರ್ವಾಸನ ಪಾದಗಳ ಮೇಲೆ, ಅಂಬರೀಷನು ತಲೆವಾಗಿಸಿ,

"ಋಷೀಶ್ವರಾ, ದ್ವಾದಶೀ ವ್ರತ ಹಿಡಿದ ನಾನು ವ್ರತಭಂಗವಾಗದಿರಲಿಕ್ಕಾಗಿ ತೀರ್ಥಪಾರಣೆ ಮಾತ್ರವೇ ಮಾಡಿದ್ದೇನೆ. ಶಾಂತರಾಗಿ ಯೋಚಿಸಿ ಕ್ಷಮಿಸಬೇಕೆಂದು ಬೇಡಿಕೊಳ್ಳುತ್ತಿದ್ದೇನೆ" ಎಂದನು.

ದುರ್ವಾಸನ ಕೋಪದಲ್ಲಿ ಮನ್ನಿಸುವುದೆಂಬ ಮಾತೇ ಇಲ್ಲ. "ನನ್ನ ತಪಶ್ಶಕ್ತಿ, ನಿನ್ನ ಭಕ್ತಿಗಳಲ್ಲಿ ಯಾವುದು ದೊಡ್ಡದೋ ಸ್ವಯಂ ನೋಡುವಿಯಂತೆ!" ಎಂದು ಹೇಳಿ ಜಟಾಜೂಟವನ್ನು ಸಿಂಹದ ಜೂಲಿನಂತೆ ಆಡಿಸಿದನು.

ದುರ್ವಾಸನ ತಪೋ ಮಹಿಮೆಗಳೆಲ್ಲಾ ಅವನ ಜಡೆಗಳಲ್ಲಿ ಅನೇಕ ಶಕ್ತಿಗಳಾಗಿ ನಿಕ್ಷಿಪ್ತವಾಗಿದ್ದಿತು. ಉದ್ದವಾದೊಂದು ಜಡೆಯನ್ನು ಕಿತ್ತು ಹಿಡಿದುಕೊಂಡು, ಮತ್ತೊಂದು ಕೈಯಲ್ಲಿ ಯೋಗದಂಡವನ್ನು ಎತ್ತಿ ಆಡಿಸುತ್ತ ಜಡೆಯನ್ನು ಕಣ್ಣುಗಳನ್ನು ಕೆಕ್ಕರಿಸಿಕೊಂಡು ಝಳಪಿಸಿದನು.

ಜಡೆಯಿಂದ ಬೆಂಕಿಯ ಕಿಡಿಗಳು ಚಿಮ್ಮುತ್ತ ಕಪ್ಪಗಿನ ಹೊಗೆ ಆಕಾಶಕ್ಕೆದ್ದು ಹರಡ ತೊಡಗಿತು. ಆ ಹೊಗೆಯಿಂದ ಭಯಂಕರಾಕಾರದಲ್ಲಿ ಪರ್ವತದಷ್ಟು ದೊಡ್ಡ ಕೃತ್ಯ ಎಂಬ ಮಹಾಭೂತವು ಆವಿರ್ಭವಿಸಿತು.

ಕೃತ್ಯಭೂತವು ಪ್ರಳಯಭೀಕರವಾಗಿ ದಿಕ್ಕುಗಳು ನಡುಗುವಂತೆ ಗರ್ಜಿಸುತ್ತ, ಅಂಬರೀಷನನ್ನು ಕೊಲ್ಲಲು ಧುಮುಕುವ ಮರುಕ್ಷಣದಲ್ಲಿ, ಅವನಿಗೆ ರಕ್ಷಣೆಯಾಗಿ ವಿಷ್ಣು ಅನುಗ್ರಹಿಸಿದ ಚಕ್ರವು ಜ್ವಾಲೆಗಳನ್ನು ಕಾರುತ್ತ, ರಿವ್ವನೆ ಬಂದು ಕೃತ್ಯಭೂತದ ತಲೆಯನ್ನು ತಾಗಿತು. ಕೃತ್ಯಭೂತವು ಚೂರು ಚೂರಾಗಿ ಆ ಚೂರುಗಳೆಲ್ಲ ಎತ್ತೋ ಹಾರಿ ಮಾಯವಾದುವು. ಅದನ್ನು ನೋಡಿ ದುರ್ವಾಸನ ಸರ್ವಾಂಗವೂ ಬೆವರಿ ನೀರಾಗುತ್ತ, ಗಡಗಡನೆ ನಡುಗತೊಡಗಿದನು.

ಕೃತ್ಯವನ್ನು ನಾಶಮಾಡಿದ ವಿಷ್ಣುಚಕ್ರವು ಅಲ್ಲಿಗೆ ನಿಲ್ಲದೆ ದುರ್ವಾಸನ ಮೇಲೆ ಹೋಯಿತು.

ದುರ್ವಾಸನು ಮತ್ತೊಂದು ಜಡೆಯನ್ನು ಕಿತ್ತು ಬಿಸುಟನು. ಅದರಿಂದ ಹೊರಟು ಅಡ್ಡನಿಂತ ಪರ್ವತ



ಪಾಷಾಣವನ್ನು ಚಕ್ರವು ಪುಡಿಪುಡಿ ಮಾಡಿ ಮತ್ತೆ ದುರ್ವಾಸನ ಕಡೆಗೆ ಬರತೊಡಗಿತು.

ದುರ್ವಾಸ ಋಷಿ ಇನ್ನೊಂದು ಜಡೆಯನ್ನು ಬಿಸುಟನು. ಆದರಿಂದ ಆಕಾಶವೆಲ್ಲ ಮಂಜಿನ ಮೇಘವು ಮುಸುಕಿತು. ಮರುಕ್ಷಣದಲ್ಲಿ ಚಕ್ರದಿಂದ ಹೊರಟ ಜ್ವಾಲೆಯಿಂದ ಅದೆಲ್ಲಾ ಆವಿಯಾಗಿ ಓಡಿಹೋಗಿ ವಾತಾವರಣ ನಿಚ್ಚಳವಾಯಿತು.

ದುರ್ವಾಸನು ಓಡಲು ತೊಡಗಿದನು. ಅವನ ಜಟಾಜೂಟವೆಲ್ಲಾ ಚಕ್ರಜ್ವಾಲೆ ತಗಲಿ ಮಸಿಮಸಿಯಾಗಿ ಹೋಯಿತು. ಈ ವಿಧವಾಗಿ ಅವನ ತಪಶ್ಶಕ್ತಿ ಪೂರ್ತಿ ಹಾರಿಹೋಯಿತು. ತಲೆ ಬೋಳಾಯಿತು. ಕಾಲುಗಳಿಗೆ ಓಡುವುದೇ ಕೆಲಸವಾಯಿತು.

ಮರವೆನ್ನದೆ ಮಡುವೆನ್ನದೆ ಕಾಡುಮೇಡು ನದಿ ಪರ್ವತಗಳನ್ನೆಲ್ಲ ದಾಟುತ್ತ ದುರ್ವಾಸನು ಓಡುತ್ತಿದ್ದಾನೆ. ಚಕ್ರವು ಓಡಿಸುತ್ತಾ ಹೋಗುತ್ತಿದೆ. ಆ ಮುನಿಯನ್ನು ಮೂರು ಲೋಕಗಳಲ್ಲಿಯೂ ತಿರುಗಿಸಿತು ಆ ಚಕ್ರ. ದುರ್ವಾಸನು ಬ್ರಹ್ಮಲೋಕಕ್ಕೆ ಓಡುತ್ತಿರಲು, ನಾರದನು ಮುಗುಳು ನಗುತ್ತ ಅವನ ಮುಂದೆ ಬಂದು, "ಯಾರು ದುರ್ವಾಸರೇನಾ ? ಏನಿದು ಓಟ ?" ಎಂದು ಕೇಳಲು, ದುರ್ವಾಸನು ಏನೂ ಹೇಳದೆ, ಹಿಂದೆ ಬರುತ್ತಿರುವ ಚಕ್ರವನ್ನು ತೋರಿಸಿ, ಓಡಿಯೋಡಿ ಹೋಗಿ ಬ್ರಹ್ಮನ ಮುಂದೆ ಬಿದ್ದನು,

"ಇಲ್ಲಿಗೇಕೆ ಬಂದೆ ? ನಾನು ವಿಷ್ಣುವಿನ ನಾಭಿ ಕಮಲದಿಂದ ಹುಟ್ಟಿದವನು. ನಾನೇನು ಮಾಡಲೂ ಸಾಧ್ಯವಿಲ್ಲ. ನಾನು ಚಕ್ರವನ್ನು ತಡೆಯಬಲ್ಲೆನೆಂದು ನೀನು ಹೇಗೆ ಅಂದುಕೊಂಡೆಯೋ ದುರ್ವಾಸಾ"? ಎಂದನು ಬ್ರಹ್ಮ.

"ಆದಿಸೃಷ್ಟಿಕರ್ತನೆಂದು ಬಂದರೆ ಇಷ್ಟೇನಾ ನಿನ್ನ ಪಸೆ ? ನನ್ನನ್ನು ರಕ್ಷಿಸಬಲ್ಲವನು ಆ ಮಹೇಶ್ವರನಿದ್ದಾನೆ ನೋಡುತ್ತೇನೆ. ರುದ್ರನ ಶಕ್ತಿ ಬಹು ದೊಡ್ಡದು." ಎಂದನು ದುರ್ವಾಸ.

"ಹೌದು ಹೌದು. ದುರ್ವಾಸಾ ! ಆ ಮಾತು ನಿಜವೇ. ಫಾಲಾಕ್ಷನ ಬಳಿಗೇ ಹೋಗು. ಎಷ್ಟು ಬೇಗ ಕೈಲಾಸಕ್ಕೆ ಹೋಗುವಿಯೋ ಅಷ್ಟು ಒಳ್ಳೇದು" ಎಂದನು ಬ್ರಹ್ಮ.

ದುರ್ವಾಸನು ಕೈಲಾಸಕ್ಕೆ ಹೋಗಿ ಶಿವನ ಮುಂದೆ ಬಾಗಿ ರಕ್ಷಿಸುವಂತೆ ಮೊರೆ ಇಟ್ಟನು.

"ಅದು ವಿಷ್ಣುವಿನ ಚಕ್ರ. ನಾನಾಗಿ ವಿರೋಧ ತಂದುಕೊಳ್ಳಲು ಹೇಳುವಿಯಾ ? ನನಗೂ ವಿಷ್ಣುವಿಗೂ ತಂಟೆ ತರಲು ಇಲ್ಲಿಗೆ ಬಂದೆಯಾ ? ಮೊದಲು ಇಲ್ಲಿಂದ ಹೋಗಿ ಬಿಡು. ನಿನ್ನ ದುರಹಂಕಾರಕ್ಕೆ ತಕ್ಕ ಫಲ ಅನುಭವಿಸದೆ ತಪ್ಪುವುದೆಂದುಕೊಂಡೆಯಾ ? ಹೋಗಿಬಿಡು ಇಲ್ಲಿಂದ" ಎಂದನು ಶಿವ.

ಕಡೆಗೆ ನಿರುಪಾಯನಾದ ದುರ್ವಾಸನು ವೈಕುಂಠಕ್ಕೆ ಹೋಗಿ ವಿಷ್ಣುವಿನ ಮುಂದೆ ಸಾಷ್ಟಾಂಗ ಬಿದ್ದು



ದೀನಾತಿದೀನನಾಗಿ, ತನ್ನ ಬೆಂಬಿಡದ ಚಕ್ರವನ್ನು ನಿವಾರಿಸಿ ತನ್ನನ್ನು ರಕ್ಷಿಸಬೇಕೆಂದು ಬೇಡಿಕೊಂಡನು.

"ಅಂಬರೀಷನಿಗೆ ರಕ್ಷೆಯಾಗಿ ಎಂದೋ ಈ ಚಕ್ರವನ್ನು ಕೊಟ್ಟಿದ್ದೇನೆ. ಆದುದರಿಂದ ಈಗ ನಾನೇನು ಮಾಡಲೂ ಸಾಧ್ಯವಿಲ್ಲ, ಚಕ್ರವನ್ನು ನಿವಾರಿಸುವಂತೆ ಅಂಬರೀಷನನ್ನೇ ಕೇಳಿಕೋ. ಅದರ ಅಧಿಕಾರ ಅವನಿಗೇ." ಎಂದನು ವಿಷ್ಣು.

ದುರ್ವಾಸನು ಹತಾಶನಾಗಿ ಎದ್ದನು. ಅವನ ಅಹಂಕಾರವು ನಶಿಸಿತು. ಅವನ ತಲೆ ಅಲ್ಲಲ್ಲಿ ಬೋಳು ಬೋಳಾಗಿತ್ತು. ತಪಶ್ಶಕ್ತಿ ಪೂರ್ತಿ ಹೋಗಿತ್ತು. ಭಕ್ತಿಯ ಮುಂದೆ ತಪಶ್ಶಕ್ತಿ ಯಾವ ಮೂಲೆಗೂ ಸಾಲದೆಂದು ತಿಳಿಯಿತು. ನಿರುಪಾಯನಾಗಿ ದುರ್ವಾಸನು ಅಂಬರೀಷನ ಹತ್ತಿರಕ್ಕೇ ನಿಜವಾದ ಸಾಧುವಾಗಿ ಹೊರಟನು. ಚಕ್ರವು ಶಾಂತವಾಗಿ ಅವನನ್ನು ಅನುಸರಿಸಿಕೊಂಡಿತ್ತು, ದುರ್ವಾಸನು ಅಂಬರೀಷನ ಪಾದಗಳಿಗೆ ಬೀಳಲು ಹೋಗುವಾಗ ಅಂಬರೀಷನು ಹಿಡಿದು ನಿಲ್ಲಿಸಿ, ಚಕ್ರವನ್ನು ವಿರಮಿಸುವಂತೆ ಕೇಳಿಕೊಂಡನು. ಚಕ್ರವು ಹಿಂದಿರುಗಿ ಮಾಯವಾಯಿತು. ಹೀಗೆ ಅಗ್ರಗಣ್ಯರಾದ ವಿಷ್ಣುಭಕ್ತರಲ್ಲಿ ಅಂಬರೀಷನು ಹೆಸರುವಾಸಿಯಾದವನು.

ಸೂರ್ಯವಂಶದ ರಾಜರಲ್ಲಿ ಗಾಧಿ ಎಂಬವನು ಪ್ರಮುಖನಾದವನು. ಗಾಧಿಯ ಕುಮಾರನು ವಿಶ್ವಾಮಿತ್ರ. ಇವನು ಕೃತಾಶ್ವನ ಹತ್ತಿರ ಧನುರ್ವಿದ್ಯೆಗಳನ್ನು ಕಲಿತನು. ಅನೇಕ ದಿವ್ಯಾಸ್ತ್ರಗಳನ್ನೂ ಹೊಂದಿದನು. ಅಸ್ತ್ರವೇತ್ತನೆಂದರೆ ವಿಶ್ವಾಮಿತ್ರನೇ ಎಂಬಂತೆ ಅವನ ಪಾಂಡಿತ್ಯವಿದ್ದಿತು.

ವಿಶ್ವಾಮಿತ್ರನು ರಾಜ್ಯಪಾಲನೆ ಮಾಡಲು ಪ್ರಾರಂಭಿಸಿದ ಮೇಲೆ, ಒಂದು ಸಾರಿ ಸಪರಿವಾರದೊಂದಿಗೆ ವಸಿಷ್ಠನ ಆಶ್ರಮಕ್ಕೆ ಹೋದನು. ವಸಿಷ್ಠ ಮಹರ್ಷಿ ತನ್ನ ಹೋಮಧೇನುವಿನ ಮಹಿಮೆಯಿಂದ ಅವರಿಗೆಲ್ಲಾ ಬಹು ದೊಡ್ಡ ಔತಣವನ್ನು ಮಾಡಿಸಿ ಸಂತೋಷಪಡಿಸಿದನು.

ಅದನ್ನು ನೋಡಿ ವಿಶ್ವಾಮಿತ್ರನು ಆ ಹೋಮಧೇನುವನ್ನು ರಾಜನಾದ ತನಗೆ ಕೊಟ್ಟು, ಅದಕ್ಕೆ ಪ್ರತಿಯಾಗಿ ತಾನು ಕೊಡುವ ಹತ್ತು ಲಕ್ಷ ಧೇನುಗಳನ್ನು ತೆಗೆದುಕೊಳ್ಳುವಂತೆ ವಸಿಷ್ಠನಿಗೆ ಹೇಳಿದನು. ಏನು ಕೊಟ್ಟರೂ ತನ್ನ ಹೋಮಧೇನುವನ್ನು ಮಾತ್ರ ಕೊಡಲು ಸಾಧ್ಯವಿಲ್ಲವೆಂದು ಖಂಡಿತವಾಗಿ ಹೇಳಿಬಿಟ್ಟನು ವಸಿಷ್ಠ.

ವಿಶ್ವಾಮಿತ್ರನು ತನ್ನ ಪರಿವಾರದಿಂದ ಬಲಾತ್ಕಾರವಾಗಿ ಹೋಮಧೇನುವನ್ನು ಕರೆದೊಯ್ಯಲು ನೋಡಿದನು. ವಸಿಷ್ಠನು ತನ್ನ ತಪೋಬಲದಿಂದ ಹೋಮಧೇನುವಿನಿಂದ ಅನೇಕ ಮಂದಿ ಶಬರ ಯೋಧರನ್ನು ಹುಟ್ಟಿಸಿದನು.

ಆ ಯೋಧರು ವಿಶ್ವಾಮಿತ್ರನ ಪರಿವಾರವನ್ನೆಲ್ಲಾ ಹೊಡೆದು ಬಡಿದು ಓಡಿಸಿ ಬಿಟ್ಟರು.





ರಾಜನ ಶಕ್ತಿಗಿಂತಲೂ ತಪೋಬಲವೇ ಹೆಚ್ಚಿನದೆಂದು ವಿಶ್ವಾಮಿತ್ರನಿಗೆ ಗೊತ್ತಾಯಿತು. ಕೂಡಲೇ ವಿಶ್ವಾಮಿತ್ರನು ರಾಜ್ಯವನ್ನು ವಿಸರ್ಜಿಸಿ, ಅರಣ್ಯಕ್ಕೆ ಹೋಗಿ ಅನೇಕ ವರ್ಷಗಳವರೆಗೆ ದೊಡ್ಡ ತಪಸ್ಸನ್ನು ಮಾಡಿದನು, ತಪಸ್ಸಿನ ಸಾಧನೆಗಳಿಂದ ತಾನು ವಸಿಷ್ಠನಿಗೆ ಸಮಾನನೆನಿಸಿಕೊಂಡನು. ಅಗಿನಿಂದ ವಿಶ್ವಾಮಿತ್ರನು ವಸಿಷ್ಠನಿಗೆ ಬಲವಾದ ಪ್ರತಿಸ್ಪರ್ಧಿಯಾದನು.

ರಾವಣನ ಅನುಚರರಾದ ರಾಕ್ಷಸರು ತಮ್ಮ ತಮ್ಮ ಬಲಗಳೊಂದಿಗೆ ಆರ್ಯಾವರ್ತದ ಮೇಲೆ ಆಗಾಗ ಮುಗಿಬೀಳುತ್ತ, ಋಷಿ ಮುನಿಗಳನ್ನು ಪೀಡಿಸುತ್ತಾ ಇದ್ದರು, ಆಶ್ರಮಗಳನ್ನು ಕಂಡಕಂಡಲ್ಲಿ ಸುಡುತ್ತಾ ಬಂದರು. ವಿಶ್ವಾಮಿತ್ರನು ದೊಡ್ಡದೊಂದು ಯಾಗ ಮಾಡಲು ಹವಣಿಸಿದನು. ಅದು ನಡೆಯದಂತೆ ಮಾರೀಚ, ಸುಬಾಹು ಎಂಬ ರಾಕ್ಷಸ ಪ್ರಮುಖರೂ, ತಾಟಕಿ ಎಂಬ ರಾಕ್ಷಸಿಯೂ ಧ್ವಂಸ ಮಾಡುತ್ತಿದ್ದರು. ವಿಶ್ವಾಮಿತ್ರನಿಗೆ ಯಾಗವನ್ನು ನೆರವೇರಿಸಲು ಸಾಧ್ಯವಾಗದೆ ಹೋಯಿತು.

ತನ್ನ ಯಾಗಭಂಗವನ್ನು ನೋಡಿ ವಿಶ್ವಾಮಿತ್ರನು ಚಿಂತಾಕ್ರಾಂತನಾಗಿ, ಹಿಮಾಲಯ ಪ್ರಾಂತಕ್ಕೆ ಹೋಗಿ ತನ್ನ ಸಿದ್ಧಾಶ್ರಮದಲ್ಲಿ ಧ್ಯಾನಮಗ್ನನಾಗಿ ಕುಳಿತುಕೊಂಡನು.

ಆ ಧ್ಯಾನ ಸಮಾಧಿಯಲ್ಲಿ ಅವನಿಗೆ, ವಿಷ್ಣು ಸೂರ್ಯವಂಶದ ರಘು ಸಂತತಿಯಲ್ಲಿ ಅವತಾರವೆತ್ತಿ ರಾಮನೆಂಬ ಹೆಸರಿನಲ್ಲಿ ಬೆಳೆಯುತ್ತಿರುವುದು ಕಂಡುಬಂತು. ವಿಶ್ವಾಮಿತ್ರನಿಗೆ ಉತ್ಸಾಹವೆದ್ದಿತು. ಲೋಕಕಲ್ಯಾಣಕ್ಕಾಗಿ ರಾಕ್ಷಸರನ್ನು ನಿರ್ಮೂಲಿಸುವವನಿಗೆ ವಸಿಷ್ಠನು ಕಲಿಸಿದ ಶಾಸ್ತ್ರ ವಿದ್ಯೆಗಳಾವುದೂ ಪ್ರಯೋಜನಕ್ಕೆ ಬಾರವು. ಅದಕ್ಕೆ ಮುಖ್ಯವಾಗಿ ಅಸ್ತ್ರಶಸ್ತ್ರಗಳು ತುಂಬಿದ ಧನುರ್ವಿದ್ಯಾಪಾಟವವೇ ಬೇಕು. ರಾಮನಿಗೆ ಅಸ್ತ್ರ ವಿದ್ಯೆಗಳನ್ನು ಉಪದೇಶಿಸುವ ಸಮರ್ಥನು ವಿಶ್ವಾಮಿತ್ರನೊಬ್ಬನೇ!

ಧ್ಯಾನದಲ್ಲಿರುವ ವಿಶ್ವಾಮಿತ್ರನಿಗೆ ಲಕ್ಷ್ಮೀದೇವಿ ಸೀತೆಯಾಗಿ, ಜನಕರಾಜನಿಗೆ ಮಗಳಾಗಿ ಮಿಥಿಲೆಯಲ್ಲಿ ಬೆಳೆಯುತ್ತಿರುವುದೂ ಕಾಣಿಸಿತು. ಸೀತಾ ರಾಮರ ಕಲ್ಯಾಣವೂ ತನ್ನಿಂದ ನಡೆಯಬೇಕಾದುದು ಅವಶ್ಯವೆಂತಲೂ ವಿಶ್ವಾಮಿತ್ರನಿಗೆ ತೋರಿತು.

ಆ ರಾಮನಿಂದಲೇ ನಿಂತು ಹೋದ ತನ್ನ ಯಾಗವೂ ಸುರಕ್ಷಿತವಾಗಿ ಪೂರ್ತಿಯಾಗಬೇಕಾಗಿದೆ. ತನಗೆ ತಿಳಿದಿರುವ ಅಸ್ತ್ರ ವಿದ್ಯೆಗಳೆಲ್ಲವನ್ನೂ ರಾಮನಿಗೆ ಉಪದೇಶ ಮಾಡಿ, ರಾಮನನ್ನು ಅಸ್ತ್ರ ವಿದ್ಯಾ ಕೋವಿದನನ್ನಾಗಿ ಮಾಡಬೇಕಾದ ಬಾಧ್ಯತೆ ತನ್ನದೆಂದು ನಿರ್ಧರಿಸಿ, ವಿಶ್ವಾಮಿತ್ರನು ಧ್ಯಾನ ಸಮಾಧಿಯಿಂದೆದ್ದು, ಅಯೋಧ್ಯೆಯ ದಾರಿ ಹಿಡಿದು ಹೊರಟನು.





**ಲ**ಕ್ಷ್ಮೀದೇವಿ ವೇದವತಿಯಾಗಿ ಅವತಾರವೆತ್ತಿ ವಿಷ್ಣುವನ್ನೇ ಧ್ಯಾನಿಸಿಕೊಂಡು ತಪಸ್ಸಿನಲ್ಲಿ ಮಗ್ನಳಾಗಿದ್ದಳು. ಅವಳ ಸೌಂದರ್ಯವನ್ನು ನೋಡಿ ರಾವಣನು ಅವಳ ತಲೆಗೂದಲಿಗೆ ಕೈಹಾಕಿ ಎಳೆದನು. ಅವಳು ರಾವಣನನ್ನು ಶಪಿಸಿ ಯೋಗಾಗ್ನಿಯಿಂದ ತನ್ನನ್ನು ತಾನು ದಹಿಸಿಕೊಂಡು ಹೋಗಿ ಲಂಕೆಯಲ್ಲಿಯೇ ಹುಟ್ಟಿದಳು.

ಲಂಕಾಪಟ್ಟಣವನ್ನು ಅನುಸರಿಸಿಕೊಂಡು ಅಂದವಾದ ದೊಡ್ಡದೊಂದು ಸರೋವರವಿದ್ದಿತು. ರಾವಣನು ಪ್ರತಿದಿನ ಪ್ರಾತಃಕಾಲದಲ್ಲಿ ಆ ಸರೋವರದಲ್ಲಿ ಸ್ನಾನ ಸಂಧ್ಯೆಗಳನ್ನು ತೀರಿಸಿ ಶಿವಾರ್ಚನೆ ಮಾಡುವನು. ಹಾಗೆ ಅವನು ಶಿವಾರ್ಚನೆಗಾಗಿ ತಾಮರೆ ಹೂಗಳನ್ನು ಕೀಳುತ್ತಿರುವಾಗ, ದೊಡ್ಡದೊಂದು ತಾಮರೆ ಪುಷ್ಪವು ಸರೋವರದ ಮಧ್ಯದಲ್ಲಿ ಧವಳ ಕಾಂತಿಯಿಂದ ಹೊಳೆಯುವುದನ್ನು ನೋಡಿದನು. ಅವನು ಅದರ ಬಳಿಗೆ ಹೋಗಲು, ಆ ಹೂವಿನಲ್ಲಿ ಬಂಗಾರದ ರಂಗಿನಿಂದ ಮಿರುಗುವ ಹೆಣ್ಣು ಶಿಶುವನ್ನು ನೋಡಿದನು. ಅವನನ್ನು ನೋಡಿ ಶಿಶು ಕ್ಯಾರು ಕ್ಯಾರೆಂದು ಕೂಗಿತು.

ಆ ಹಸು ಮಗುವನ್ನು ನೋಡಿ ರಾವಣನು ಲಲ್ಲೆಗೊಳ್ಳುತ್ತಿರಲು, ಅಶರೀರವಾಣಿಯೊಂದು ಕೇಳಿಸಿತು: "ಹೇ ರಾವಣಾ! ಆ ಮಗು ನಿನಗೂ ನಿನ್ನ ಲಂಕೆಗೂ ಕೆಡುಕುಮಾಡಲು ಹುಟ್ಟಿರುತ್ತದೆ"!

ಇದನ್ನು ಕೇಳಿ ರಾವಣನು ರಾಕ್ಷಸವೀರರನ್ನು ಕರೆದು, ಆ ಮಗುವನ್ನು ಕೊಂದು ಬರುವಂತೆ ಅಪ್ಪಣೆ ಮಾಡಿದನು.

ಅವರು ಏನು ಮಾಡಿದರೂ ಆ ಮಗು ಸಾಯಲಿಲ್ಲ. ಕತ್ತಿಗಳು ಭಟರ ಕೈಯಿಂದ ಮಾಯವಾಗುತ್ತಿದ್ದುವು. ಬೆಂಕಿಗೆ ಹಾಕಿದರೆ ಬೆಂಕಿ ನಂದಿ ಹೋಗುತ್ತಿತ್ತು. ಕಲ್ಲುಬಂಡೆಗಳು ಹೂವಿನ ರಾಶಿಗಳಾಗುತ್ತಿದ್ದುವು. ಕ್ರೂರ ಮೃಗಗಳು ಓಡಿ ಹೋಗುತ್ತಿದ್ದುವು.

ರಾಕ್ಷಸ ಭಟರು ಬೇಸತ್ತು, ಆ ಮಗುವನ್ನು ಪಂಚಲೋಹಗಳಿಂದಾದ ಒಂದು ಪೆಟ್ಟಿಗೆಯೊಳ



ಗಿಟ್ಟು, ಸಮುದ್ರದ ಮಧ್ಯದಲ್ಲಿ ಹಾಕಿಬಿಟ್ಟರು. ಆ ಪೆಟ್ಟಿಗೆ ಸಮುದ್ರವನ್ನು ದಾಟಿ ಭೂಮಿಯೊಳಗೆ ಸೇರಿ ಮುಂದೆ ಹೋಯಿತು.

ಮಿಥಿಲಾ ನಗರವನ್ನು ಆಳಿಕೊಂಡಿರುವ ಜನಕ ಮಹಾರಾಜನು ದೊಡ್ಡ ರಾಜರ್ಷಿಯಾಗಿ, ಮಹಾ ಜ್ಞಾನಿಯಾಗಿದ್ದನು. ಅವನು ಯಜ್ಞಕಾರ್ಯಕ್ಕಾಗಿ ನೆಲವನ್ನು ಸಮಮಟ್ಟ ಮಾಡಲು ಉಳುಮೆ ಮಾಡಿಸಿಕೊಂಡಿದ್ದನು. ಆಗ ನೇಗಿಲಿನ ಬಾಯಿಗೆ ಖಣೇಲೆಂದು ಒಂದು ಪೆಟ್ಟಿಗೆ ತಗಲಿತು. ಪೆಟ್ಟಿಗೆಯನ್ನು ಮಣ್ಣಿನೊಳಗಿನಿಂದ ತೆಗೆದು, ತೆರೆದು ಮುದ್ದಿನ ಮೂಟೆಯಾಗಿರುವ ಮಗುವನ್ನು ನೋಡಿ ಜನಕನು ಬಾಚಿ ಎತ್ತಿಕೊಂಡನು. ಅದು ಭೂದೇವಿ ತನಗೆ ಪ್ರಸಾದಿಸಿದ ಮಗಳೆಂದೇ ಭಾವಿಸಿದನು.

ನೇಗಿಲಿನ ಓಳಿಗೆ ಸೀತ ಎನ್ನುವುದರಿಂದ, ಅಂತಹ ನೇಗಿಲಿನ ಸೀಳಿನಲ್ಲಿ ದೊರೆತ ಆ ಮಗುವಿಗೆ "ಸೀತೆ" ಎಂದೇ ಹೆಸರಿಟ್ಟು ಕೊಂಡಾಡಲಾಯಿತು. ಜನಕನ ಮಗಳಾದುದರಿಂದ "ಜಾನಕಿ" ಎಂದೂ, ಭೂಮಿಯಲ್ಲಿ ಸಿಕ್ಕಿದವಳಾದುದರಿಂದ "ಭೂಜಾತೆ" ಎಂದೂ ಕರೆಯಲ್ಪಡುತ್ತ, ಎಲ್ಲರ ಮುದ್ದು ಮುಚ್ಚಟೆಗಳಿಗೂ ಪಾತ್ರಳಾಗಿ ಸೀತೆ ಬೆಳೆಯುತ್ತಿದ್ದಳು.

ಸೀತೆ ಈಡುಜೋಡಿಗಳಾದ ಗೆಳತಿಯರೊಂದಿಗೆ ಚೆಂಡಾಟವಾಡುತ್ತಾ, ಒಮ್ಮೆ ಕಾಣದೆಹೋದ ಚೆಂಡನ್ನು ಹುಡುಕಿಕೊಂಡು ಅತ್ತಿತ್ತ ಹೋದಳು. ಒಂದು ಕಡೆಯಲ್ಲಿ ಹೂವುಗಳಿಂದ ಪೂಜಿಸಲ್ಪಡುವ ದೊಡ್ಡದೊಂದು ಧನುಸ್ಸಿನ ಎಡೆಯಲ್ಲಿ ಆ ಚೆಂಡು ನೋಡಿದಳು. ಓಡಿಬಂದು ಎಡಗೈಯಿಂದ ಆ ಧನುಸ್ಸನ್ನು ಎತ್ತಿ ಆಚೆಗಿಟ್ಟು, ಚೆಂಡನ್ನೆತ್ತಿಕೊಂಡಳು. ಆಟಕ್ಕೆ ಆ ಧನುಸ್ಸು ಚೆನ್ನಾಗಿದೆ ಎಂದುಕೊಂಡು ಅದನ್ನು ಅವಲೀಲೆಯಾಗಿ ತಂದು ನಿಲ್ಲಿಸಿ ಚೆಂಡಿನೇಟಿಗೆ ಗುರಿಪಡಿಸಿಟ್ಟು ಆಟ ಸಾಗಿಸಿದಳು.

ಇದನ್ನು ಕಣ್ಣಾರೆ ನೋಡಿದ ಜನಕನು ನಿರ್ವಿಣ್ಣನಾಗಿ ಹೋದನು.

ಆ ಧನುಸ್ಸು ಜನಕನ ಪೂರ್ವಿಕರು ಶಿವನಿಂದ ವರಪ್ರಸಾದವಾಗಿ ಸಂಪಾದಿಸಿ ಪೂಜಿಸಿಕೊಂಡು ಬಂದಿದ್ದರು. ತ್ರಿಪುರಾಸುರ ಸಂಹಾರದಲ್ಲಿ ಶಿವನು ಆ ಬಿಲ್ಲು ಹಿಡಿದುಕೊಂಡೇ ಯುದ್ಧ ಮಾಡಿದ್ದನು. ಆ ಶಿವಧನುಸ್ಸನ್ನು ಎತ್ತಬೇಕಾದರೆ ಬಲಾಢ್ಯರಾದ ಮುನ್ನೂರು ಮಂದಿಗಳು ಇರಬೇಕಾಗಿತ್ತು,

ಅಂತಹ ಬಿಲ್ಲನ್ನು ಲೀಲಾಜಾಲವಾಗಿ ಎತ್ತಿದ ಸೀತೆ ಸಾಮಾನ್ಯದವಳಲ್ಲವೆಂದೂ, ಆ ಶಿವಧನುಸ್ಸನ್ನು ಎತ್ತಿ ನಾಣೇರಿಸಬಲ್ಲವನಿಗೆ ಮಾತ್ರವೇ ಸೀತೆಯನ್ನು ಮದುವೆಯಾಗುವ ಅರ್ಹತೆ ಇದೆಯೆಂದೂ ಜನಕನಿಗೆ ತೋರಿತು.

ಸೀತೆಗೆ ಸ್ವಯಂವರವನ್ನು ಏರ್ಪಡಿಸಿ, ಶಿವ ಧನುಸ್ಸನ್ನು ಎತ್ತಿ ಬಾಗಿಸಬಲ್ಲವನನ್ನು ಅವಳು ವರಿಸುವಳೆಂದು ಪಂಥವಿಡಿಸಲು ಜನಕನು ಆಗಲೇ ನಿಶ್ಚಯಿಸಿದನು.



ಹೀಗೆ ಸೀತೆ ಅದೊಂದನ್ನೂ ಅರಿಯದೆ ಮಿಥಿಲಾ ನಗರದಲ್ಲಿ ಬೆಳೆದು ದೊಡ್ಡವಳಾದಳು.

ವಿಶ್ವಾಮಿತ್ರನು ಯಾಗರಕ್ಷಣೆಗೆ ರಾಮಲಕ್ಷ್ಮಣ ರನ್ನು ತನ್ನೊಂದಿಗೆ ಕಳುಹಿಸಬೇಕೆಂದು ಜನಕನನ್ನು ಕೇಳಿದನು. ಅದಕ್ಕೆ ದಶರಥನು, "ರಾಕ್ಷಸರಿಂದ ಯಾಗರಕ್ಷಣೆ ಮಾಡಲು ಈ ಹಸುಬಾಲರಿಂದ ಹೇಗಾದೀತು ? ಓ ಮಹರ್ಷೀ ! ಅವರು ಅಸ್ತ್ರ ವಿದ್ಯೆಗಳನ್ನು ಇನ್ನು ಮೇಲಷ್ಟೇ ಕಲಿಯಬೇಕಾಗಿದೆ" ಎಂದನು. "ಅದು ನಿಜ. ಅದಕ್ಕಾಗಿ ತಾನೇ ನಾನು ಬಂದಿದ್ದೇನೆ ? ಕ್ಷತ್ರಿಯ ರಾಜಪುತ್ರರಿಗೆ ಯಾವ ಯಾವ ವಿದ್ಯೆಗಳು ಬೇಕೋ ಅವನ್ನೆಲ್ಲಾ ನಾನು ಕಲಿಸಿಕೊಡುತ್ತೇನೆ." ಎಂದು ವಿಶ್ವಾಮಿತ್ರನು ಹೆಚ್ಚಳಿಕೆಯಿಂದ ವಸಿಷ್ಠನನ್ನು ನೋಡಿದನು.

ವಶಿಷ್ಠನು ಮುಗುಳುನಗುತ್ತಾ, ವಿಶ್ವಾಮಿತ್ರ ನನ್ನು ಮೆಚ್ಚಿಕೊಂಡು, ರಾಮಲಕ್ಷ್ಮಣರನ್ನು ಆತ ನೊಂದಿಗೆ ಕಳುಹಿಸುವುದು ಬಹಳ ಒಳ್ಳೆಯದೆಂದು ದಶರಥನೊಂದಿಗೆ ಹೇಳಿದನು. ರಾಮಲಕ್ಷ್ಮಣರು ಮುನಿಗಳ ಹಾಗೆಯೇ ತಲೆಮುಡಿಯನ್ನು ಕಟ್ಟಿ ಕೊಂಡು, ಧನುರ್ಬಾಣಗಳನ್ನು ಧರಿಸಿ ವಿಶ್ವಾಮಿತ್ರ ನೊಂದಿಗೆ ಹೊರಟರು.

ದಾರಿಯುದ್ದಕ್ಕೂ ವಿಶ್ವಾಮಿತ್ರನು ಅವರಿಗೆ ಧನುರ್ವಿದ್ಯೆಯ ವಿಶೇಷ ಸೂಕ್ಷ್ಮಗಳನ್ನು ಬೋಧಿ ಸುತ್ತ ಸಿದ್ಧಾಶ್ರಮಕ್ಕೆ ಕರೆದುಕೊಂಡು ಹೋದನು.

ಪ್ರತಿಭಾಶಾಲಿಗಳಾದ ರಾಮಲಕ್ಷ್ಮಣರು ವಿಶ್ವಾ ಮಿತ್ರನ ಸುನಿಶಿತ ಶಿಕ್ಷಣದಲ್ಲಿ ಧನುರ್ವಿದ್ಯೆಯಲ್ಲಿ ಇನ್ನೇನೂ ಕಲಿಯಲಿಕ್ಕಿಲ್ಲದಂತೆ ಪಾರಂಗತರಾದರು. ವಿಶ್ವಾಮಿತ್ರನು ಋಷಿಗಳೊಂದಿಗೆ ಕೂಡಿ ಯಾಗ ವನ್ನು ಪ್ರಾರಂಭಿಸಲು ಬೇಕಾದ ಏರ್ಪಾಡುಗಳನ್ನು ಮಾಡಿಕೊಂಡಿದ್ದನು. ಆ ಸಮಯದಲ್ಲಿ ಭಯಂಕರ ವಾಗಿ ಆರ್ಭಟಿಸುತ್ತ ರಾಕ್ಷಸಿ ತಾಟಕಿ ಸಿಡಿಲಿನ ಹಾಗೆ ಆಶ್ರಮದ ಮೇಲೆ ಬಿದ್ದಳು.

ವಿಶ್ವಾಮಿತ್ರನು ಯಾವ ಸಂದೇಹಕ್ಕೂ ಎಡೆಗೊಡದೆ ತಾಟಕಿಯನ್ನು ಕೊಲ್ಲುವಂತೆ ರಾಮನಿಗೆ ಅಪ್ಪಣೆ ಮಾಡಿದನು. ರಾಮನು ತಾಟಕಿಯ ಮೇಲೆ ಶರಪರಂಪರೆಗಳನ್ನು ಸುರಿಸಿದನು. ಅವಳ ಸರ್ವಾಂಗವನ್ನೂ ಬಾಣಗಳು ಚುಚ್ಚಿಕೊಂಡುವು. ಆದರಿಂದ ಅವಳು ದೊಡ್ಡ ಪರ್ವತದ ಹಾಗೆ ನೆಲದಲ್ಲಿ ಬಿದ್ದು ಪ್ರಾಣಬಿಟ್ಟಳು.

ರಾಮನ ಬಾಣ ಪ್ರಯೋಗದ ಕೌಶಲವನ್ನು ನೋಡಿ ವಿಶ್ವಾಮಿತ್ರನು ಬಹಳವಾಗಿ ಮೆಚ್ಚಿ ಕೊಂಡನು. ತಾನು ಅವರಿಗೆ ಕಲಿಸಿದ ವಿದ್ಯೆ ಸಾರ್ಥಕವಾದಂತೆ ಅವನಿಗೆ ತೋರಿತು.

ಯಾಗವು ಪ್ರಾರಂಭವಾಯಿತು. ವಿಶ್ವಾಮಿತ್ರನು ರಾಮನಿಗೆ ವಿಶೇಷವಾದ ಕೆಲವು ಅಸ್ತ್ರಗಳನ್ನು ಉಪದೇಶಿಸಿದನು. ರಾಮನೂ ಲಕ್ಷ್ಮಣನೂ ಧನುರ್ಧಾರಿಗಳಾಗಿ ಆಶ್ರಮದ ಸುತ್ತಲೂ ತಿರುಗುತ್ತ ರಕ್ಷಣೆ ಮಾಡಿಕೊಂಡಿದ್ದರು.

ನಲ್ಲಿರುವ ಪರಶುರಾಮನ ಕಿವಿಗಳನ್ನು ಹೊಕ್ಕುವು. ಕೂಡಲೇ ಪರಶುರಾಮನು ತಪಸ್ಸಿನಿಂದ ಎಚ್ಚೆತ್ತನು. ವಿಷ್ಣುವಿನ ಮತ್ತೊಂದು ರೂಪವಾದ ಗೋಲೋಕವಾಸಿ ಕೃಷ್ಣನು ಹೇಳಿದ ಮಾತುಗಳು ಅವನ ನೆನಪಿಗೆ ಬಂದುವು. ಕೃಷ್ಣನು ತನಗೆ ಕೊಟ್ಟ ಕೋದಂಡವನ್ನು ವಿಷ್ಣುವಿನ ಅಂಶನಾದ ರಾಮನಿಗೆ ಒಪ್ಪಿಸಬೇಕೆಂದು ಪರಶುರಾಮನು ಅಲ್ಲಿಂದ ಹೊರಟನು.

ಸೀತೆ ರಾಮನ ಕೊರಳಿನಲ್ಲಿ ವರಮಾಲೆ ಹಾಕಿ, ಹಿಂದಿರುಗಿ ತಂದೆಯ ಪಕ್ಕದಲ್ಲಿ ಹೋಗಿ ನಿಂತಳು. ಆಮೇಲೆ ಸೀತಾರಾಮರ ಕಲ್ಯಾಣದ ಏರ್ಪಾಡು ಭರದಿಂದ ನಡೆಯಿತು. ದಶರಥನು ಸಕುಟುಂಬ ಸಪರಿವಾರನಾಗಿ ಮಿಥಿಲೆಗೆ ಸಾಗಿಬಂದನು.

ಮದುಮಕ್ಕಳಾದ ಸೀತಾರಾಮರು ಹಸೆ ಮಣೆಯ ಮೇಲೆ ಕುಳಿತು 'ಅರಸಿನೆಣ್ಣೆ' ವಿಧಿ ನೆರವೇರಿಸುವಾಗ, ಸೀತೆಯ ಕಮಲದಂತಹ ಅಂಜಲಿಯಲ್ಲಿ ಮುತ್ತುಗಳು ಪದ್ಮರಾಗಗಳಂತೆ ಪ್ರಕಾಶಿಸುತ್ತ ರಾಮನ ತಲೆಯ ಮೇಲೆ ಜಾಜಿಮಲ್ಲಿಗೆಯ ಮಳೆಯಂತೆ ಬಿದ್ದುವು. ಅವು ರಾಮನ ಶರೀರದಿಂದ ಜಾರುವಾಗ ಇಂದ್ರನೀಲಗಳಂತೆ ಕಾಣುತ್ತಿದ್ದುವು.

ಸೀತೆಯ ತಂಗಿಯಾದ ಊರ್ಮಿಳೆಯನ್ನು ಲಕ್ಷ್ಮಣನಿಗೆ ಕೊಟ್ಟು, ಮಾಂಡವಿಯನ್ನು ಭರತನಿಗೂ, ಶಶರೂಪೆಯನ್ನು ಶತ್ರುಘ್ನನಿಗೂ ಕೊಟ್ಟು ಸೀತಾರಾಮ ಕಲ್ಯಾಣ ಮಹೋತ್ಸವದೊಟ್ಟಿಗೇ ಮದುವೆಗಳು ನಡೆದುವು.

ದಶರಥನು ಕುಮಾರರೊಂದಿಗೂ, ಸೊಸೆಯಂದಿರೊಂದಿಗೂ ಅಯೋಧ್ಯೆಗೆ ಹಿಂದಿರುಗಿ ಪ್ರಯಾಣ ಹೊರಟನು. ದಾರಿಯಲ್ಲಿ ಬೇಗಬೇಗನೆ ಈ ಕಡೆಗೇ ಬರುತ್ತಿರುವ ಪರಶುರಾಮನನ್ನು ನೋಡುತ್ತಲೇ, ದಶರಥನು ರಥದಿಂದ ಇಳಿದು ಕ್ಷತ್ರಿಯಾಂತಕನಾದ ಪರಶುರಾಮನಿಗೆ ನಮಸ್ಕಾರಮಾಡಿ, ರಾಮನ ತಲೆಗೆ ಬದಲಾಗಿ ತನ್ನ ತಲೆಯನ್ನು ಕಡಿಯುವಂತೆ ಬೇಡಿಕೊಂಡನು.

"ಆ ಕಾರ್ಯವನ್ನು ನಾನು ಯಾವಾಗಲೋ ಬಿಟ್ಟಿದ್ದೇನೆ" ಎಂದು ಪರಶುರಾಮನು ರಾಮನನ್ನು ನೋಡಿ, "ಓ ರಾಮಾ ! ನೀನು ಆ ಹರನ ಬಿಲ್ಲನ್ನು ಮುರಿದೆಯಂತೆ. ಈ ಬಿಲ್ಲಿಗೆ ನಾಣೇರಿಸು ನೋಡುತ್ತೇನೆ" ಎಂದು ತನ್ನ ಕೈಯಲ್ಲಿದ್ದ ಕೋದಂಡವನ್ನು ರಾಮನಿಗೆ ಕೊಟ್ಟನು.

ಅದನ್ನು ಪಡೆದುಕೊಳ್ಳುತ್ತಿರುವಾಗಲೇ, ಪರಶುರಾಮನಲ್ಲಿದ್ದ ವಿಷ್ಣುವಿನ ಅಂಶವು ರಾಮನನ್ನು ಸೇರಿಕೊಂಡಿತು. ' ಕೋದಂಡವನ್ನು ಹಿಡಿದು ರಾಮನು ಬಹಳ ಗಂಭೀರಪುರುಷನಾಗಿ ನಿಂತು ಅದನ್ನು ಬಗ್ಗಿಸಿ ಹೆದೆಯೇರಿಸಿದನು.





ಹಾಗಿರುವಾಗ ಯಾಗ ನಾಶನವನ್ನೇ ಧ್ಯೇಯವಾಗಿಟ್ಟುಕೊಂಡ ಮಾರೀಚನೂ, ಸುಬಾಹುವೂ ಒಟ್ಟಿಗೇ ಆಶ್ರಮದ ಮೇಲೆ ಬಿದ್ದರು. ಮರುಕ್ಷಣದಲ್ಲಿ ರಾಮನು ಎರಡೇ ಬಾಣಗಳನ್ನು ಪ್ರಯೋಗಿಸಿದನು. ಸುಬಾಹು ಸತ್ತುಬಿದ್ದನು. ಮಾರೀಚನು ಬಾಣದ ಪೆಟ್ಟಿನ ವೇಗಕ್ಕೆ ಕೊನೆಯುಸಿರಿನೊಂದಿಗೆ ಸಮುದ್ರಕ್ಕೆ ಹೋಗಿ ಬಿದ್ದು, ಹೇಗೋ ಬದುಕಿ ಲಂಕೆಯನ್ನು ಸೇರಿದನು.

ಆಮೇಲೆ ಯಾಗವು ನಿರ್ವಿಘ್ನವಾಗಿ ಸಾಗಿತು. ಯಾಗ ಸಮಾಪ್ತಿಯ ಕಾಲದಲ್ಲಿ ವಿಶ್ವಾಮಿತ್ರನು ರಾಮನ ಕೈಯಿಂದ ಹವಿಸ್ಸುಗಳನ್ನು ಹಾಕಿಸಿ ಹೋಮ ಮಾಡಿಸಿದನು. ಆಗ ಯಜ್ಞಕುಂಡದಿಂದ ಹೊರಟ ಜ್ವಾಲೆಗಳಲ್ಲಿ ತೇಲುತ್ತ, ಅರ್ಧಚಂದ್ರಾಕಾರದ ಒಂದು ದಿವ್ಯ ಬಾಣವು ಕಾಂತಿಯುತವಾಗಿ ಮೇಲೆದ್ದು ಬಂತು.

ವಿಶ್ವಾಮಿತ್ರನು, "ರಾಮಾ, ಅದು ನಿನ್ನ ಬಾಣ. ರಾಮಬಾಣವೆಂದು ಅದು ಹೆಸರು ಪಡೆಯುತ್ತದೆ. ಈ ಬಾಣಕ್ಕೆ ಯಾವ ಪ್ರತ್ಯಸ್ತ್ರವೂ ಪ್ರಪಂಚದಲ್ಲಿಲ್ಲ. ಶತ್ರುವಿನ ಕಂಠವನ್ನು ತರಿದು ಮತ್ತೆ ನಿನ್ನ ಹತ್ತಿರವೇ ಬಂದು ಸೇರುವ ಬಾಣವಿದು" ಎಂದು ಹೇಳಿ ಆ ಬಾಣವನ್ನು ರಾಮನಿಗೆ ಕೊಟ್ಟನು.

ವಿಶ್ವಾಮಿತ್ರನು ಬೇರೆ ಕೆಲವು ಯಾಗಗಳನ್ನೂ ಮಾಡಿದನು. ಆ ಕಾಲದಲ್ಲಿ ವಿಶ್ವಾಮಿತ್ರನು ಇನ್ನೂ ಕೆಲವು ಮಹಾಮಹಾ ಅಸ್ತ್ರಗಳನ್ನು ರಾಮನಿಗೆ ಉಪದೇಶಮಾಡಿದನು. ಹೊಸಹೊಸ ಬಾಣಗಳನ್ನೂ ಕೊಟ್ಟನು. ಅವನು ಕೊಟ್ಟ ಪ್ರತಿಯೊಂದು ಬಾಣವನ್ನೂ ಕಣ್ಣಿಗೊತ್ತಿಕೊಂಡು ಸ್ವೀಕರಿಸಿ ಪ್ರಣಾಮ ಮಾಡಿದನು ರಾಮ.

"ರಾಮಾ, ನಾನೂ ನೀನೂ ಸೂರ್ಯವಂಶದವರು. ನನಗೆ ತಿಳಿದ ಅಸ್ತ್ರವಿದ್ಯೆಗಳೆಲ್ಲವನ್ನೂ ನಿನಗೆ ಉಪದೇಶಿಸಿದುದಕ್ಕೆ ನನಗೆ ಬಹಳ ಸಂತೋಷವಾಗುತ್ತದೆ. ನಿನ್ನಂತಹ ಸತ್ಪಾತ್ರನಿಗೆ ಗುರುವೆನಿಸಿಕೊಂಡು ನಾನು ಹರ್ಷಪುಲಕಿತನಾಗುತ್ತೇನಪ್ಪಾ" ಎಂದನು ವಿಶ್ವಾಮಿತ್ರ.

"ಗುರುದೇವಾ, ನಿಮ್ಮ ಕೃಪೆಗೆ ಪಾತ್ರನಾದ ನಾನು ಧನ್ಯನಾದೆನು" ಎಂದನು ರಾಮ.

ವಿಶ್ವಾಮಿತ್ರನ ಸಿದ್ಧಾಶ್ರಮದಲ್ಲಿಯೇ ರಾಮಲಕ್ಷ್ಮಣರು ಯೌವನವಂತರಾದರು.

ಒಂದುದಿನ ಅಸ್ತ್ರಶಸ್ತ್ರಗಳ ಪ್ರಯೋಗ ಉಪಸಂಹಾರಗಳಲ್ಲಿರುವ ವಿಶೇಷಗಳನ್ನು ಹೇಳುತ್ತಾ ವಿಶ್ವಾಮಿತ್ರನು, ರಾಮನನ್ನು ವಾತ್ಸಲ್ಯದಿಂದ ನೋಡುತ್ತ, "ರಾಮಾ, ನಿನ್ನ ವಿಶಾಲ ನಯನಾರವಿಂದಗಳು ಶಾಂತಿಚಂದ್ರಿಕೆಯನ್ನು ಪಸರಿಸುತ್ತ, ನನ್ನ ಆಶ್ರಮವನ್ನು ಶಾಂತಿನಿಲಯವಾಗಿ ಮಾಡಿದುದರಿಂದ ನೀನು ಶಾಂತರಾಮನು, ಸುಂದರರಾಮನು!" ಎಂದು ಬೆನ್ನುತಟ್ಟಿ ಶ್ಲಾಘಿಸಿ ತನ್ನೊಂದಿಗೆ ಬರುವಂತೆ ಹೇಳಿ, ಆಶ್ರಮದಿಂದ ಹೊರಟನು.



ನಂದನು ಅಹಲ್ಯಾ ಗೌತಮರ ಕುಮಾರನು. ಶತಾನಂದನ ಪಲ್ಲಕಿಯ ಹಿಂದೆ, ಮಿಥಿಲಾರಾಜ್ಯದ ರಾಜಲಾಂಛನಗಳೊಂದಿಗೆ ಪರಿವಾರವೂ ಬರುತ್ತಿದ್ದಿತು. ಶತಾನಂದನು ವಿಶ್ವಾಮಿತ್ರನನ್ನು ದರ್ಶಿಸಲು ಸಿದ್ಧಾಶ್ರಮಕ್ಕೇ ಹೊರಟಿದ್ದನು.

ದಾರಿಯಲ್ಲಿ ಇದಿರಾದ ವಿಶ್ವಾಮಿತ್ರನನ್ನು ನೋಡಿ ಶತಾನಂದನು ಪಲ್ಲಕಿಯಿಂದಿಳಿದು ಅವನಿಗೆ ಪ್ರಣಾಮ ಮಾಡಿ ಜನಕನ ಆಹ್ವಾನವನ್ನು ಕೊಟ್ಟನು.

ವಿಶ್ವಾಮಿತ್ರನಿಂದ ತನ್ನ ತಾಯಿ ಅಹಲ್ಯೆಯ ಶಾಪವಿಮೋಚನೆಯಾಯಿತೆಂದು ತಿಳಿದು, ಶತಾನಂದನು ಅತ್ಯಾನಂದದಿಂದ, ರಾಮನನ್ನು ಕೀರ್ತಿಸಿ, ತಂದೆತಾಯಿಯರ ಬಳಿಗೆ ಹೋದನು.

ಮುಂದೆ ವಿಶ್ವಾಮಿತ್ರನು ರಾಮಲಕ್ಷ್ಮಣರೊಂದಿಗೆ ಮಿಥಿಲೆಯನ್ನು ತಲಪಿದನು.

ಸೀತೆ ಉದ್ಯಾನದಲ್ಲಿ ವಿಹರಿಸಿಕೊಂಡಿದ್ದಳು. ಅವಳೊಂದಿಗೆ ಅವಳ ತಂಗಿ ಊರ್ಮಿಳೆಯೂ ಇದ್ದಳು. ಆ ಉದ್ಯಾನವನದೊಳಗಿನ ಮಾರ್ಗದಿಂದಾಗಿಯೇ ವಿಶ್ವಾಮಿತ್ರನು ರಾಮಲಕ್ಷ್ಮಣರೊಂದಿಗೆ ನಡೆಯುತ್ತಿದ್ದನು.

ಆಗ ಸೀತೆಯೂ ರಾಮನೂ ಒಬ್ಬರನ್ನೊಬ್ಬರು ನೋಡಿಕೊಂಡರು. ರಾಮನನ್ನು ನೋಡಿದ ಕೂಡಲೇ ಸೀತೆಯ ಮನಸ್ಸಿಗೆ ತನ್ನವನು ಬಂದನು ಎನಿಸಿತು. ಮತ್ತೆ ಅವಳು ಅಲ್ಲಿ ನಿಲ್ಲಲಾಗದೆ ಅಡಿಗಳು ತಡಬಡಿಸುತ್ತಿರಲು ಅಂತಃಪುರ ಮಂದಿರದೊಳಗೆ ಓಡಿ ಮರೆಯಾದಳು. ಊರ್ಮಿಳೆ ಲಕ್ಷ್ಮಣನಲ್ಲಿ ಮನಸ್ಸು ಸಿಕ್ಕಿಕೊಂಡವಳಾಗಿ ಸೀತೆಯ ಹಿಂದೆಯೇ ಹೋದಳು.

ಸ್ವಯಂವರಕ್ಕೆ ಜನಕನಿಟ್ಟ ಪಂಥವು ಪ್ರಾರಂಭವಾಯಿತು. ಎಂತೆಂತಹ ರಾಜಾಧಿರಾಜರಿಂದಲೂ, ಸಂಪನ್ನರಾದವರಿಂದಲೂ ಶಿವಧನುಸ್ಸನ್ನು ಅಲುಗಿಸಲು ಕೂಡ ಸಾಧ್ಯವಾಗಲಿಲ್ಲ.

ಜನಕರಾಜನು ನಿರಾಶೆಪಡುತ್ತಿರುವಾಗ, ತಂದೆಯ ಹತ್ತಿರವಿದ್ದ ಸೀತೆ, ದೂರದಲ್ಲಿರುವ ರಾಮನನ್ನು ತೋರಿಸುತ್ತ, ಉತ್ಸಾಹದಿಂದ, ಆತನನ್ನು ನೋಡಪ್ಪಾ ಎಂಬಂತೆ ನೋಡಿದಳು.

ವಿಶ್ವಾಮಿತ್ರನು ರಾಮನನ್ನು ಮುಂದಕ್ಕೆ ಕಳುಹಿಸಿದನು. ಆಚಾರ್ಯದೇವನ ಆದೇಶವನ್ನು ಶಿರಸಾವಹಿಸಿ, ರಾಮನು ತಾನು ಕೇವಲ ನಿಮಿತ್ತಮಾತ್ರನೆಂಬ ಹಾಗೆ ಹೋಗಿ ಶಿವಧನುಸ್ಸಿಗೆ ನಮಸ್ಕರಿಸಿದನು. ಬಳಿಕ ಆನೆಮರಿ ಕಬ್ಬಿನ ಜಲ್ಲೆಯನ್ನು ಎಳೆದಂತೆ ಶಿವಧನುಸ್ಸನ್ನು ಅವಲೀಲೆಯಾಗಿ ಎತ್ತಿಹಿಡಿದು, ನೇಣನ್ನು ಬಲವಾಗಿ ಎಳೆಯುತ್ತಿರಲು ಭೂಮ್ಯಾಕಾಶಗಳು ನಡುಗುವಂತೆ ದೊಡ್ಡ ಶಬ್ದದೊಂದಿಗೆ ಶಿವಧನುಸ್ಸು ಮುರಿದುಹೋಯಿತು.

ಆ ಮಹಾಧ್ವನಿಯ ತರಂಗಗಳು ದಿಗಂತಗಳಲ್ಲಿ ವ್ಯಾಪಿಸಿಕೊಂಡು ಹೋಗಿ, ದಕ್ಷಿಣ ಮಹಾಸಮುದ್ರದ ಮಹೇಂದ್ರ ಪರ್ವತದ ಮೇಲೆ ತಪಸ್ಸಿ



ರಾಮಲಕ್ಷ್ಮಣರು ವಿಶ್ವಾಮಿತ್ರನನ್ನು ಅನುಸರಿಸಿ ಹೋಗುತ್ತಿದ್ದರು. ವಿಶ್ವಾಮಿತ್ರನು ಮಿಥಿಲಾ ನಗರದ ದಾರಿಯನ್ನು ಹಿಡಿದಿದ್ದನು.

ದಾರಿಯಲ್ಲಿ ಗೌತಮಾಶ್ರಮದ ಮೇಲಿಂದಾಗಿ ಹೋಗುತ್ತಿರುವಾಗ, ರಾಮನ ಪಾದವು ತಾಗಿ, ಬಂಡೆಯ ಕಲ್ಲೊಂದು ಸ್ತ್ರೀಮೂರ್ತಿಯಾಗಿ ಎದ್ದಿತು. ಅವಳೇ ಅಹಲ್ಯೆ. ರಾಮನ ಪಾದಸ್ಪರ್ಶದಿಂದ ಅವಳ ಶಾಪವಿಮೋಚನೆಯಾಗಿ ರಾಮನಿಗೆ ನಮಸ್ಕಾರ ಮಾಡಿದಳು. ರಾಮನು ಆಶ್ಚರ್ಯದಿಂದ ಹಿಂಜರಿದನು.

ಅದನ್ನು ನೋಡಿ, ಸಮೀಪದಲ್ಲೇ ಚಿರಕಾಲದಿಂದ ತಪಸ್ಸು ಮಾಡಿಕೊಂಡಿದ್ದ ಗೌತಮನು ತಪಸ್ಸನ್ನು ಸಾಕುಮಾಡಿ ಎದ್ದು ಬಂದನು.

ಅವನು ರಾಮನನ್ನು ಭಕ್ತಿಯ ಕಣ್ಣುಗಳಿಂದ ನೋಡುತ್ತಾ, "ರಾಮಚಂದ್ರಾ, ನನ್ನ ಪತ್ನಿಯ ಶಾಪವು ತೀರಿತು. ಅವಳನ್ನು ಪಾವನಗೊಳಿಸಿ ನೀನು ಪಾವನ ರಾಮನಾದೆ" ಎಂದನು.

ಗಡುವು ಮುಗಿದು ಅಹಲ್ಯೆಯ ಶಾಪವಿಮೋಚನೆಯಾಗಿರಬಹುದು. ತನ್ನಲ್ಲೇನಿದೆ? ಎಂಬ ಹಾಗೆ ರಾಮನು ಗೌತಮನನ್ನು ನೋಡಿದನು.

ಗೌತಮನು ತದೇಕದೃಷ್ಟಿಯಿಂದ ರಾಮನನ್ನು ನೋಡುತ್ತ, "ಹೌದು, ರಾಮಾ! ನೀನು ಬೂದಿ ಮುಚ್ಚಿದ ಕೆಂಡ. ಮಾಯಾಮಾನುಷ ವಿಗ್ರಹನು" ಎಂದನು.

ಹೌದು ಹೌದೆಂಬಂತೆ ವಿಶ್ವಾಮಿತ್ರನು ತಲೆಯನ್ನು ಅಲುಗಿಸಿದನು.

"ವಿಷ್ಣುವಿನ ಅವತಾರಗಳಲ್ಲಿ ರಾಮಾವತಾರದ ಅನಂತರ ಕೃಷ್ಣಾವತಾರದಲ್ಲಿ, ಕೃಷ್ಣನು ತಾನು ಅವತಾರಮೂರ್ತಿ ಎಂಬುದನ್ನು ತಿಳಿಸುವಂತೆ ಅನೇಕ ಲೀಲೆಗಳನ್ನು ತೋರಿಸಿ ಮಾಯಾಮಾನುಷ ವಿಗ್ರಹನೆನಿಸಿಕೊಂಡನು. ರಾಮನು ಪರಿಪೂರ್ಣ ಮಾನವನು ಹೇಗಿರಬೇಕೆಂಬುದನ್ನು ತೋರಿಸಿ ಕರ್ತವ್ಯಪಾಲನೆ ಮಾಡುತ್ತಾನೆ. ಮನುಷ್ಯನು ಹೇಗೆ ನಡೆಯಬೇಕೋ ಹಾಗೆ ನಡೆದು ತೋರಿಸುತ್ತಾನೆ. ಇದೇ ರಾಮಾವತಾರದ ವಿಶೇಷ" ಎಂದು ಸೂತ ಪುರಾಣಿಕನು ವಿವರಿಸಿ ರಾಮಕಥೆಯನ್ನು ಸಾಗಿಸಿಕೊಂಡು ಹೋದನು.

ಗೌತಮನು ಎಲ್ಲರನ್ನೂ ಆಶ್ರಮದೊಳಗೆ ಕರೆದುಕೊಂಡುಹೋಗಿ ಅತಿಥಿಸತ್ಕಾರಗಳನ್ನು ಮಾಡಿದನು. ಅನಂತರ ವಿಶ್ವಾಮಿತ್ರನು ರಾಮಲಕ್ಷ್ಮಣರನ್ನು ಕರೆದುಕೊಂಡು ಮುಂದೆ ಹೊರಟನು.

ದೂರದಲ್ಲಿ ಏನೋ ಕೋಲಾಹಲವು ಕೇಳಿಸತೊಡಗಿತು.

ಜನಕಮಹಾರಾಜನು ಸೀತಾಸ್ವಯಂವರ ಮಹೋತ್ಸವಕ್ಕೆ ಮಹರ್ಷಿಗಳೆಲ್ಲರಿಗೂ ಭಕ್ತಿಪೂರ್ವಕವಾದ ಆದರದ ಆಹ್ವಾನವನ್ನು ಶತಾನಂದನೆಂಬ ಪುರೋಹಿತನ ಮೂಲಕ ಕಳುಹಿಸಿದ್ದನು. ಶತಾ



ಕುಳಿತಿರಲು, ಸರಸ್ವತಿ ವೀಣೆಯ ಮೇಲೆ ರಾಗಮಾಲಿಕೆಯನ್ನು ಆಲಾಪಿಸಿಕೊಂಡಿದ್ದಳು. ಅಂತಹ ಸಮಯದಲ್ಲಿ ನಾರದನು ಇತರ ದೇವತೆಗಳನ್ನೆಲ್ಲಾ ತನ್ನ ಹಿಂದಿಟ್ಟುಕೊಂಡು ಅಲ್ಲಿಗೆ ಬಂದು, “ಓ ಪಿತಾಮಹಾ! ರಾಮನಿಗೆ ಪಟ್ಟಾಭಿಷೇಕವಂತೆ. ಅವನು ಸಿಂಹಾಸನವೇರಿ ಕುಳಿತು ಬಿಟ್ಟರೆ ರಾಕ್ಷಸ ನಿರ್ಮೂಲನವು ಹೇಗಾದೀತು? ಈ ದೇವತೆಗಳೆಲ್ಲಾ ತಳಮಳಿಸಿಕೊಂಡಿದ್ದಾರೆ. ನೋಡು! ನೋಡು!” ಎಂದನು.

ಬ್ರಹ್ಮನು ಸರಸ್ವತಿಯ ಮುಖವನ್ನು ನೋಡಿದನು. ಸರಸ್ವತಿ ಮಂದಹಾಸದಿಂದ “ನಡೆಯಬೇಕಾದುದು ನಡೆಯದೆ ಹೋಗದು. ನಾರದಾ! ನೀನು ತ್ರಿಕಾಲ ಜ್ಞಾನಿಯಲ್ಲವೇನು? ಅಗೋ ಅಲ್ಲಿ ನೋಡು! ನಿನ್ನ ವಾರಸಳಾಗುವಂತಹ ಮಂಥರೆ ಕೈಕೇಯಿಯ ಮಂದಿರಕ್ಕೆ ಹೋಗುತ್ತಿರುವುದನ್ನು ನೋಡು. ರಾಕ್ಷಸ ಸಂಹಾರದ ದಾರಿ ಪ್ರಾರಂಭವಾಗಲಿದೆ! ನಿಮ್ಮೆಲ್ಲರ ಚಿಂತೆ ನೀಗಲಿದೆ” ಎಂದಳು.

ದೇವತೆಗಳೂ, ನಾರದನೂ ಕೆಳಗೆ ಭೂಮಿಯನ್ನು ನೋಡಿದರು. ಗೂನು ಹೇರಿಕೊಂಡಿದ್ದ ದಾಸಿ ಮಂಥರೆ ಏನೋ ಗೊಣಗಿಕೊಳ್ಳುತ್ತಾ ಹೋಗುತ್ತಿದ್ದಳು.

ಅದನ್ನು ನೋಡಿ ನಾರದನು ಸರಸ್ವತಿಯೊಂದಿಗೆ, “ಅಮ್ಮಾ ವಾಗ್ದೇವಿ! ಲೋಕಕಲ್ಯಾಣಾರ್ಥವಾಗಿ ಅವಳ ಬಾಯಿಯಿಂದ ಎಂತಹ ಮಾತುಗಳನ್ನು ಹೊರಡಿಸುವಿಯೋ? ಎಲ್ಲಾ ನಿನ್ನ ದಯೆ!” ಎಂದು ನಮಸ್ಕಾರ ಮಾಡಿ ಹಿಂದಿರುಗಿದನು. ಅವನ ಹಿಂದೆಯೇ ದೇವತೆಗಳೆಲ್ಲಾ ಹೊರಟುಹೋದರು.

ಗೂನಿ ಮಂಥರೆ ಕೈಕೇಯಿಯೊಂದಿಗೆ ಅಯೋಧ್ಯೆಗೆ ಬಂದಿದ್ದ ಅವಳ ಅಂತರಂಗಿಕ ದಾಸಿ. ಅವಳು ಆಗ ತಾನೇ ನಿದ್ದೆಯಿಂದೆದ್ದ ಕೈಕೇಯಿಯನ್ನು ಕನಿಕರದಿಂದ ನೋಡುತ್ತಾ ನಿಂತಳು.

“ಏನಿದು ಮಂಥರಾ, ಹಾಗೆ ದಿಗಿಲು ಬಡಿದು ನೋಡುತ್ತಿರುವೆಯಲ್ಲಾ?” ಎಂದು ಕೇಳಿದಳು ಕೈಕೇಯಿ.

“ಏನು ಹೇಳಲಿ ಅಮ್ಮಾ? ನಾಳೆ ರಾಮನಿಗೆ ಪಟ್ಟಾಭಿಷೇಕವಂತೆ!” ಎಂದಳು ಮಂಥರೆ.

ಕೂಡಲೇ ಕೈಕೆ ತನ್ನ ಕೊರಳಲ್ಲಿದ್ದ ಮುತ್ತಿನ ಹಾರವನ್ನು ತೆಗೆದು ಮಂಥರೆಯ ಕೊರಳಿಗೆ ಹಾಕಿ, “ಎಷ್ಟು ಒಳ್ಳೆಯ ವಾರ್ತೆ ಹೇಳಿದೆ! ನಿನ್ನ ನಾಲಗೆ ಸಿಹಿಯಾಗಿರಲಿ!” ಎಂದಳು ಆತ್ಮಾನಂದದಿಂದ.

ಮಂಥರೆ ತುಟಿಯನ್ನು ವಕ್ರಿಸಿಕೊಂಡು, “ಅಯ್ಯೋ! ಕೈಕೇಯಿ! ಎಷ್ಟೊಂದು ಅಮಾಯಕಳಮ್ಮಾ ನೀನು! ಪಾಪ! ಬರೀ ದಡ್ಡ ಹುಡುಗಿಯ ಬುದ್ಧಿ ಇನ್ನೂ!” ಎಂದಳು.

“ಏಕೆ? ಏನು ಹೇಳುವಿ ಮಂಥರೇ?” ಎಂದು ಕೇಳಿದಳು ಕೈಕೇಯಿ.

“ರಾಮನು ರಾಜನಾದರೆ ಆ ಕೌಸಲ್ಯೆಯ ಮುಂದೆ ನಾನೂ ನೀನೂ ಒಂದೇ ಬಗೆಯ ದಾಸಿಗಳು! ಚೆನ್ನಾಗಿ ಆಲೋಚನೆ ಮಾಡು. ತಡಮಾಡಲು ವೇಳೆ



# ವಿಷ್ಣುಕಥ

ಪರಶುರಾಮನು ಕೊಟ್ಟ ಕೋದಂಡವನ್ನು ಶ್ರೀರಾಮನು ಹಿಡಿದೆತ್ತಿ ಹೆದೆಯೇರಿಸಿದಾಗ ಪರುಶುರಾಮನು ತಲೆದೂಗುತ್ತ, "ರಘುರಾಮಾ! ಇಂದಿನಿಂದ ನಾನು ಕ್ಷತ್ರಿಯರ ಮೇಲಿನ ಹಗೆಯನ್ನು ಬಿಟ್ಟು ಪ್ರಶಾಂತವಾಗಿ ತಪಸ್ಸು ಮಾಡುತ್ತಾ ಕಾಲ ಕಳೆಯುತ್ತೇನೆ. ನಾನು ಕೊಟ್ಟ ಕೋದಂಡವು ಇನ್ನು ನಿನ್ನದೇ. ನೀನು ಕೋದಂಡರಾಮನೆಂದು ಪ್ರಸಿದ್ಧನಾಗುವಿ" ಎಂದು ಹೇಳಿ, ಹೊರಟುಹೋದನು.

ರಾಮನು ಸೀತಾ ಸಮೇತನಾಗಿ ಅಯೋಧ್ಯೆಯನ್ನು ಪ್ರವೇಶಿಸಿದನು. ನೂತನ ವಧೂವರರ ಆಗಮನದಿಂದ ಅಯೋಧ್ಯಾ ನಗರವು ಪರ್ವದಿನಗಳಂತೆ ಸುಂದರ ವೈಭವಗಳಿಂದ ಮೆರೆಯುವ ನಗರವಾಯಿತು.

ಸೀತಾರಾಮರು ತಮ್ಮೊಳಗಿನ ಪರಸ್ಪರಾನುರಾಗದಿಂದ ಒಂದೇ ಒಂದು ಪರಿಪೂರ್ಣ ಸ್ವರೂಪರಾಗಿ, ಸುಖ ಸಾಮ್ರಾಜ್ಯವನ್ನು ಅಲಂಕರಿಸಿಕೊಂಡಿದ್ದರು.

ಹಾಗಿರಲು ಒಂದು ದಿನ ರಾಮನು "ಸೀತಾ, ಈ ರಾಜಪ್ರಾಸದವೆಂಬ ಆವರಣದಿಂದ ಸುತ್ತಲ್ಪಟ್ಟ ಪ್ರದೇಶಕ್ಕಿಂತಲೂ, ನಾವು ಸುಂದರ ವನಗಳಲ್ಲಿ ಇಚ್ಛಾನುಸಾರವಾಗಿ ವಿಹರಿಸಿಕೊಂಡಿದ್ದರೆ ಹೆಚ್ಚಿನ ಆನಂದವಾಗಿರುತ್ತದಲ್ಲವೆ? ಆಗ ನೀನು ಸಾಕ್ಷಾತ್ ವನಲಕ್ಷ್ಮಿಯಾಗಿ ಕಂಗೊಳಿಸುವಿ..." ಎಂದು ಹೇಳತೊಡಗಿದಾಗ, ಸೀತೆಯ ಗಲ್ಲಗಳು ರಂಗೇರಿ ಹೊಳೆದುವು.

ಅವರಿಗೆ ದಿನಗಳು ಮಧುರವಾಗಿ ಕಳೆಯುತ್ತಿದ್ದುವು. ಆದರೆ ಸದಾ ಎಚ್ಚರದಲ್ಲಿರುವ ಕಾಲನು ಅದನ್ನು ನೋಡಿ ಸುಮ್ಮನಿರಲಿಲ್ಲ. ದಶರಥನಿಗೆ ದುರ್ನಿಮಿತ್ತಗಳು ತೋರತೊಡಗಿದುವು. ಆಗಾಗ ಉಲ್ಕಾಪಾತಗಳಾಗುತ್ತಿದ್ದುವು. ದಶರಥನಿಗೆ ಮುನಿದಂಪತಿಗಳು ಕೊಟ್ಟ ಶಾಪವು ನೆನೆಪಾಗ ತೊಡಗಿತು. ಸುಮ್ಮನೆ ಪ್ರಾಣಭಯ ಕಾಡತೊಡಗಿತು. ಇನ್ನು ರಾಮನಿಗೆ ಪಟ್ಟಾಭಿಷೇಕ ಮಾಡುವುದೇ ಒಳ್ಳೆಯದೆಂದುಕೊಂಡು ವಸಿಷ್ಠನಿಂದ ಮುಹೂರ್ತವನ್ನಿಡಿಸಿದನು.

ಆಗ ಸತ್ಯಲೋಕದಲ್ಲಿ ಏನಾಯಿತೆಂದರೆ, ಬ್ರಹ್ಮನು ಚಿದಾನಂದ ಸ್ವರೂಪನಾಗಿ ಕಮಲಾಸನದ ಮೇಲೆ

೧೨. ಶ್ರೀರಾಮನ ವನವಾಸ

ಯಿಲ್ಲ. ಕೋಪ ಗೃಹಕ್ಕೆ ಹೋಗು, ನಿನ್ನ ಹಕ್ಕಿನ ಎರಡು ವರಗಳನ್ನು ಈಗ ಕೇಳಿಕೋ. ಭರತನನ್ನು ಏಕೆ ಹೆತ್ತಿರುವಿ? ರಾಮನ ಬೆನ್ನಿಗೆ ಛತ್ರಚಾಮರ ಗಳನ್ನು ಹಿಡಿಯಲಿಕ್ಕೇನಾ?" ಎಂದು ಮಂಥರೆ ಕಾಯಿಸಿಡುವ ಹಾಗೆ ಹೇಳಿದಳು.

ಆಮೇಲೇನು? ತನ್ನ ಎರಡು ವರಗಳು ಈಗ ಕೊಡಬೇಕೆಂದು ಕೈಕೇಯಿ ದಶರಥನನ್ನು ಕೇಳಿದಳು. "ಅದೇನು ಬೇಕೋ ಕೇಳಿಕೋ" ಎಂದನು ದಶರಥ.

"ಹದಿನಾಲ್ಕು ವರ್ಷ ರಾಮನು ವನವಾಸ ಮಾಡ ಬೇಕು. ಭರತನಿಗೆ ಪಟ್ಟಾಭಿಷೇಕವಾಗಬೇಕು" ಎಂಬ ವರಗಳನ್ನು ಕೇಳಿದಳು ಕೈಕೆ.

ಆ ಮಾತುಗಳನ್ನು ಕೇಳಿ ದಶರಥನು ದುಃಖಾ ವೇಗದಿಂದ ಮೂರ್ಛೆ ಹೋಗಿ ಶಯ್ಯೆಯ ಮೇಲೆ ಬಿದ್ದು ಬಿಟ್ಟನು.



ರಾಮನಿಗೆ ಕರೆಹೋಯಿತು.

"ಪಿತೃವಾಕ್ಯ ಪರಿಪಾಲನೆಯೇ ತನ್ನ ಪ್ರಥಮ ಕರ್ತವ್ಯ. ದಶರಥನು ಆಡಿದ ಮಾತು ತಪ್ಪಿದವನೆಂಬ ಹೆಸರು ಬರುವಂತೆ ಆಗಬಾರದು. ರಘುವಂಶದಲ್ಲಿ ಅಂತಹ ಹೆಸರು ಯಾರಿಗೂ ಇಲ್ಲ" ಎಂದುಕೊಂಡನು ರಾಮ. ತಂದೆಯ ಮಾತನ್ನು ಉಳಿಸಲಿಕ್ಕಾಗಿ ರಾಮನು ನಾರಬಟ್ಟೆಗಳನ್ನು ಕಟ್ಟಿಕೊಂಡು ವನವಾಸಕ್ಕೆ ಹೊರಡಲು ಸಿದ್ಧನಾದನು.

ಇದನ್ನು ತಿಳಿದು ಲಕ್ಷ್ಮಣನು ಮಹಾಸರ್ಪದಂತೆ ಭುಸುಗುಡುತ್ತಾ ಬಂದನು. ಕೈಕೇಯಿಯನ್ನೂ, ದಶರಥನನ್ನೂ ತುಂಡುತುಂಡು ಮಾಡಿ ಬಿಸುಡುವೆ ನೆಂದು ಕತ್ತಿ ಹಿರಿದನು. ಆಗ ರಾಮನು ತಮ್ಮ ನನ್ನು ಶಾಂತ ಪಡಿಸಿದನು.

ರಾಮನೊಂದಿಗೆ ಸೀತೆಯೂ, ಲಕ್ಷ್ಮಣನೂ ವನಕ್ಕೆ ಹೊರಟರು.

ಅದನ್ನು ಕೇಳಿ ಅಯೋಧ್ಯಾ ನಗರದ ಜನರು ರಾಮನ ದಾರಿಗೆ ಅಡ್ಡವಾಗಿ ಮಲಗಿದರು. ರಾಮನು ಅವರಿಗೆ ತಕ್ಕ ಹಿತವಚನಗಳನ್ನು ಹೇಳಿ ಸಮಾಧಾನ ಪಡಿಸಿ, ಗಂಗಾನದಿಯನ್ನು ದಾಟಿ, ಅರಣ್ಯ ಮಾರ್ಗ ವನ್ನು ಹಿಡಿದು ಭರದ್ವಾಜಾಶ್ರಮವನ್ನು ಸೇರಿದನು.

ಅಲ್ಲಿಂದ ರಾಮಲಕ್ಷ್ಮಣರು ಆಲದ ಹಾಲನ್ನು ತಲೆಗೆ ಅಂಟಿಸಿ ಮುನಿಗಳ ಹಾಗೆ ಜಡೆಮುಡಿ ಕಟ್ಟಿಕೊಂಡರು.

ಹಾಗಿರುವಾಗ ಇಲ್ಲಿ ದಶರಥನು ಮೂರ್ಛೆ ಯಿಂದೆದ್ದು ರಾಮನು ವನವಾಸಕ್ಕೆ ಹೋದ ಸಂಗತಿ ಯನ್ನು ತಿಳಿದು, "ರಾಮಾ ರಾಮಾ" ಎನ್ನುತ್ತಾ ಪ್ರಾಣಬಿಟ್ಟನು.

ಆಗ ಭರತ ಶತ್ರುಘ್ನರು ತಾತನ ಊರಿನಲ್ಲಿದ್ದರು. ಅಲ್ಲಿಂದ ಬಂದ ಭರತ ಶತ್ರುಘ್ನರು, ತಂದೆಗೆ ಉತ್ತರ ಕ್ರಿಯೆಗಳನ್ನು ಮಾಡಿದರು. ಭರತನು ನಂದಿ ಗ್ರಾಮ ದಲ್ಲೇ ಇದ್ದುಬಿಟ್ಟನು.

ತಾಯಿಯ ಮುಖ ನೋಡಲಿಕ್ಕೇ ಭರತನಿಗೆ ಅಸಹ್ಯವೆನಿಸಿತು. ಶತ್ರುಘ್ನನು ಮಂಥರೆ ದಾಸಿಯ



ಗೂನು ನಿಮಿರುವ ಹಾಗೆ ಹೊಡೆಯಲು ನೋಡಿದನು. ಆದರೆ ಅವಳು ಅಲ್ಲೆಲ್ಲಿಯೂ ಕಾಣಲಿಲ್ಲ.

ರಾಮನನ್ನು ಕರೆದುಕೊಂಡು ಬರುವ ತೀರ್ಮಾನದಲ್ಲಿ ಭರತನು ಸಪರಿವಾರದೊಂದಿಗೆ, ಶ್ವೇತ ಭತ್ರಗಳನ್ನು ಹಿಡಿಸಿಕೊಂಡು ಅರಣ್ಯಕ್ಕೆ ಹೊರಟನು.

ಹಾಗೆ ಬಂದ ಭರತನೊಂದಿಗೆ ರಾಮನು "ನಮ್ಮ ತಂದೆಯ ಮಾತನ್ನು ಉಳಿಸಬೇಕಾದುದು ನಮ್ಮಿಬ್ಬರಿಗೂ ಕರ್ತವ್ಯವಾಗಿದೆ. ನೀನು ನನ್ನ ತಮ್ಮನು. ನಾನು ಹೇಳಿದ ಹಾಗೆ ನೀನು ಕೇಳು. ನೀನು ಪಟ್ಟಾಭಿಷಿಕ್ತನಾಗಿ ರಾಜ್ಯವನ್ನು ಪಾಲಿಸಿಕೊಂಡಿರು" ಎಂದು ಹೇಳಿದನು.

ಭರತನು ರಾಮನ ಮಾತನ್ನು ಮೀರಲಾಗದೆ, "ನಾನು ರಾಜ್ಯಪಾಲನೆಯನ್ನೇನೋ ನೋಡಿಕೊಳ್ಳುತ್ತೇನೆ. ನಿನ್ನ ಲಾಂಛನವಾಗಿ ನಿನ್ನ ಪಾದುಕೆಗಳನ್ನು ಒಯ್ದು ಸಿಂಹಾಸನದ ಮೇಲೆ ಇರಿಸಿಕೊಳ್ಳುತ್ತೇನೆ" ಎಂದು ಬೇಡಿ ರಾಮನ ಪಾದುಕೆಗಳನ್ನು ಪಡೆದು ತಲೆಯ ಮೇಲೆ ಹೊತ್ತುಕೊಂಡು ಅಯೋಧ್ಯೆಗೆ ಹಿಂದಿರುಗಿ, ರಾಮನ ಆಜ್ಞೆಯಂತೆಯೇ ನಡೆದುಕೊಂಡಿದ್ದನು ಭರತ.

ರಾಮನು ಸೀತಾಲಕ್ಷ್ಮಣ ಸಮೇತನಾಗಿ ಅರಣ್ಯದೊಳಗೆ ಮುಂದೆ ಮುಂದೆ ಹೋದನು.

ಖರ, ದೂಷಣ, ತ್ರಿಶಿರರೆಂಬವರು ರಾವಣನ ಪ್ರತಿನಿಧಿಗಳಾಗಿ ವಿಂಧ್ಯ ಪರ್ವತಗಳಿಗೆ ದಕ್ಷಿಣದಲ್ಲಿರುವ ಭೂಮಿಯನ್ನೆಲ್ಲಾ ಆಕ್ರಮಿಸಿಕೊಂಡಿದ್ದರು. ಅವರು ರಾಕ್ಷಸರ ಗುಂಪಿನೊಂದಿಗೆ ತಿರುಗುತ್ತ, ಹೊಸದಾಗಿ ಅರಣ್ಯದೊಳಗೆ ಪ್ರವೇಶಿಸಿದ ನರರನ್ನು ನೋಡಿದರು

ಹಸಿದು ತಿರುಗುವ ಕ್ರೂರ ಮೃಗಗಳ ಹಾಗೆ ರಾಕ್ಷಸರು ಸೀತಾರಾಮ ಲಕ್ಷ್ಮಣರನ್ನು ಕೊಲ್ಲಲಿಕ್ಕೆ ದೊಡ್ಡ ದೊಡ್ಡ ಬಂಡೆಗಳನ್ನೂ, ಕತ್ತಿಗಳನ್ನೂ, ಶೂಲಗಳನ್ನೂ ಹಿಡಿದುಕೊಂಡು ರಾಮಲಕ್ಷ್ಮಣ ಸೀತೆಯರ ಸುತ್ತಲೂ ಮುತ್ತಿಕೊಂಡರು.

ರಾಮಲಕ್ಷ್ಮಣರು ಧನುರ್ಬಾಣಗಳನ್ನು ಧರಿಸಿ ಆ ರಾಕ್ಷಸರನ್ನೆಲ್ಲಾ ಚೆಲ್ಲಾಚೆದರಾಗಿ ಓಡಿಸಿದರು. ಓಡಿದರೂ ತಿರುಗಿ ಬಂದು ಬಿದ್ದರು. ರಾಮನು ಖರದೂಷಣರನ್ನು ಕೊಂದನು. ಅನೇಕ ಮಂದಿ ರಾಕ್ಷಸರು ಸತ್ತರು. ಬದುಕಿ ಉಳಿದವರು ಓಡಿಹೋದರು.

ರಾಮನು ವಾಸಕ್ಕೆ ಯೋಗ್ಯವಾದ ಸ್ಥಳವನ್ನು ಹುಡುಕುತ್ತಾ, ಹೋಗುವಾಗ ತಾಳೆಯ ಮರವನ್ನು ಮೀರಿಸುವ ಪ್ರಮಾಣದಲ್ಲಿರುವ, ಭಯಂಕರಾಕಾರನಾದ ವಿರಾಧನೆಂಬವನು, ಸೀತೆಯನ್ನು ಅಂಗೈಯಲ್ಲೆತ್ತಿಕೊಂಡು ಓಡಿಹೋಗತೊಡಗಿದನು. ರಾಮನು ಒಂದು ಮಹಾ ಅಸ್ತ್ರವನ್ನು ಪ್ರಯೋಗಿಸಿ ಆ ರಾಕ್ಷಸನನ್ನು ಕೊಂದನು.

ಹತಶೇಷರಾದ ರಾಕ್ಷಸರು ಶೂರ್ಪನಖಿಯ ಬಳಿಗೆ ಹೋಗಿ, ಖರದೂಷಣರು ಸತ್ತುಹೋದ ಸಮಾಚಾರವನ್ನು ಹೇಳಿದರು.



ಶೂರ್ಪನಖಿ ರಾವಣಾಸುರನ ತಂಗಿ. ಖರ, ದೂಷಣರು ಶೂರ್ಪನಖಿಗೆ ತಮ್ಮಂದಿರ ವರಿಸೆಯವರಾಗಬೇಕು.

ದಂಡಕಾರಣ್ಯದಲ್ಲಿ ತುಂಬಿ ತಿರುಗುವ ರಾಕ್ಷಸರಿಗೆಲ್ಲಾ ಶೂರ್ಪನಖಿಯೇ ನಾಯಕಿ. ಅವಳು ರಾಮ ಲಕ್ಷ್ಮಣರನ್ನು ಸೀಳಿ ಚೆಂಡಾಡಿಬಿಡಬೇಕೆಂದು ಹೊರಟಳು.

ಬೀಳುಗಳೇ ಮರದ ಕಾಂಡಗಳಾಗಿ ಹೋದ ಐದು ಆಲದ ಮರಗಳೆನಿಸಿದ ಪ್ರಾಂತಕ್ಕೆ ಪಂಚವಟಿ ಎಂದು ಹೆಸರಾಗಿತ್ತು. ರಾಮನು ಸೀತಾಲಕ್ಷ್ಮಣರೊಂದಿಗೆ ಅಲ್ಲಿಗೆ ಬಂದು ಸೇರಿದನು. ಸಮೀಪದಲ್ಲಿ ಗೋದಾವರಿ ನದಿ ಹರಿಯುತ್ತಿತ್ತು.

ಅಲ್ಲಿ ರಾಮನು ಪರ್ಣಶಾಲೆ ನಿರ್ಮಿಸಿಕೊಂಡು ಸೀತೆಯೊಂದಿಗೆ ವನವಿಹಾರ ಮಾಡುತ್ತ, ವನವಾಸದಲ್ಲಿ ಕಾಲ ಕಳೆಯುತ್ತಿದ್ದನು, ಲಕ್ಷ್ಮಣನು ಅಣ್ಣ ಅತ್ತಿಗೆಯರನ್ನು ಸೇವಿಸುತ್ತ ಪರ್ಣಶಾಲೆಯನ್ನು ಸುತ್ತಿಕೊಂಡು ರಾತ್ರೀ ಹಗಲೂ ಕಾವಲು ಕಾಯ್ದುಕೊಂಡಿದ್ದನು.

ಶೂರ್ಪನಖಿ ಅಟ್ಟಹಾಸದಿಂದ ಅವರ ಮೇಲೆ ಬೀಳಲು ಬರುತ್ತ, ರಾಮನನ್ನು ನೋಡಿ ತನ್ನನ್ನು ಮದುವೆಯಾಗುವಂತೆ ಕೇಳಿಕೊಂಡಳು. ಬೇಡಿಕೆ ನಿರರ್ಥಕವಾಗಲು ಕಾಡಿ ಬೆದರಿಸಿ ನೋಡಿದಳು. ಸೀತೆಯನ್ನು ಕೊಲ್ಲುವೆನೆಂದು ಹಾರಿದಳು, ಆಗ ರಾಮಾಜ್ಞೆಯಂತೆ ಲಕ್ಷ್ಮಣನು ಶೂರ್ಪನಖಿಯನ್ನು ಕೊಲ್ಲದೆ, ಕಿವಿಯನ್ನೂ ಮೂಗನ್ನೂ ಕೊಯಿದು ಅಲ್ಲಿಂದ ಓಡಿಸಿಬಿಟ್ಟನು.

ಶೂರ್ಪನಖಿ ಲಂಕೆಗೆ ಹೋಗಿ ರಾವಣಾಸುರನೊಂದಿಗೆ, ದಂಡಕಾರಣ್ಯದಲ್ಲಿ ತನಗೆ ನಡೆದ ಪರಾಭವವನ್ನು ಮೊರೆಯಿಟ್ಟಳು. ಸೀತೆಯ ಅಂದಚೆಂದಗಳನ್ನು ವರ್ಣಿಸಿ ಅವನ ಆಸಕ್ತಿಯನ್ನು ಕೆರಳಿಸಿದಳು. ಅವಳ ಹೇಳಿಕೆಯನ್ನು ಕೇಳಿದ ರಾವಣನು ರಾಮನಿಗೆ ಪ್ರತೀಕಾರ ಮಾಡಲು ಸೀತೆಯನ್ನು ಅಪಹರಿಸಿ ತರಬೇಕೆಂದು ಮಾರೀಚನನ್ನು ಬಂಗಾರದ ಜಿಂಕೆಯಾಗಿ ಮಾಡಿ ಕಳುಹಿಸಿಕೊಟ್ಟನು.

ಸೀತೆ ಮಾಯಾ ಮೃಗವನ್ನು ನೋಡಿ ಅದರ ಮೇಲೆ ಆಶೆಪಟ್ಟಳು. ಸೀತೆಯ ಆಶೆಯಂತೆ ಅದನ್ನು ಹಿಡಿದು ತರಲು ರಾಮನು ಹೊರಟನು. ಅದು ಸಿಕ್ಕದೆ ಓಡಲು ರಾಮನು ಅದರ ಮೇಲೆ ಬಾಣ ಪ್ರಯೋಗ ಮಾಡಿದನು. ಆಗ ಮಾಯದ ಜಿಂಕೆ ಮಾರೀಚನಾಗಿ "ಹಾ ಸೀತೆ! ಹಾ ಲಕ್ಷ್ಮಣಾ!" ಎಂದು ರಾಮನ ಕಂಠಸ್ವರದಂತೆಯೇ ಗಟ್ಟಿಯಾಗಿ ಆರ್ತನಾದ ಮಾಡಿ ಸತ್ತು ಹೋದನು.

ಅದು ರಾಕ್ಷಸ ಮಾಯೆ ಎಂದೂ, ರಾಮನಿಗೆ ಯಾವ ಕೇಡೂ ಇಲ್ಲವೆಂದೂ ಲಕ್ಷ್ಮಣನು ಎಷ್ಟು ಹೇಳಿದರೂ ಸೀತೆ ಕೇಳಲಿಲ್ಲ. ನಿಷ್ಠುರೋಕ್ತಿಗಳಿಂದ ಲಕ್ಷ್ಮಣನನ್ನು ಜರೆದಳು. ಲಕ್ಷ್ಮಣನು ಪರ್ಣಶಾಲೆಯ ಮುಂದೆ ಮೂರು ಗೆರೆಗಳನ್ನು ಎಳೆದು, ಅದನ್ನು ದಾಟಬೇಡವೆಂದು ಸೀತೆಗೆ ಹೇಳಿ ಹೋದನು.



ಒಬ್ಬಳೇ ಇರುವ ಸೀತೆಯ ಮುಂದೆ ವೃದ್ಧ ತಾಪಸಿಯ ವೇಷದಲ್ಲಿ ರಾವಣನು ಬಂದು ಭಿಕ್ಷೆ ಕೇಳಿದನು. ಸೀತೆ ಅವನಿಗೆ ಭಿಕ್ಷೆ ಹಾಕಲು ಮೂರನೆಯ ಗೇಟಿನ ಹತ್ತಿರ ಬಂದ ಕೂಡಲೇ, ರಾವಣನು ಅವಳನ್ನು ಎಳೆದು ನಿಜರೂಪ ಧರಿಸಿ ಎತ್ತಿಕೊಂಡು ಹೋದನು.

ರಾಮಲಕ್ಷ್ಮಣರು ಸೀತೆಯನ್ನು ಹುಡುಕುತ್ತಾ ಹೊರಟರು. ಆಗ ರಾಮನು ಸಾಮಾನ್ಯ ಮಾನವರ ಹಾಗೆಯೇ ಸೀತೆಯನ್ನು ನೆನೆ ನೆನೆದು ವಿಲಪಿಸಿದನು.

ಅವರು ಹಾಗೆ ಹೋಗುತ್ತಿರಲು, ರೆಕ್ಕೆಗಳು ಕಡಿಯಲ್ಪಟ್ಟು ಬಿದ್ದ ಜಟಾಯು ಪಕ್ಷಿ ರಾಮನನ್ನು ನೋಡಿ, "ಸೀತೆಯನ್ನು ಒಯ್ಯುವ ರಾವಣನನ್ನು ಅಡ್ಡಗಟ್ಟಿದೆನು. ಹೋರಾಡುವಾಗ ರಾವಣನು ನನ್ನ ರೆಕ್ಕೆಗಳನ್ನು ಕಡಿದು, ದಕ್ಷಿಣ ದಿಕ್ಕಿಗೆ ಸೀತೆಯನ್ನು ಎತ್ತಿಕೊಂಡು ಹೋದನು" ಎಂದು ಹೇಳಿ ಪ್ರಾಣ ಬಿಟ್ಟಿತು.

ದಶರಥನ ಆಪ್ತ ಮಿತ್ರನಾದ ಜಟಾಯುವಿಗೆ ರಾಮನು ದಹನ-ಸಂಸ್ಕಾರವನ್ನು ಮಾಡಿ, ಅಲ್ಲಿಂದ ಹೊರಟನು. ಆಗ ರಾಮಲಕ್ಷ್ಮಣರನ್ನು ಕಬಂಧನ ಹಸ್ತಗಳು ವನ್ಯಮೃಗಗಳೊಂದಿಗೆ ಬಾಚಿ ಹಿಡಿದು ಎಳೆದುಕೊಂಡವು.

ಕಬಂಧನದು ವಿಚಿತ್ರವಾದ ಆಕಾರ. ಪರ್ವತದಂತಹ ಹೊಟ್ಟೆ. ಅದರಲ್ಲೇ ಕೋರೆ ಹಲ್ಲುಗಳಿರುವ ದೊಡ್ಡ ಬಾಯಿ. ಬೆಂಕಿಯ ಕೆಂಡದಂತಹ ಒಂದೇ ಒಂದು ಕಣ್ಣು. ಯೋಜನದಷ್ಟು ಉದ್ದಕ್ಕೆ ಚಾಚಿಕೊಳ್ಳುವ ಎರಡು ಕೈಗಳು. ತಲೆ ಎಂಬುದು ಇಲ್ಲವೇ ಇಲ್ಲ. ಕಾಲುಗಳೂ ಇರಲಿಲ್ಲ.

ಇಂತಹ ವಿಲಕ್ಷಣ ರೂಪದ ಕಬಂಧನ ಕೈಗಳನ್ನು ರಾಮಲಕ್ಷ್ಮಣರು ಕಡಿದು ಹಾಕಿದರು. ಕಬಂಧನು ಶಾಪಗ್ರಸ್ತನಾದ ಗಂಧರ್ವನೆಂದು ಆಗ ತಿಳಿಯಿತು. ಅವನು ಶಾಪ ವಿಮೋಚನೆ ಹೊಂದಿ, ಗಂಧರ್ವನಾಗಿ, "ರಾಮಾ, ನಿನಗೆ ವಾನರರೊಂದಿಗೆ ಸ್ನೇಹವಾಗುತ್ತದೆ. ಅದು ನಿನಗೆ ತುಂಬಾ ಉಪಕಾರವಾಗುತ್ತದೆ" ಎಂದು ರಾಮನಿಗೆ ಹೇಳಿ ತನ್ನ ಲೋಕಕ್ಕೆ ಹೋದನು.

ಋಷ್ಯಮೂಕ ಪರ್ವತದ ಮೇಲೆ ವಾನರ ವೀರರೊಂದಿಗೆ ಇರುತ್ತಿದ್ದ ಸುಗ್ರೀವನು ದೂರದಿಂದ ರಾಮಲಕ್ಷ್ಮಣರನ್ನು ನೋಡಿ, ಹನುಮಂತನನ್ನು ಅವರ ಬಳಿಗೆ ಕಳುಹಿಸಿದನು.

ಮೂರು ಕೋಟಿ ದೇವತೆಗಳು ವಾನರರಾಗಿ ಹುಟ್ಟಿದ್ದರು. ಅವರಲ್ಲಿ ಹನುಮಂತನು ಶಿವನ ಅಂಶದಿಂದ ಹುಟ್ಟಿದವನು. ವಾಯುದೇವನ ಅನುಗ್ರಹದಿಂದ, ಅಂಜನಾದೇವಿಯ ಹೊಟ್ಟೆಯಲ್ಲಿ ಹುಟ್ಟಿದವನು ಹನುಮಂತ: ಆಂಜನೇಯ, ವಾಯುಪುತ್ರ, ಮಾರುತಿ ಮುಂತಾದುವು ಅವನ ಹೆಸರುಗಳು.

ಚಿಕ್ಕಂದಿನಲ್ಲಿ ಆಂಜನೇಯನು ಉದಯಸೂರ್ಯ ಬಿಂಬವನ್ನು ನೋಡಿ ಹಣ್ಣೆಂದು ಭ್ರಮಿಸಿ ಹಿಡಿದು

ತಿನ್ನಲು ಆಕಾಶಕ್ಕೆ ಹಾರಿ ಹೋಗುವಾಗ, ಇಂದ್ರನು ವಜ್ರಾಯುಧದಿಂದ ಹೊಡೆದನು. ಮಾರುತಿ ನೆಲಕ್ಕೆ ಬಿದ್ದು ಮೂರ್ಛಿತನಾದನು. ಅದನ್ನು ನೋಡಿ ವಾಯುದೇವನಿಗೆ ಕೋಪ ಬಂದು ಸ್ತಂಭಿಸಿ ನಿಂತನು. ಆಗ ದೇವತೆಗಳು ಹನುಮಂತನಿಗೆ ಚಿರಂಜೀವಿಯಾಗಿರುವಂತೆ ಆಶೀರ್ವದಿಸಿ, ಅನೇಕ ವರಗಳನ್ನೂ ಕೊಟ್ಟು ವಾಯುವನ್ನು ಸಂತೋಷಪಡಿಸಿದರು.

ಬ್ರಹ್ಮನು ಆಂಜನೇಯನ ಕಿವಿಗಳಿಗೆ ವಿಚಿತ್ರ ಪ್ರಭಾವವಿರುವ ಕುಂಡಲಗಳನ್ನು ತಗಲಿಸಿ, ಅವು ಯಾವನ ಕಣ್ಣಿಗೆ ಕಂಡು ಮೆಚ್ಚಿಕೊಳ್ಳುವನೋ ಅವನೇ ವಿಷ್ಣುವೆಂದು ಗುರುತಿಸಿ ಆರಾಧ್ಯದೈವವಾಗಿ ಸೇವಿಸುವಂತೆ ಹನುಮಂತನಿಗೆ ಹೇಳಿದನು.

ಹನುಮಂತನು ಸುಗ್ರೀವನಿಂದ ರಾಮಲಕ್ಷ್ಮಣರ ಬಳಿಗೆ ಕಳುಹಿಸಲ್ಪಟ್ಟು, ಬ್ರಹ್ಮಚಾರಿಯ ರೂಪದಲ್ಲಿ ಬಂದನು. ರಾಮನು ಅವನನ್ನು ನೋಡಿ ಲಕ್ಷ್ಮಣನೊಂದಿಗೆ, " ಲಕ್ಷ್ಮಣಾ, ಸುಂದರನಾಗಿ ಕಾಣುವ ಇವನ ಕರ್ಣಕುಂಡಲಗಳು ಇವನ ಮುಖಕ್ಕೆ ಅದೆಷ್ಟು ಚೆನ್ನಾಗಿ ಒಪ್ಪುತ್ತವೋ ನೋಡಿದೆಯಾ ? " ಎಂದು ಮೆಚ್ಚಿಕೊಂಡನು.

ಆಗ ಹನುಮಂತನು ರಾಮನು ವಿಷ್ಣುವಿನ ಅವತಾರವೆಂದು ಗುರುತಿಸಿ, ರಾಮನ ವಿಶ್ವಾಸದ ಬಂಟನಾಗಿ ಪ್ರಸಿದ್ಧನಾದನು. ರಾಮನ ಬಾಯಿಯಿಂದ ಸುಂದರನೆನ್ನಿಸಿಕೊಂಡ ಹನುಮಂತನಿಗೆ 'ಸುಂದರ' ಎಂಬ ಹೆಸರೂ ಬಂದಿತು.

ಹನುಮಂತನೊಂದಿಗೆ ಸುಗ್ರೀವನ ಬಳಿಗೆ ಬಂದ ರಾಮನು, ಸುಗ್ರೀವನೊಂದಿಗೆ ಮಾತುಕತೆಯಾಡಿದನು. ಅವರಿಬ್ಬರೂ ಅಗ್ನಿಸಾಕ್ಷಿಯಾಗಿ ಮಿತ್ರರಾದರು.

ಸುಗ್ರೀವನ ಅಣ್ಣನಾದ ವಾಲಿ ಕಿಷ್ಕಿಂಧೆಗೆ ರಾಜನಾಗಿದ್ದನು, ಅವನು ತಮ್ಮನ ಮೇಲೆ ದ್ರೋಹಿ ಎಂಬ ವೃಥಾಪವಾದವನ್ನು ಹಾಕಿ ಕೊಲ್ಲಲು ನೋಡುತ್ತಿದ್ದನು. ಸುಗ್ರೀವನು ಅವನಿಂದ ತಪ್ಪಿಸಿಕೊಂಡು ಋಷ್ಯಮೂಕ ಪರ್ವತವನ್ನು ಸೇರಿಕೊಂಡಿದ್ದನು, ಸುಗ್ರೀವನ ಹೆಂಡತಿಯನ್ನು ಕೂಡಾ ವಾಲಿ ನಿರ್ಬಂಧದಲ್ಲಿರಿಸಿದ್ದನು.

ಆಪತ್ತಿನಲ್ಲಿರುವ ಮಿತ್ರನನ್ನು ಕಾಪಾಡುವುದು ತನ್ನ ಧರ್ಮವೆಂದು ಭಾವಿಸಿ ರಾಮನು, ವಾಲಿಯನ್ನು ಸಂಹರಿಸಿ ಸುಗ್ರೀವನನ್ನು ರಾಜನನ್ನಾಗಿ ಮಾಡುವೆನೆಂದು ಭಾಷೆ ಕೊಟ್ಟನು.

ವಾಲಿಯ ಇದಿರಲ್ಲಿರುವವರ ಅರ್ಧ ಬಲವು ವಾಲಿಯನ್ನು ಸೇರುವುದೆಂಬ, ವರವು ಅವನಿಗಿತ್ತು. ಅಂತಲೇ ರಾಮನು ವಾಲಿಯ ಇದಿರಿಗೆ ನಿಲ್ಲದೆ, ಮರೆಯಾಗಿದ್ದು, ವಾಲಿಸುಗ್ರೀವರು ದ್ವಂದ್ವಯುದ್ಧ ಮಾಡುವಾಗ, ಬಾಣ ಪ್ರಯೋಗ ಮಾಡಿದನು. ಅದರಿಂದ ವಾಲಿಯ ಅಂತ್ಯವಾಯಿತು.





**ವಾ**ಲಿಯ ಮರಣಾನಂತರ ಸುಗ್ರೀವನು ನಿಷ್ಕಂಟಕನಾಗಿ ಕಿಷ್ಕಿಂಧೆಯ ರಾಜನಾದನು. ಅದರೊಂದಿಗೇ ಸುಗ್ರೀವನು ವಾಲಿಯ ಕುಮಾರನಾದ ಅಂಗದನನ್ನು ಯುವರಾಜನನ್ನಾಗಿ ಪಟ್ಟಾಭಿಷೇಕ ಮಾಡಿದನು, ಆಮೇಲೆ ಸುಗ್ರೀವನು ರಾಜಕಾರ್ಯಗಳನ್ನೆಲ್ಲಾ ಯುವರಾಜನಿಗೆ ಒಪ್ಪಿಸಿ, ತಾನು ಸುಖಭೋಗಗಳಲ್ಲಿ ತೇಲುತ್ತ, ರಾಮನ ಸಂಗತಿಯನ್ನೇ ಮರೆತುಬಿಟ್ಟನು. ಕಡೆಗೆ ಲಕ್ಷ್ಮಣನು ಧನುಷ್ಟಂಕಾರ ಮಾಡುತ್ತ ಕಿಷ್ಕಿಂಧೆಯನ್ನು ಪ್ರವೇಶಿಸಿದಾಗ. ಹನುಮಂತನು ಸುಗ್ರೀವನಿಗೆ ರಾಮಕಾರ್ಯದ ನೆನಪು ಮಾಡಲು ಅದೇ ತತ್‌ಕ್ಷಣ ಕರ್ತವ್ಯವೆಂಬ ಪ್ರಜ್ಞೆ ಬಂದಿತು ಸುಗ್ರೀವನಿಗೆ.

ಕೂಡಲೇ ಸುಗ್ರೀವನು ತೀವ್ರ ಕಾರ್ಯರಂಗಕ್ಕಿಳಿದು, ಸೀತೆಯನ್ನು ಶೋಧಿಸಲು ನಾಲ್ಕು ದಿಕ್ಕುಗಳಿಗೂ ವಾನರರನ್ನು ಕಳುಹಿಸಿದನು, ಅಂಗದ, ಹನುಮಂತ, ಜಾಂಬವಂತ ಮೊದಲಾದವರೆಲ್ಲಾ ದಕ್ಷಿಣ ದಿಕ್ಕಿಗೆ ಹೊರಟರು. ಆಗ ರಾಮನು ತನ್ನ ಬೆರಳಲ್ಲಿದ್ದ ಉಂಗುರವನ್ನು ಹನುಮಂತನ ಕೈಗೆ ಕೊಟ್ಟು, ಅದನ್ನು ಸೀತೆಗೆ ತನ್ನ ಗುರುತಾಗಿ ಕೊಡುವಂತೆ ಹೇಳಿದನು. ಆ ವಾನರರೆಲ್ಲಾ ದಕ್ಷಿಣ ಸಮುದ್ರ ತೀರದ ಪ್ರಾಂತವನ್ನು ಸೇರಿ, ಮುಂದಿನ ದಾರಿ ಕಾಣದೆ. "ರಾವಣನು ಸೀತಾ ಅಮ್ಮನವರನ್ನು ಎತ್ತಿಕೊಂಡು ದಕ್ಷಿಣ ದಿಕ್ಕಿಗೆ ಹೋದನೆಂದು ಜಟಾಯು ಪಕ್ಷಿರಾಜನು ಹೇಳಿದನೇ ಹೊರತು, ಎಲ್ಲಿಗೆ ಹೋದ, ಎಲ್ಲಿ ಅಡಗಿಸಿಟ್ಟ ಎಂಬುದೊಂದೂ ತಿಳಿಯಲಿಲ್ಲ. ಆದಾರು ಹೇಳುವರೋ ?" ಎಂದು ವಾನರರು ತಮ್ಮೊಳಗೆ ಮಾತಾಡಿಕೊಳ್ಳುತ್ತಿದ್ದರು. ಆ ವಾನರರನ್ನು ಕಬಳಿಸಬೇಕೆಂದು ಜಟಾಯುವಿನ ಅಣ್ಣನಾದ ಸಂಪಾತಿ ತೆವಳಿಕೊಂಡು ಬರುತ್ತಿದ್ದವನು, ತಮ್ಮನ ಹೆಸರು ವಾನರರ ಬಾಯಿಯಿಂದ ಬಂದ.ದನ್ನು ಕೇಳಿ ಬೆರಗಾದನು,

ಒಂದು ಕಾಲದಲ್ಲಿ ಸಂಪಾತಿಯೂ ಜಟಾಯುವೂ ಸೂರ್ಯಮಂಡಲಕ್ಕೆ ಹಾರುವ ಪಂಥವನ್ನು ಕಟ್ಟಿಕೊಂಡು ಆಕಾಶದಲ್ಲಿ ಹಾರತೊಡಗಿದರು. ಆಗ ಜಟಾಯು ಹಾರಲಾಗದೆ, ಹಿಂದಿರುಗಿಬಿಟ್ಟನು.

೧೩. ಸುಂದರರಾಮಾಯಣ



ಹನುಮಂತನು ಅವರೋಧಗಳನ್ನೆಲ್ಲಾ ಜಯಿಸಿ, ಆಕಾಶ ಮಾರ್ಗದಲ್ಲಿ ಪ್ರಯಾಣ ಮಾಡುತ್ತಿರಲು, ಸುವರ್ಚಲಾ ಎಂಬ ನಾಗಕನ್ನೆ ಮೀನಿನ ರೂಪದಲ್ಲಿ ಆಶ್ಚರ್ಯದಿಂದ ಮೇಲೆ ನೋಡುತ್ತಿದ್ದಳು, ಹನುಮಂತನ ಬೆವರಿನ ಬಿಂದುವೊಂದು ಆಕೆಯ ಬಾಯಿಯೊಳಗೆ ಬಿದ್ದಿತು. ಆದರಿಂದ ಸುವರ್ಚಲೆ ಗರ್ಭ ಧರಿಸಿ ಒಬ್ಬ ಕುಮಾರನನ್ನು ಪಡೆದಳು. ಅವನು ಮತ್ಸ್ಯವಲ್ಲಭನೆನಿಸಿ ಅಪಾರ ಶಕ್ತಿಶಾಲಿಯಾಗಿದ್ದನು.

ಒಂದು ಕಾಲದಲ್ಲಿ ಪರ್ವತಗಳಿಗೆಲ್ಲಾ ರೆಕ್ಕೆಗಳಿದ್ದುವು, ಇಂದ್ರನು ಅವುಗಳ ರೆಕ್ಕೆಗಳನ್ನು ತನ್ನ ವಜ್ರಾಯುಧದಿಂದ ಕಡಿಯುತ್ತಾ ಬಂದನು. ಆಗ ಹಿಮವಂತನ ಕುಮಾರನಾದ ಮೈನಾಕನು ವಾಯುವಿನ ಸಹಾಯದಿಂದ ಸಮುದ್ರದಲ್ಲಿ ಅಡಗಿದನು.

ಈಗ ಹನುಮಂತನನ್ನು ನೋಡಿ ಮೈನಾಕನು ಸಮುದ್ರದಲ್ಲಿ ಮೇಲೆದ್ದು, "ಆಂಜನೇಯಾ! ಸ್ವಲ್ಪ ನನ್ನ ಮೇಲೆ ನಿಂತು ಬಳಲಿಕೆ ತೀರಿಸಿಕೊಂಡು ಮುಂದು ಹೋಗಬೇಕೆಂದು ಪ್ರಾರ್ಥಿಸುತ್ತೇನೆ" ಎಂದನು.

ಮೈನಾಕನ ಮಾತನ್ನು ಮನ್ನಿಸಿ ಹನುಮಂತನು, ಕೆಲವು ಕ್ಷಣ ಮೈನಾಕ ಪರ್ವತದ ಮೇಲೆ ಕಾಲೂರಿ ನಿಂತು, ಮತ್ತೆ ರಿವ್ವನೆ ಆಕಾಶಕ್ಕೆ ಹಾರಿದನು.

ಹನುಮಂತನು ದೊಡ್ಡದೊಂದು ಮಿಂಚು ಎರಗಿದಂತೆ ಲಂಕೆಯಲ್ಲಿ ನೆಲಕ್ಕಿಳಿದನು.

ಲಂಕಾ ನಗರವನ್ನು ಸದಾ ರಕ್ಷಿಸಿಕೊಂಡಿರುವ ಲಂಕಿಣಿ ಎಂಬ ಲಂಕಾದೇವತೆ, ಹನುಮಂತನ ಆಗಮನವನ್ನು ಗುರುತಿಸಿ, ಭೀಕರಾಕಾರವನ್ನು ತಾಳಿ ಶೂಲವನ್ನೆತ್ತಿ ತಿವಿಯಲು ಬಂದಳು.

ಹನುಮಂತನು ಸೂಕ್ಷ್ಮ ರೂಪದಿಂದ ತಪ್ಪಿಸಿಕೊಂಡು, ಲಂಕಾದ್ವಾರವನ್ನು ದಾಟುವಾಗ, ಲಂಕಿಣಿ ಹನುಮಂತನನ್ನು ನೊಣ ಹಿಡಿದ ಹಾಗೆ ಹಿಡಿದು ಮುಷ್ಟಿಯೊಳಗಿಟ್ಟುಕೊಂಡಳು. ಆಗ ಹನುಮನು ಆವಳ ಅಂಗೈಯನ್ನು ಕಚ್ಚಿದನು. ಲಂಕಿಣಿ ಮುಷ್ಟಿ ಬಿಡಿಸಿದಳು. ಆವಳ ಅಂಗೈಯಿಂದ ರಕ್ತ ಸುರಿಯುತ್ತಿದ್ದಿತು. ಹನುಮಂತನು ಸರಕ್ಕನೆ ಹಾರಿ, ಮುಷ್ಟಿಯಿಂದ ಲಂಕಿಣಿಯ ಎದೆಯ ಮೇಲೆ ಗುದ್ದಿದನು. ಆ ಮುಷ್ಟಿಘಾತದಿಂದ ಲಂಕಿಣಿ ಮರಗಟ್ಟಿ ಧಿಮ್ಮಗೆ ಮಗುಚಿಬಿದ್ದಳು.

ಬಿದ್ದವಳು ಸಮಾಳಿಸಿಕೊಂಡೆದ್ದು, ಹನುಮಂತನಿಗೆ ನಮಸ್ಕಾರ ಮಾಡಿ, "ಜಯಶೀಲಾ! ಯಾವಾಗ ನಾನು ಹೀಗೆ ಬಿದ್ದು ಬಿಡುವೆನೋ, ಆ ದಿನದಿಂದ ಲಂಕೆಗೆ ವಿನಾಶಕಾಲವು ಪ್ರಾಪ್ತವಾಗುವುದೆಂದು ನನಗೆ ಬ್ರಹ್ಮನು ಹೇಳಿದ್ದಾನೆ. ಶಾಪದಿಂದ ನಾನು ಕ್ಷುದ್ರ ದೇವತೆಯಾಗಿ, ಹೀಗೆ ಲಂಕಾ ನಗರವನ್ನು ಬಹು ಕಾಲದಿಂದ ಕಾಯುತ್ತಿದ್ದೇನೆ. ಇನ್ನು ನಾನು ಹೋಗುತ್ತೇನೆ. ನೀನೂ ಇನ್ನು ಹೋಗಬಹುದು" ಎಂದು ಹೇಳಿ ಗಂಧರ್ವ ಸ್ತ್ರೀಯಾಗಿ ಆಕಾಶಕ್ಕೆ ಹಾರಿ ಅಂತರ್ಧಾನವಾದಳು.



ಸಂಪಾತಿ ಮಾತ್ರ ಮತ್ತಷ್ಟು ಮೇಲಕ್ಕೆ ಹಾರಿದುದರಿಂದ ರೆಕ್ಕೆಗಳೆರಡೂ ಸುಟ್ಟು ದಕ್ಷಿಣ ಸಮುದ್ರ ತೀರದಲ್ಲಿ ಬಿದ್ದು ಬಿಟ್ಟಿದ್ದನು. ಹಾಗೆ ಮೊಂಡನಾಗಿ ಬಿದ್ದ ಸಂಪಾತಿ ಅಲ್ಲಿ ದೊರೆತ ಪ್ರಾಣಿಗಳನ್ನು ಕಬಳಿಸುತ್ತ ಬದುಕಿಕೊಂಡಿದ್ದನು.

ಸಂಪಾತಿ ವಾನರರಿಂದ ನಡೆದ ಸಮಾಚಾರವನ್ನೆಲ್ಲಾ ತಿಳಿದು, ಅಂಗದನನ್ನು ತನ್ನ ಭುಜದ ಮೇಲೆ ಏರಿಸಿಕೊಂಡು ನೆಟ್ಟಗೆ ನಿಂತು, ದೂರದಲ್ಲಿ ಸಮುದ್ರದಾಚೆಗೆ ಕಾಣುವ ಲಂಕೆಯನ್ನು ಅವನಿಗೆ ತೋರಿಸಿ, ಸೀತೆ ಅಲ್ಲಿರುವಳೆಂದು ಹೇಳಿದನು.

ಶತಯೋಜನದಷ್ಟು ದೂರದವರೆಗೆ ಸಮುದ್ರವನ್ನು ಹಾರಿ ಲಂಕೆಯನ್ನು ತಲಪುವವನು ಯಾವನು? ವಾನರರಿಗೆ ಇದೊಂದು ದೊಡ್ಡ ಪ್ರಶ್ನೆಯಾಯಿತು.

ಹನುಮಂತನಿಗೆ ಅವನ ಶಕ್ತಿ ಸಾಮರ್ಥ್ಯಗಳು ತಿಳಿಯದಂತೆ ಬಾಲ್ಯದಲ್ಲಿಯೇ ಋಷಿಗಳಿಂದ ಶಾಪ ಬಂದಿತ್ತು. ಹುಡುಗಾಟದ ಕಾಲದಲ್ಲಿ ಅವನ ಉಪದ್ರಗಳನ್ನು ತಾಳಲಾಗದೆ, ಋಷಿಗಳು ಅವನಿಗೆ ಹಾಗೆ ಶಪಿಸಿದ್ದರು. ಇದನ್ನು ತಿಳಿದುಕೊಂಡಿದ್ದ ಜಾಂಬವಂತನು "ಹನುಮಂತಾ, ನಿನ್ನ ಶಕ್ತಿ ಎಷ್ಟೆಂದು ಇನ್ನೊಬ್ಬರು ಹೇಳಿದರಷ್ಟೇ ನಿನಗೆ ತಿಳಿಯುತ್ತದೆ. ಸಮುದ್ರವನ್ನು ಅವಲೀಲೆಯಿಂದ ಲಂಘಿಸಿ ರಾಮಕಾರ್ಯ ನೆರವೇರಿಸಬಲ್ಲವನು ನೀನೊಬ್ಬನೇ ! ಸಿದ್ಧನಾಗು" ಎಂದು ತಿಳಿಯಪಡಿಸಿದನು.

ಆಗ ಹನುಮಂತನು ರಾಮನನ್ನು ಧ್ಯಾನಿಸಿ, ಪರ್ವತವನ್ನು ಒಂದು ಸಾರಿ ಜಾಡಿಸಿ ಹಾರಿ ಮಹಾ ವೇಗ ತಂದುಕೊಂಡು ಆಕಾಶಕ್ಕೆ ಲಂಘಿಸಿದನು.

ಮಾರುತಿ ಆಕಾಶ ಮಾರ್ಗದಲ್ಲಿ ಲಂಕೆಗೆ ಹಾರಿಕೊಂಡಿರುವಾಗ, ಅವನ ಶಕ್ತಿಯುಕ್ತಿಗಳನ್ನು ಪರೀಕ್ಷೆ ಮಾಡಲು ದೇವತೆಗಳು ಸುರಸೆಯನ್ನು ಕಳುಹಿಸಿದರು.

ದೇವತಾ ಸ್ತ್ರೀಯಾದ ಸುರಸೆ ಭಯಂಕರ ರಾಕ್ಷಸಾಕಾರವನ್ನು ತಾಳಿ, ಹೆಬ್ಬಾಯಿಯನ್ನು ಆಯೆಂದು ತೆರದು ಹನುಮಂತನನ್ನು ನುಂಗಲು ಬಂದಳು. ಹನುಮಂತನು ಶರೀರವನ್ನು ಬೆಳೆಸಿಕೊಂಡಂತೆ, ಸುರಸೆಯೂ ತನ್ನ ಬಾಯಿಯನ್ನು ಅಗಲಿಸಿದಳು. ಹನುಮಂತನು ಇನ್ನಿಷ್ಟು ಬೆಳೆದು, ಅವಳು ಮತ್ತಿಷ್ಟು, ಮೇಲಿಷ್ಟು ಬಾಯ್ದೆರೆದಾಗ ಥಕ್ಕನೆ ಹನುಮಂತನು ಸೂಕ್ಷ್ಮ ರೂಪತಾಳಿ, ಸುರಸೆಯ ಬಾಯಿಯೊಳಗೆ ತೂರಿ, ಮತ್ತೆ ದೇಹವನ್ನು ಬೆಳೆಸಿದನು. ಆಗ ಸುರುಸೆಯ ದೇಹ ಸೀಳಿಹೋಯಿತು. ಹನುಮಂತನು ಹೊರಗೆ ಹಾರಿ ಮುಂದುವರಿಯಲು, ಸುರಸೆ ದೇವತಾಸ್ತ್ರೀಯಾಗಿ ದೇವಲೋಕಕ್ಕೆ ಹೋದಳು.

ಹನುಮಂತನು ಹಾಗೆ ಹಾರುವಾಗ ಸಮುದ್ರದಲ್ಲಿ ಬಿದ್ದ ಅವನ ನೆರಳನ್ನು, ರಾಹುವಿನ ತಾಯಿಯಾದ ಸಿಂಹಿಕೆ ಎಂಬ ಜಲರಾಕ್ಷಸಿ ಹಿಡಿದುಕೊಂಡು ಎಳೆಯ ತೊಡಗಿದಳು. ಹನುಮಂತನಿಗೆ ತನ್ನನ್ನು ಯಾವುದೋ ಎಳೆಯುವಂತೆನಿಸಿ ಕೆಳಗೆ ಸಿಂಹಿಕೆಯನ್ನು ನೋಡಿ, ಒಂದೇ ಮುಷ್ಟಿ ಘಾತದಿಂದ ಅವಳನ್ನು ಕೊಂದನು.



ಹನುಮಂತನು ಲಂಕಾನಗರವನ್ನು ಪ್ರವೇಶ ಮಾಡಿದನು. ಮಣಿ ದೀಪಗಳೊಂದಿಗೆ ಬೆಳಗುವ ಉನ್ನತೋನ್ನತವಾದ ಸೌಧಗಳಿಂದ ಕಣ್ಣುಗಳನ್ನು ಮಿರಿಮಿರಿಗೊಳಿಸುವ ಲಂಕಾನಗರದ ಸೌಂದರ್ಯವನ್ನೂ, ವೈಭವವನ್ನೂ ನೋಡಿ ಹನುಮಂತನಿಗೆ ಆಶ್ಚರ್ಯವಾಯಿತು. ಅಲ್ಲಿ ಸೀತೆಯನ್ನು ಎಲ್ಲೆಂದು ಹುಡುಕುವುದು ?

ಹನುಮಂತನು ಸೂಕ್ಷ್ಮರೂಪದಿಂದ ಸೀತಾದೇವಿಯನ್ನು ಹುಡುಕುತ್ತಾ ಲಂಕಾನಗರದೊಳಗೆಲ್ಲಾ ತಿರುಗಿದನು. ರಾವಣಾಸುರನ ದೊಡ್ಡ ದೊಡ್ಡ ಅಂತಃಪುರದೊಳಗೆಲ್ಲಾ ಹೊಕ್ಕು ಹುಡುಕುವಾಗ ಮಂಡೋದರಿಯನ್ನು ನೋಡಿ,ಸೀತೆಯೆಂದು ಭ್ರಮಿಸಿ ಮರು ನಿಮಿಷದಲ್ಲಿ ತನ್ನ ತಪ್ಪನ್ನು ಅರಿತುಕೊಂಡನು.

ಅಲ್ಲೆಲ್ಲಿಯೂ ಸೀತೆಯ ಜಾಡು ಕಾಣಲಿಲ್ಲ. ಹಾಗೆಯೇ ಬಿಡದೆ ಹುಡುಕುತ್ತಾ ಅಶೋಕವನಕ್ಕೆ ಹೋದನು. ಅಲ್ಲಿ ಹನುಮಂತನು ಮರದಿಂದ ಮರಕ್ಕೆ ತಿರುಗುತ್ತಾ ಇರಲು, ಶಾಂತ ಸ್ವರದಲ್ಲಿ ಹೊರಡುವ ರಾಮನಾಮಸ್ಮರಣೆ ಅವನ ಕಿವಿಗೆ ಬಿದ್ದಿತು.

ಚಂದ್ರಶಿಲಾ ನಿರ್ಮಿತವಾದೊಂದು ಮಂಟಪದಲ್ಲಿ ಸೀತೆ ರಾಮನನ್ನೇ ಧ್ಯಾನಿಸುತ್ತಾ, ಕಣ್ಣೀರು ಸುರಿಸಿಕೊಂಡು ಕುಳಿತಿದ್ದಳು. ದೊಡ್ಡ ದೊಡ್ಡ ಭಲ್ಲೆಗಳನ್ನೂ ಕತ್ತಿಗಳನ್ನೂ ಬೇರೆ ಬೇರೆ ಆಯುಧಗಳನ್ನೂ ಧರಿಸಿಕೊಂಡಿದ್ದ ರಾಕ್ಷಸ ಸ್ತ್ರೀಯರು ಆ ಮಂಟಪದ ಸುತ್ತಲೂ ಕಾವಲಾಗಿದ್ದರು.

ಹನುಮಂತನು ಮಂಟಪದ ಪಕ್ಕದಲ್ಲಿದ್ದ ಶಿಂಶುಪಾ ವೃಕ್ಷದಲ್ಲಿ ಎಲೆ ತುಂಬಿದ ಕೊಂಬೆಗಳ ನಡುವೆ ಕುಳಿತು ನೋಡುತ್ತಿದ್ದನು.

ಸೀತೆ ಮಂಟಪದಿಂದ ಎದ್ದು, ಪಕ್ಕದಲ್ಲಿದ್ದ ಅಶೋಕ ವೃಕ್ಷದ ಕೆಳಗೆ ಬಂದು ಕುಳಿತಳು.

ಆಗ ರಾವಣನು ದೊಡ್ಡ ಪಟಾಟೋಪಗಳಿಂದ ಅಶೋಕವನದೊಳಗೆ ಬರುವುದು ಕಂಡಿತು. ಅವನ ಜತೆಯಲ್ಲಿ ದೇವ, ಗಂಧರ್ವ, ನಾಗ, ಯಕ್ಷ, ರಾಕ್ಷಸ, ಮಾನವ ಸುಂದರೀಮಣಿಯರ ಗುಂಪು ಕೂಡಾ ಅವನ ವೈಭವವನ್ನು ಕೀರ್ತಿಸಿಕೊಂಡು ಬರುತ್ತಿದ್ದಿತು.

ರಾವಣನು ಅಶೋಕವೃಕ್ಷದ ಹತ್ತಿರ ಬಂದು, ಸೀತೆಯ ಮುಂದೆ ನಿಂತು. "ಓ ಸೀತಾ! ಈಗಲಾದರೂ ನನ್ನ ಮಾತನ್ನು ಕೇಳು. ಕ್ಷುದ್ರ ಮಾನವನಾದ ರಾಮನನ್ನು ನಂಬಿಕೊಂಡಿರಬೇಡ, ರಾಮನು ಈ ಲಂಕಾನಗರಕ್ಕೆ ಬರುವನೆಂಬುದು ಬರೇ ಸ್ವಪ್ನ ! ಬುದ್ಧಿ ತಂದುಕೋ !" ಎಂದನು.

ಸೀತೆ ಒಂದು ಹುಲ್ಲು ಕಡ್ಡಿಯನ್ನೆತ್ತಿ ತನ್ನ ಮುಂದೆ ಹಾಕಿ, ಅದರೊಂದಿಗೆ ಮಾತಾಡುವಂತೆ, "ಓ ರಾವಣಾ ! ನಿನ್ನ ಪ್ರಗಲ್ಭದ ಮಾತುಗಳಿಗೂ, ಬಲ ದರ್ಪಗಳಿಗೂ ನಾನು ಬಾಗುವೆನೆಂದುಕೊಳ್ಳುವುದೇ ಕೇವಲ ಸ್ವಪ್ನ. ನೀನು ದೊಡ್ಡ ಕಳ್ಳ ! ನಿನ್ನನ್ನು ತಕ್ಕ ಹಾಗೆ ಶಿಕ್ಷಿಸಬೇಕಾದುದು ರಾಜನಾದ ರಾಮನಿಗೆ ಕರ್ತವ್ಯ ಧರ್ಮ. ದಶಕಂಠಗಳನ್ನೂ ಶೋಷಿಸಿ



ಕೊಂಡು ಏನೇನೋ ಗಳಹಬೇಡ. ರಾಮನು ಬಂದು ನಿನ್ನನ್ನು ಹತಮಾಡುವುದಕ್ಕೆ ಮೊದಲೇ ನಿನ್ನ ಆಸೆಗಳನ್ನೆಲ್ಲ ತೀರಿಸಿಕೋ. ಸುಮ್ಮನೆ ನಿನ್ನ ಅಂತಃಪುರಕ್ಕೆ ಹೋಗಿಬಿಡು. ಬೇಗದಲ್ಲೇ ನಿನಗೆ ಅಂತ್ಯ ಕಾಲ ಕಾದಿದೆ !" ಎಂದಳು ತಿರಸ್ಕಾರದಿಂದ.

ಸೀತೆಯ ಮಾತು ಕೇಳಿ ರಾವಣನು ಅಸಹನೆಯಿಂದ ದೊಡ್ಡ ಗಂಡುಗತ್ತಿಯನ್ನೆತ್ತಿ "ನಿನ್ನನ್ನು ಈಗಲೇ ಚೂರು ಚೂರು ಮಾಡಿ ಹಾಕಿಬಿಡುತ್ತೇನೆ !" ಎಂದು ಹೂಂಕರಿಸಿದನು,

"ಹಾಗೆ ಮಾಡಲು ನಿನ್ನಿಂದಾಗದು. ಹೀಗೆ ಹೆದರಿಸಿದರೆ ನಾನು ನಿನಗೆ ವಶಳಾಗುವೆನೆಂದು ನಿನ್ನಷ್ಟಕೆ ನೀನು ಅಂದುಕೊಂಡಿರುವಿ. ರಾಮನ ಹೆಂಡತಿ ರಾವಣನ ಪ್ರತಾಪ ವೈಭವಗಳನ್ನು ನೋಡಿ ಬಾಗಿಹೋಗುವವಳೆಂದು ನೀನು ತಿಳಿಯಲು ಕಾರಣ ನಿನ್ನ ಕುರುಡುತನ! ದುರಹಂಕಾರ ! ದುರಾಕಾಂಕ್ಷೆ !" ಎಂದಳು ಸೀತೆ.

"ಹೌದು. ನಮ್ಮ ರಾಕ್ಷಸವನಿತೆಗೆ ನಡೆದ ಪರಾಭವಕ್ಕೆ ಅದೇ ಸರಿಯಾದ ಪ್ರತೀಕಾರ ! ಅದೇ ನನ್ನ ಹಟ !" ಎಂದನು ರಾವಣ.

"ಹಟವಲ್ಲ, ಮೋಸ! ನೀನು ರಾಮನನ್ನು ಇದಿರಿಸಿ ನನ್ನನ್ನು ಎತ್ತಿಕೊಂಡು ಹೋಗಬೇಕಿತ್ತು. ನೀನೊಬ್ಬ ಮಹಾಪುಕ್ಕನು ! ರಣಹೇಡಿ ! ರಾಮನು ನಿನ್ನನ್ನು ಸಂಹರಿಸಲೇ ಬೇಕು. ಸಂಹರಿಸಿ ತೀರುತ್ತಾನೆ! ಇದು ನನ್ನ ಹಟ !" ಎಂದಳು ಸೀತೆ.

ರಾವಣನು ಭಸುಗುಡುತ್ತಾ ಅಲ್ಲಿಂದ ಹೊರಟು ಹೋದನು. ಮಂಡೋದರಿ ಅವನನ್ನು ಸಮಾಧಾನಪಡಿಸಿ ರಮಿಸುತ್ತಾ ಕರೆದೊಯ್ದಳು.

ಅನಂತರ ಹನುಮಂತನು ರಾಕ್ಷಸ ಸ್ತ್ರೀಯರು ತೂಕಡಿಸಿ ನಿದ್ರಿಸಿಬೀಳುವ ಸಮಯನೋಡಿ, ಮರದಿಂದಿಳಿದು ಸೀತೆಗೆ ತನ್ನ ಸಂಗತಿಯನ್ನು ಹೇಳಿ, ರಾಮನು ಕೊಟ್ಟ ಉಂಗುರವನ್ನು ಅವಳಿಗೆ ಕೊಟ್ಟನು. ಆಕಾಶದ ನಕ್ಷತ್ರಗಳೆಲ್ಲ ತನ್ನ ತಲೆಯ ಹುವ್ವಗಳಾಗುವಂತೆ ಬ್ರಹ್ಮಾಂಡವಾದ ತನ್ನ ವಿಶ್ವರೂಪವನ್ನು ಹನುಮಂತನು ಸೀತೆಗೆ ತೋರಿಸಿದನು. ತನ್ನ ಹೆಗಲ ಮೇಲೆ ಕುಳಿತುಕೊಂಡರೆ ಅವಳನ್ನು ರಾಮನ ಬಳಿಗೆ ಒಯ್ಯುವುದಾಗಿಯೂ ಹೇಳಿದನು.

ಅದಕ್ಕೆ ಸೀತೆ, "ಹನುಮಾ ! ಅದು ಸರಿಯಾದ ಪದ್ಧತಿಯಲ್ಲ, ರಾಮನು ರಾವಣನನ್ನು ಸಂಹಾರ ಮಾಡಿ ನನ್ನನ್ನು ಬಿಡಿಸಿಕೊಂಡು ಹೋಗಬೇಕು. ಅದುವರೆಗೆ ಸೀತೆ ಅಶೋಕವನದಲ್ಲಿ ಶೋಕಿಸಿಕೊಂಡಿರುವಳೆಂದು ನೀನು ರಾಮನೊಂದಿಗೆ ಹೇಳು." ಎಂದು ಹೇಳಿ ಸೀತೆ ತನ್ನ ಸೆರಗಿನಲ್ಲಿ ಕಟ್ಟಿಕೊಂಡಿದ್ದ ಚೂಡಾಮಣಿಯನ್ನು ತೆಗೆದು ರಾಮನಿಗೆ ಕೊಡಲು ಹೇಳಿ ಹನುಮಂತನ ಕೈಗೆ ಕೊಟ್ಟಳು.

ತಾನು ಲಂಕೆಗೆ ಬಂದು ಹೋದ ಸಂಗತಿ ರಾಕ್ಷಸರಿಗೆ ಗೊತ್ತಾಗಬೇಕೆಂದು ಹನುಮಂತನು ಸುಂದರವಾದ ಅಶೋಕವನವನ್ನು ಧ್ವಂಸ ಮಾಡಿದನು. ಆಗ ತನ್ನನ್ನು



ಕೊಲ್ಲಲು ರಾವಣನು ಕಳುಹಿಸಿದ ಜಂಬುಮಾಲಿ, ಅಕ್ಷಕುಮಾರರನ್ನೂ, ಅವರೊಂದಿಗೆ ಬಂದ ಸಾವಿರಾರು ರಾಕ್ಷಸರನ್ನೂ ಕೊಂದು ಹಾಕಿದನು.

ಕಡೆಗೆ ರಾವಣನ ಹಿರಿಯ ಮಗನಾದ ಇಂದ್ರಜಿತ್ತು ಬ್ರಹ್ಮಾಸ್ತ್ರವನ್ನು ಹನುಮಂತನ ಮೇಲೆ ಪ್ರಯೋಗಿಸಿದನು. ಬ್ರಹ್ಮನ ಮೇಲಿನ ಗೌರವದಿಂದ ಹನುಮಂತನು ಕೆಲವು ಕ್ಷಣ ಆ ಅಸ್ತ್ರಕ್ಕೆ ಬದ್ಧನಾಗಿ, ರಾವಣನನ್ನು ನೋಡಿ ನಾಲ್ಕು ಬುದ್ಧಿ ಮಾತು ಹೇಳಬೇಕೆಂದು, ರಾಕ್ಷಸ ಭಟರಿಂದ ಕಟ್ಟಿಸಿಕೊಳ್ಳಲ್ಪಟ್ಟು, ರಾವಣನ ಸಭೆಗೆ ಹೋದನು.

ರಾವಣನು ಎತ್ತರವಾದ ಸಿಂಹಾಸನದ ಮೇಲಿನಿಂದ, ಕೆಳ ಭಾಗದಲ್ಲಿ ಕಬ್ಬಿಣದ ಸಂಕಲೆಗಳಿಂದ ಕಟ್ಟಲ್ಪಟ್ಟು ನಿಂತ ಹನುಮಂತನನ್ನು ಬಾಗಿ ಪರಿಹಾಸವಾಗಿ ನೋಡಿದನು.

ಕೂಡಲೇ ಹನುಮಂತನು ಶರೀರವನ್ನು ಬೆಳೆಸಿ ಸಂಕಲೆಗಳನ್ನು ಕಡಿದುಕೊಂಡು, ರಾವಣನ ತಲೆ ಮುಟ್ಟುವಷ್ಟು ಎತ್ತರದವರೆಗೆ ತನ್ನ ಬಾಲವನ್ನು ಸುರುಳಿಯಾಗಿ ಸುತ್ತಿಕೊಂಡು ಅದರ ಮೇಲೆ ಕುಳಿತುಕೊಂಡನು.

ಕೋಪದಿಂದ ನೋಡುವ ರಾವಣನನ್ನು ನೋಡಿ ಹನುಮಂತನು, " ಎಲವೋ ರಾಕ್ಷಸರಾಜ ರಾವಣಾ! ನಾನು ರಾಮನ ದೂತನು. ರಾಮನು ಕೋತಿಗಳನ್ನೇ ಮಹಾವೀರರಂತೆ ನಡೆಯಿಸಿ ನಿನ್ನ ಈ ಲಂಕೆಯನ್ನು ಮುತ್ತಿಗೆ ಹಾಕಬಲ್ಲ ಸಮರ್ಥನಾದ ಮಾನವ ಶ್ರೇಷ್ಠನೆಂದು ತಿಳಿ ! ದೊಡ್ಡ ಬಲ ನಿನಗಿರುವುದೆಂದು ಗರ್ವಿಸಿ ಬೀಗಬೇಡ. ಬಲಿಷ್ಠವಾದ ಸರ್ಪವು ಸಣ್ಣ ಇರುವೆಗಳಿಂದ ಹೇಗೆ ಸಾಯುವುದೋ ನಿನಗೆ ಗೊತ್ತಿಲ್ಲದ ಸಂಗತಿಯಲ್ಲ, ಸೀತೆಯನ್ನು ರಾಮನಿಗೆ ಒಪ್ಪಿಸಿ, ಕ್ಷಮಿಸಬೇಕೆಂದು ಬೇಡಿಕೋ " ಎಂದು ಹೇಳಿದನು,

ಅದನ್ನು ಕೇಳಿ ರಾವಣನು ಮಹಾಕೋಪದಿಂದ ಕಣ್ಣುಗಳಿಂದ ಕೆಂಗಿಡಿ ಉದುರಿಸುತ್ತ, ಕತ್ತಿಯನ್ನು ಎತ್ತಿದನು. ಆಗ ವಿಭೀಷಣನು ರಾವಣನನ್ನು ನೋಡಿ, "ದೂತನನ್ನು ಕೊಲ್ಲುವುದು ಧರ್ಮವಲ್ಲ. ಪೌರುಷವೂ ಅಲ್ಲ" ಎಂದು ಎಚ್ಚರಿಸಿದನು.

"ಹಾಗಾದರೆ ಈ ವಾನರನಿಗೆ ಈ ಬಾಲದ ಗರ್ವ ಅಳಿದು ಹೋಗುವ ಹಾಗೆ ಬಾಲಕ್ಕೆ ಬಟ್ಟೆ ಸುತ್ತಿ ಎಣ್ಣೆ ಸುರಿದು ಬೆಂಕಿ ಹಚ್ಚಿಸುಟ್ಟು ಹಾಕಿ ಬಿಡಿರಿ " ಎಂದು ಆಜ್ಞೆ ಮಾಡಿದನು ರಾವಣ.

ರಾಕ್ಷಸ ಭಟರು ಹನುಮಂತನ ಬಾಲಕ್ಕೆ ಬಟ್ಟೆಗಳನ್ನು ಸುತ್ತುತ್ತಿದ್ದಂತೆ ಬಾಲವು ಬೆಳೆದುಕೊಂಡೇ ಹೋಯಿತು. ಎಷ್ಟು ಎಣ್ಣೆ ಸುರಿದರೂ ಸಾಲದಾಯಿತು. ಅಂತೂ ಬೆಂಕಿ ಹಚ್ಚಿದರು, ಹನುಮಂತನು ಶರೀರವನ್ನು ಬೆಳೆಸಿ ಸಿಂಹನಾದ ಮಾಡಿ ಚಂಗನೆ ಹಾರಿದನು.

ಉರಿಯುವ ಬಾಲವನ್ನು ದೊಂದಿಯ ಹಾಗೆ ಗಿರಿಗಿರಿ ತಿರುಗಿಸುತ್ತ, ಸೌಧಗಳ ಮೇಲಿನಿಂದ ಸೌಧಕ್ಕೆ ಹಾರುತ್ತ, ಹನುಮಂತನು ಲಂಕಾಪಟ್ಟಣ

ವನ್ನೆಲ್ಲಾ ಅಗ್ನಿಗೆ ಆಹುತಿ ಮಾಡಿದನು. ಅವನಿಗೆ ಅಗ್ನಿ ತಣ್ಣಗೆ ಸ್ಪರ್ಶವಾಗುತ್ತಿತ್ತು. ಬಹು ದಾರುಣ ವಾಗಿ ಲಂಕಾದಹನವಾಯಿತು. ರಾವಣನ ಅಂತಃ ಪುರದ ಸೌಧಗಳೆಲ್ಲಾ ಸುಟ್ಟು ಕರಕಾಗಿ ಹೋದುವು. ಅನೇಕಮಂದಿ ರಾಕ್ಷಸರು ಸತ್ತರೂ. ವಿಭೀಷಣನ ಭವನವನ್ನು ಮಾತ್ರ ಹನುಮಂತನು ಸುಡದೆ ಬಿಟ್ಟಿದ್ದನು.

ಹನುಮಂತನು ಅಶೋಕವನಕ್ಕೆ ಹೋಗಿ ಸೀತೆ ಕ್ಷೇಮವಾಗಿರುವುದನ್ನು ನೋಡಿ, ಅಲ್ಲಿಂದ ಸಮುದ್ರದ ಬದಿಗೆ ಹಾರಿ ಹೋಗಿ ಬಾಲವನ್ನು ಸಮುದ್ರದಲ್ಲಿ ಮುಳುಗಿಸಿ, ಬೆಂಕಿಯನ್ನು ಆರಿಸಿಕೊಂಡು, ಸೀತೆಯ ಚೂಡಾಮಣಿಯೊಂದಿಗೆ ಸಮುದ್ರವನ್ನು ದಾಟಿದನು, ಅಲ್ಲಿ ಅವನನ್ನು ನಿರೀಕ್ಷಿಸಿಕೊಂಡಿದ್ದ ವಾನರರೊಂದಿಗೆ ರಾಮನ ಬಳಿಗೆ ಹೋಗಿ ಚೂಡಾಮಣಿಯನ್ನು ರಾಮನಿಗೆ ಕೊಟ್ಟನು.

ರಾಮನು ಚೂಡಾಮಣಿಯನ್ನು ನೋಡಿ, ಸೀತೆ ಯನ್ನು ನೋಡಿದ ಹಾಗೆ ಅದನ್ನು ತನ್ನೆದೆಗೆ ಒತ್ತಿ ಕೊಂಡನು. ಹನುಮಂತನು ಸೀತೆಯ ಸಮಾಚಾರ ವನ್ನೆಲ್ಲಾ ರಾಮನೊಂದಿಗೆ ಹೇಳಿದನು.

ರಾಮನು ಹನುಮಂತನನ್ನು ಆಲಿಂಗನ ಮಾಡಿ ಕೊಂಡು, "ಹನುಮಾ, ನೋಡಿ ಬಾರೆಂದರೆ ಸುಮ್ಮನೆ ಬಾರದೆ ಸುಟ್ಟು ಹಾಕಿ ಬಂದಿರುವಿ! ನಿನ್ನಂಥವನ ಸಹಾಯವಿರುವಾಗ, ನಾನು ಸಾಧಿಸಲಾಗದ ಕಾರ್ಯ ಯಾವುದಿದ್ದೀತು! ಸೀತೆಗೂ ನನಗೂ ಸಂಧಾನಕರ್ತ ನಾಗಿ ಆನಂದದಾಯಕನಾಗಿರುವಿ! ಬುದ್ಧಿವಂತನಪ್ಪಾ ನೀನು, ಒಳ್ಳೆಯ ಕೀರ್ತಿಶಾಲಿ ನೀನು!" ಎಂದನು.

ರಾಮನು ಕೋದಂಡವನ್ನು ಎತ್ತಿ ಹಿಡಿದು, ಸೀತೆ ಹೇಳಿದಂತೆ ರಾವಣ ಸಂಹಾರಕ್ಕೆ ದೀಕ್ಷಾ ಕಂಕಣ ಬದ್ಧನಾದನು.

ವಿಭೀಷಣನು ರಾವಣನ ಸವತಿ ತಮ್ಮನು. ರಾಮ ನೊಂದಿಗೆ ವೈರ ಕಟ್ಟಿಕೊಳ್ಳಬೇಡವೆಂದೂ, ಸೀತೆಯನ್ನು ಗೌರವದಿಂದ ಕರೆದೊಯ್ದು ರಾಮನಿಗೆ ಒಪ್ಪಿಸ ಬೇಕೆಂದೂ ವಿಭೀಷಣನು ರಾವಣನಿಗೆ ಬುದ್ಧಿ ಹೇಳಿದನು.

"ನಿನ್ನೊಬ್ಬನ ಹಟದಿಂದ ರಾಕ್ಷಸ ಕುಲಕ್ಕೆ ಮುಪ್ಪು ತರುವುದು ಅನ್ಯಾಯ!" ಎಂದು ವಿಭೀಷಣನು ಹೇಳಿದುದಕ್ಕೆ ರಾವಣನು ಕ್ರುದ್ಧನಾಗಿ "ಎಲೋ ಹೇಡಿಯೇ! ನೀನು ರಾಕ್ಷಸಕುಲದಲ್ಲಿ ತಪ್ಪಿ ಹುಟ್ಟಿ ದವನು! ಶೂರ್ಪಣಖೆಗಾದ ಪರಾಭವವು ರಾಕ್ಷಸ ಕುಲಕ್ಕೇ ಆದ ಪರಾಭವ! ನೀನೊಬ್ಬ ಕುಲದ್ರೋಹಿ! ಈಗಲೇ ಲಂಕೆಯನ್ನು ಬಿಟ್ಟು ಹೋಗು! ಮತ್ತೆ ಕಾಣಿಸಿದರೆ ಚಿತ್ರವಧೆ ಮಾಡಿಸಿಬಿಡುತ್ತೇನೆ, ನಡೆ!" ಎಂದನು ಕ್ರೂರನಾಗಿ.

ವಿಭೀಷಣನು ತನ್ನ ಅನುಚರರೊಂದಿಗೆ ಲಂಕೆ ಯನ್ನು ಬಿಟ್ಟು ಹೊರಟನು.






ವಿಭೀಷಣನು ರಾವಣನಿಗೆ ಹೇಳಿದ ಹಾಗೆಯೇ ರಾವಣನ ಪಟ್ಟಮಹಿಷಿಯಾದ ಮಂಡೋದರಿ ಕೂಡಾ ಗಂಡನಿಗೆ ಹಿತವಾದುದನ್ನು ಹೇಳತೊಡಗಿದಳು. "ನಾಥಾ, ಮೂಗು ಕಿವಿಗಳನ್ನು ಛಾಸಿ ಮಾಡಿದರೆಂತಲೋ, ತನ್ನನ್ನು ವರಿಸಿಕೊಳ್ಳಲು ಅವರು ಒಪ್ಪಲಿಲ್ಲವೆಂತಲೋ ನಿನ್ನ ತಂಗಿ ಅವಮಾನ ತಾಳಲಾಗದೆ ಹೋದಾಗ, ಹಾಗೆಯೇ ಏಕಾಂಗಿನಿಯಾಗಿ, ಅಸಹಾಯಳಾಗಿದ್ದ ಸೀತೆಯನ್ನು ನೀನು ಬಂಗಾರವನ್ನೋ, ಪಶುವನ್ನೋ, ಪಕ್ಷಿಯನ್ನೋ ಎತ್ತಿಕೊಂಡು ಬಂದ ಹಾಗೆ ಮಾಡಿದ ಕೆಲಸಕ್ಕೆ ಸೀತೆ ಎಷ್ಟು ಸಂಕಟಪಡುವಳೆಂದು ಯೋಚಿಸಿದೆಯಾ? ಶೂರ್ಪಣಖೆ ಪ್ರತೀಕಾರ ಮಾಡಲು ಸೀತೆಯನ್ನು ಎತ್ತಿಕೊಂಡು ಬರಲು ಹೇಳಿದಂತೆ, ಸೀತೆಗೂ ತನಗೆ ನಡೆದ ಅವಮಾನಕ್ಕೆ ಇನ್ನೆಷ್ಟು ದೊಡ್ಡ ಪ್ರತೀಕಾರವಾಗಬೇಕೆಂದು ನೋಡುವಳೋ! ಇದನ್ನು ನೀನು ಆಲೋಚಿಸಬೇಕು ನಾಥಾ! ಅವಳ ಹಾಗೆಯೇ ಇವಳೂ ಸ್ತ್ರೀಯಲ್ಲವೇ?" ಎಂದಳು.

ಆ ಮಾತಿಗೆ ರಾವಣನು, "ಹೌದು ಮಂಡೋದರೀ. ಅದೆಲ್ಲಾ ನಿಜವೇ; ಅಲ್ಲವೆನ್ನಲಾರೆ. ಅದರೆ ಏನು ಬೇಕಾದರೂ ಆಗಲಿ. ರಾವಣನು ತಲೆ ಬಾಗಿದನೆಂದು ಆಗಲು ಸಾಧ್ಯವೇ ಇಲ್ಲ. ನಿನ್ನ ಗಂಡ ಭೀರುವಲ್ಲ. ನನ್ನಂಥವನ ಹೆಂಡತಿಯಾದ ನೀನು ನನಗೆ ಪುಕ್ಕಲು ಮದ್ದು ಅರೆದು ಹಚ್ಚಬೇಡ. ಆ ರಾಮನು ಏನು ಮಾಡುವನೆಂದು ನಾನೂ ನೋಡುತ್ತೇನೆ" ಎಂದನು.

ಇಲ್ಲಿ ಹೀಗಿರುವಾಗ ಅಲ್ಲಿ ರಾಮನ ಹತ್ತಿರ ಎಲ್ಲೆಲ್ಲಿದ್ದ ವಾನರರೆಲ್ಲಾ ಬಂದು ಸೇರುತ್ತಿದ್ದ ಹಾಗೆ, ಬ್ರಹ್ಮಾಂಡದಂತಹ ವಾನರ ಸೇನೆ ತಯಾರಾಯಿತು. ಸುಗ್ರೀವ, ನೀಲ, ಅಂಗದ, ಸುಷೇಣ, ಜಾಂಬವಂತ ಮೊದಲಾದ ಪ್ರಮುಖರೆಲ್ಲಾ ಸೇನೆಗೆ ನಾಯಕರಾಗಿ ರಾಮನ ಸುತ್ತಲೂ ನಿಂತರು. ಹನುಮಂತನು ರಾಮನ ಮುಖ್ಯ ಕಾರ್ಯದರ್ಶಿಯಾದನು. ರಾಮಲಕ್ಷ್ಮಣರ ಅಂಗರಕ್ಷಕನೂ ಹನುಮಂತನೇ. ಹೀಗೆ ಲಂಕೆಯ ಮೇಲೆ ದಾಳಿ ಪ್ರಾರಂಭವಾಯಿತು.

## ೧೪. ರಾವಣ ಸಂಹಾರ



ಹನುಮಂತನೇ ಮೊದಲಾದ ವಾನರರು ಗುಡ್ಡಗಳನ್ನೂ, ಹೆಬ್ಬಂಡೆಗಳನ್ನೂ ಎತ್ತಿ ತಂದು ಸಮುದ್ರಕ್ಕೆ ಹಾಕಿದರು. ಬಂಡೆಗಳೂ, ಕಲ್ಲುಗಳೂ, ಮರಗಳೂ ಸಹಸ್ರಾರು ಕೋತಿಗಳ ತಲೆಯ ಮೇಲಿಂದ ಬಂದು ಬಂದು ಮೇಲಿಂದ ಮೇಲೆ ಸಮುದ್ರದಲ್ಲಿ ಬಿದ್ದುವು.

ಲಂಕೆಗೆ ಸಮುದ್ರದ ಮೇಲೆ ನೂರು ಯೋಜನ ಉದ್ದವಾದ ಸೇತುವೆ ನಿರ್ಮಾಣವಾಯಿತು. ನೀಲನು ನಿರ್ಮಾಣದ ಪರೀಕ್ಷೆಯನ್ನು ಮಾಡಿ ಸೇತುವೆ ಸಮುದ್ರದಲ್ಲಿ ತೇಲಿಕೊಂಡಿರುವ ಹಾಗೆ ನೋಡಿಕೊಂಡನು. ಏನನ್ನು ನೀರಿಗೆ ಹಾಕಿದರೂ ತೇಲುತ್ತಿರುವಂತೆ ಅವನಿಗೆ ಸಿಕ್ಕಿದ್ದ ಒಂದು ವರವು ಇದಕ್ಕೆ ಉಪಯೋಗವಾಯಿತು.

ಈ ಸಮಯದಲ್ಲೇ ರಾವಣನಿಂದ ಹೊರಗೆ ಅಟ್ಟಲ್ಪಟ್ಟ ವಿಭೀಷಣನು ಆಕಾಶ ಮಾರ್ಗದಲ್ಲಿ ಬಂದು ರಾಮನಲ್ಲಿ ಶರಣಾಗತನಾದನು. ರಾಮನು ಅವನಿಗೆ ಅಭಯವಿತ್ತು, ಲಂಕೆಗೆ ಅವನನ್ನೇ ರಾಜನನ್ನಾಗಿ ಮಾಡುವೆನೆಂದು ಮಾತುಕೊಟ್ಟು, ಅದರಲ್ಲಿ ರವಷ್ಟೂ ಸಂದೇಹವಿಲ್ಲದ ಹಾಗೆ ಆಗಿಂದಾಗಲೇ ಸಮುದ್ರ ಜಲದಿಂದ ಅವನಿಗೆ ಲಂಕಾ ರಾಜ್ಯದ ಪಟ್ಟಾಭಿಷೇಕವನ್ನೂ ಮಾಡಿದನು.

ರಾಮನು ಎರಡು ಕೈಗಳಲ್ಲಿಯೂ ಕೋದಂಡ ಮತ್ತು ರಾಮಬಾಣಗಳನ್ನು ಧರಿಸಿ ಸೇತುವೆಯ ಮೇಲಿಂದಾಗಿ, ವಾನರ ಸೇನೆಯೊಂದಿಗೆ ಲಂಕೆಗೆ ಹೊರಟನು. ಅವರ ಜತೆಯಲ್ಲಿ ಭಾವೀ ಲಂಕಾ ರಾಜ ವಿಭೀಷಣನೂ ಇದ್ದನು.

ರಾವಣನ ಗೂಢಚಾರರು ರಾಮನು ವಾನರ ಸೇನೆಯನ್ನು ಸಾಗಿಸಿಕೊಂಡು ಸಮುದ್ರವನ್ನು ದಾಟಿ ಬರುತ್ತಾ ಇದ್ದಾನೆಂದು ರಾವಣನೊಂದಿಗೆ ಹೇಳಿದರು. ಆ ವಾರ್ತೆಯನ್ನು ಕೇಳಿ ನಂಬಲಾಗದೆ ರಾವಣನು ಚಕಿತನಾದನು. ನರಮನುಷ್ಯನೊಬ್ಬನು ವಾನರರ ಗುಂಪನ್ನು ಕಟ್ಟಿಕೊಂಡು, ಸಮುದ್ರದ ಮೇಲೆ ನೂರು ಯೋಜನ ಉದ್ದದ ಸೇತುವೆ ಕಟ್ಟಿ ಬಂದು, ಮೂರು ಲೋಕಗಳನ್ನೂ ನಡುಗಿಸುವ ರಾವಣನಂಥವನನ್ನು ಹೊಡೆದು ತನ್ನ ಸೊತ್ತಾದ ಹೆಂಡತಿಯನ್ನು ತಂದುಕೊಂಡನೆಂದು ಹೇಳುವ ಹಾಗಾಗುವುದುಂಟೆ! ಏನಾಶ್ಚರ್ಯವಿದು! ನಿಜಕ್ಕೂ ಹೀಗೊಂದು ಕಾರ್ಯ ನಡೆದೀತೆ? ಗೂಢಚಾರರು ಏನನ್ನು ನೋಡಿ ಭ್ರಮಿಸಿಗಳಹುವರೋ?

ಹೀಗೆ ರಾವಣನು ಅನುಮಾನ ಪಡುತ್ತಿರುವಾಗ, ಮಂತ್ರಿ ಪ್ರಹಸ್ತನು ಆ ವಾರ್ತೆ ತಿಳಿದು ರಾವಣನ ಬಳಿಗೆ ಬಂದು, "ನಾವು ಇಲ್ಲಿಗೆ ಬರುವ ಶತ್ರುವನ್ನು ದಾರಿಯಲ್ಲಿಯೇ ಇದಿರಿಸಿ ಸಮುದ್ರದೊಳಗೆ ಮುಳುಗಿಸಿಬಿಡುವುದು ಒಳ್ಳೆಯದೆಂದು ನನ್ನ ಅಭಿಪ್ರಾಯ" ಎಂದನು.

ರಾವಣನು ನಕ್ಕು, "ಏಕೆ ಆತುರ ಪಡುವಿರಿ? ನಮ್ಮ ಕುಂಭಕರ್ಣನಿಗೆ ಸಾಕಾಗುವಷ್ಟು ಆಹಾರ

ಸಿಗುವುದಿಲ್ಲ. ಅವರೆಲ್ಲ ಲಂಕೆಗೆ ಬರಲಿ. ಜೇಡನ ಬಲೆಯೊಳಗೆ ಸಿಕ್ಕಿಕೊಂಡ ನೊಣಗಳ ಹಾಗೆ ಅವರೆಲ್ಲ ನನ್ನ ತಮ್ಮನ ಹಸಿವಿಗೆ ಉಪಯೋಗವಾಗುತ್ತಾರೆ. ಕುಂಭಕರ್ಣನಂತಹ ದೊಡ್ಡ ಜಗೋದರನೇ ನಮ್ಮಲ್ಲಿ ರುವಾಗ ಹೆದರುವಿರೇಕೆ ? " ಎಂದನು.

ರಾಮನು ಮಹಾ ವಾನರ ಸೇನೆಯೊಂದಿಗೆ ನಿರಾ ತಂಕವಾಗಿ ವಾರಿಧಿಯನ್ನು ದಾಟಿ ಲಂಕಾ ತೀರವನ್ನು ಸೇರಿ ಅಲ್ಲೆಲ್ಲಾ ಹರಡಿಕೊಂಡನು.



ಲಂಕಾನಗರವು ಎತ್ತರವಾದ ಪರ್ವತದ ತಲೆ ಯಲ್ಲಿ ನಿರ್ಮಿಸಲ್ಪಟ್ಟಿತ್ತು. ಪರ್ವತಾಗ್ರದ ಸೌಧದ ಮೇಲೆ ರಾವಣನು ನಿಂತು ನೋಡುತ್ತಿದ್ದನು. ರಾಮನ ದಂಡು ವಿಸ್ತಾರವಾದ ಸ್ಥಳವನ್ನಾಕ್ರಮಿಸಿ ಇರುವೆ ಗಳ ಸಾಲಿನ ಹಾಗೆ ಕಂಡುವು. ಅವುಗಳ ವ್ಯೂಹ ರಚನೆಯ ಚಲನವಲನಗಳನ್ನು ರಾವಣನು ಪರೀಕ್ಷಿಸಿ ಕೊಂಡಿದ್ದನು.

ಹಾಗೆ ದೂರದಲ್ಲಿರುವ ರಾವಣನನ್ನು ನೋಡಿದ ಕೂಡಲೇ ಅಂಗದನಿಗೆ ಪೌರುಷ ಬಂದಿತು. ಅವನು ಹುಡುಗಾಟದ ಆತುರದಿಂದ, ತಾನು ಹೋಗಿ ಆ ರಾವಣನನ್ನು ತುಸು ಮಾತಾಡಿಸಿ ಬರುತ್ತೇನೆಂದು ಹೇಳಿ, ರಿವ್ವನೆ ಆಕಾಶ ಮಾರ್ಗಕ್ಕೆ ಹಾರಿ ರಾವಣಾ ಸುರನ ಸೌಧದ ಮೇಲೆ ಎರಗಿದನು.

" ಎಲೋ ರಾವಣಾ ! ಒಂದು ಕಾಲದಲ್ಲಿ ನಿನ್ನನ್ನು ಬಾಲದಲ್ಲಿ ಸುತ್ತಿ ಬಿಸುಟ ವಾಲಿಯ ಕುಮಾರನಾದ ಅಂಗದನು ನಾನು. ಆಗಿನಿಂದ ನೀನು ನನ್ನ ತಂದೆಯ ಮೇಲೆ ಗೌರವ ಮರ್ಯಾದೆಗಳನ್ನಿಟ್ಟು ಮಿತ್ರನಾಗಿ ರುವಿ. ಆದುದರಿಂದಲೇ ಹೇಳುತ್ತೇನೆ. ಈಗಾದರೂ ಸಮಯ ಮಿಂಚಿ ಹೋಗಲಿಲ್ಲ. ರಾಮನೊಂದಿಗೆ ವೈರವನ್ನು ಬಿಡು. ಶರಣು ಬೇಡಿಕೋ. ವಾನರ ಗಳ ಗುಂಪಿನೊಂದಿಗೆ ಅವನೇನು ಮಾಡಿಯಾನೆಂಬ ಅಲಕ್ಷ್ಯತೆಯಿಂದಿರಬೇಡ. ವಾನರರು ಎಂಥವರೆಂದು ನಿನಗೇನೂ ಹೇಳಬೇಕಾಗಿಲ್ಲ ! ಅಷ್ಟು ಮುಂದಿ ದೊಡ್ಡ ಸಮುದ್ರವನ್ನು ಸುಲಭವಾಗಿ ದಾಟಿ ಬಂದುದನ್ನು ನೋಡಿಯಾದರೂ ತಿಳಿದುಕೋ " ಎಂದನು.

ಆ ಮಾತು ಕೇಳಿ ರಾವಣನಿಗೆ ಕೋಪ ಬಂದು ಅಂಗದನ ಮೇಲೆ ಕತ್ತಿಯನ್ನೆತ್ತಿದನು. ಅಂಗದನು, " ನಿನ್ನ ಬುದ್ಧಿ ಅಷ್ಟೇ " ಎಂದು ರಾವಣನ ಕಿರೀಟ ವನ್ನು ಒದ್ದು ಕೆಡವಿ, ತಿರುಗಿ ಹಾರಿ ವಾನರ ಸೈನ್ಯ ವಿರುವಲ್ಲಿಗೆ ಬಂದು ಸೇರಿದನು.

ವಾನರ ಸೈನ್ಯವು ವಿಜೃಂಭಿಸಿ ಲಂಕಾ ನಗರವನ್ನು ಮುತ್ತಿಗೆ ಹಾಕಿ ರಾಕ್ಷಸ ಸೇನೆಗಳನ್ನು ಸಂಹರಿಸ ತೊಡಗಲು, ರಾವಣನು ಕುಂಭಕರ್ಣನನ್ನು ನಿದ್ದೆ ಯಿಂದ ಎಬ್ಬಿಸಿದನು. ಅರ್ಧ ನಿದ್ದೆಯಿಂದ ಎಬ್ಬಿಸಿದ ಕೋಪದಲ್ಲಿರುವ ಕುಂಭಕರ್ಣನಿಗೆ ಬೇಕಾದಷ್ಟು ಆಹಾರ ಪಾನೀಯಗಳಿಂದ ಹಸಿವೆ ತಣಿಸಿ, ಯುದ್ಧಕ್ಕೆ ಹೋಗುವಂತೆ ಆಜ್ಞೆ ಮಾಡಿದನು ರಾವಣ.

ಹಿಂದೆ ಕುಂಭಕರ್ಣನು, ತನಗೆ ಆರು ತಿಂಗಳು ತಿನಿಯೂ, ಒಂದು ದಿನ ನಿದ್ದೆಯೂ ಬೇಕೆಂದು ವರ



ಕೇಳಲು ಬ್ರಹ್ಮನನ್ನು ಕುರಿತು ತಪಸ್ಸು ಮಾಡಿದನು. ಆವನ ಉದ್ದೇಶವನ್ನು ತಿಳಿದು ಎಲ್ಲರೂ ಹೆದರಿದರು. ಸರಸ್ವತಿಯಿಂದಾಗಿ ಆವನು ಕೇಳಿದ ವರವು ತಾರು ಮಾರಾಗಿ, ಆರು ತಿಂಗಳ ನಿದ್ದೆಯೂ, ಒಂದು ದಿನ ತಿಂಡಿಯೂ ಬೇಕೆಂದು ಕೇಳಿದ್ದನು. ಬ್ರಹ್ಮನೂ ಹಾಗೆಯೇ ವರ ಕೊಟ್ಟಿದ್ದನು.

ಆರು ತಿಂಗಳ ಮೊದಲೇ ನಿದ್ರೆಯಿಂದ ಎದ್ದು ಬಿಟ್ಟರೆ ಕುಂಭಕರ್ಣನ ಶಕ್ತಿ ತಗ್ಗಿ ಹೋಗುತ್ತದೆ. ಈಗಂತೂ ಯುದ್ಧಕ್ಕೆ ಕಾರಣವಾದ ರಾವಣನು ಮಾಡಿದ ಕೆಲಸವನ್ನು ತಿಳಿದು ಕುಂಭಕರ್ಣನು ರಾವಣನ ಮೇಲೆ ಕಿನಿಸುಗೊಂಡು ಹಿತಬೋಧೆ ಮಾಡಿದನು.

ರಾವಣನು ಬೇಸರದಿಂದಲೂ ಕೋಪದಿಂದಲೂ "ಮಾಡುವುದಾದರೆ ಯುದ್ಧ ಮಾಡು. ಇಲ್ಲದಿದ್ದರೆ ಬಾಯಿ ಮುಚ್ಚಿಕೊಂಡು ಹೋಗಿ ಸುಖವಾಗಿ ಬಿದ್ದುಕೋ" ಎಂದನು.

ನಿದ್ದೆಗೆಟ್ಟ ಕೋಪದಲ್ಲಿ ಕುಂಭಕರ್ಣನು ಯುದ್ಧ ರಂಗಕ್ಕೆ ಹೋಗಿ ವಾನರರನ್ನು ಹಿಡಿದು ತಿನ್ನಲು ತೊಡಗಿದನು. ರಾಮ ಲಕ್ಷ್ಮಣರು ನಿರ್ವಿರಾಮ ವಾಗಿ ಯುದ್ಧ ಮಾಡಿದರು. ಆ ಯುದ್ಧದಲ್ಲಿ ರಾಮಬಾಣದಿಂದ ನುಸಿಬಿಖಾಂತ ರಂಧ್ರಮಯ ಶರೀರ ದವನಾದ ಕುಂಭಕರ್ಣನ ಸಂಹಾರವಾಯಿತು. ವಾನರರ ಭಯ ನೀಗಿತು.

ಆಮೇಲೆ ಯೋಧಾನುಯೋಧರಾದ ರಾವಣನ ರಾಕ್ಷಸ ಪ್ರಮುಖರೆಲ್ಲಾ ರಾಮಲಕ್ಷ್ಮಣರ ಬಾಣ ಗಳಿಂದ ನೆಲಕ್ಕೊರಗಿದರು. ರಾವಣನ ಹಿರಿಯ ಮಗನಾದ ಇಂದ್ರಜಿತ್ತು ಯುದ್ಧಕ್ಕೆ ಬಂದನು. ಆವನು ರಾವಣನಿಗಿಂತ ಹೆಚ್ಚಿನವನು.

ರಾವಣನು ಅವನ ಮೇಲೆ ಬಹು ದೊಡ್ಡ ನಂಬುಗೆ ಇಟ್ಟುಕೊಂಡಿದ್ದನು. ಆವನು ಮೇಘ ದೊಳಗಿನಿಂದ ಯುದ್ಧ ಮಾಡಬಲ್ಲವನಾದುದರಿಂದ ಮೇಘನಾದನೆನಿಸಿಕೊಂಡಿದ್ದನು. ಇಂದ್ರನನ್ನು ಜಯಿಸಿ ಕಟ್ಟಿತಂದು ಇಂದ್ರಜಿತ್ತು ಎನಿಸಿಕೊಂಡ ಮಹಾ ವೀರ. ಮಂತ್ರತಂತ್ರಗಳಲ್ಲಿ ಬಲುಗಟ್ಟಿಗ. ಮಹಾ ಮಾಯಾವಿ ಕೂಡಾ. ಹದಿನಾಲ್ಕು ವರ್ಷ ಬ್ರಹ್ಮಚರ್ಯದಲ್ಲಿದ್ದು, ನಿದ್ರಾಹಾರಗಳಿಲ್ಲದ ಕಠೋರ ದೀಕ್ಷೆಯಲ್ಲಿದ್ದವನಿಂದ ಹೊರತು, ಬೇರೆ ಯಾರ ಕೈಯಲ್ಲಿಯೂ ಆವನಿಗೆ ಸಾವು ಬರುವಂತಿಲ್ಲವೆಂದು ವರಬಲ ಪಡೆದವನು.

ಇಂದ್ರಜಿತ್ತು ಮಾಯಾ ಸೀತೆಯನ್ನು ಕಲ್ಪಿಸಿ, ರಾಮನಿಗೆ ಕಾಣುವ ಹಾಗೆ ತುಂಡು ತುಂಡಾಗಿ ಕಡಿದು ಹಾಕಿದನು. ಅದನ್ನು ನೋಡಿ ರಾಮನು ಶೋಕಿಸುವಾಗ, ಲಕ್ಷ್ಮಣನು ಅದೆಲ್ಲಾ ಮಾಯಾಜಾಲ ವೆಂದು ಅಣ್ಣನಿಗೆ ಧೈರ್ಯ ಹೇಳಿ, ತೀವ್ರವಾಗಿ ಯುದ್ಧ ಮಾಡಿದನು.

ಹಾಗೆಯೇ ರಾವಣನು ವಿದ್ಯುಜ್ಜಿಹ್ವನೆಂಬವನ ಕೈಗೆ ಮಾಯಾಜಾಲದಿಂದ ರಾಮನ ತಲೆಯೊಂದನ್ನು



ತಯಾರಿಸಿಕೊಟ್ಟು, ಶೂಲಕ್ಕೆ ಅದನ್ನು ಚುಚ್ಚಿ ಸೀತೆಗೆ ತೋರಿಸುವಂತೆ ಕಳುಹಿಸಿದನು.

ಸೀತೆ ಅದನ್ನು ನೋಡಿ, "ಇನ್ನು ನಾನು ಮೋಸ ಹೋಗಲಾರೆ. ಇಂತಹ ಕೈಗೆಲಸಗಳಿಗೆ ಬದಲಾಗಿ ನಿಜವಾದ ರಾವಣನ ತಲೆ ನೆಲಕ್ಕುರುಳುವ ದಿನ ಹತ್ತಿರ ಬಂತೆಂದೇ ಇದಕ್ಕೆ ಅರ್ಥ" ಎಂದಳು.

ಇಂದ್ರಜಿತ್ತು ಮೇಘಗಳಲ್ಲಿ ಅಡಗಿ ರಾಮಲಕ್ಷ್ಮಣರ ಮೇಲೆ ನಾಗಾಸ್ತ್ರವನ್ನು ಪ್ರಯೋಗಿಸಿದನು. ಕೂಡಲೇ ಗರುತ್ಮಂತನು ಬಂದು ನಾಗಗಳ ನಿರ್ಮೂಲ ಮಾಡಿ, ಹಾವುಗಳ ಜಾಲದಿಂದ ರಾಮಲಕ್ಷ್ಮಣರನ್ನು ಪಾರು ಮಾಡಿದನು.

ಸೀತಾರಾಮರ ಸೇವೆಯಲ್ಲಿ ತನ್ನನ್ನು ಪೂರ್ತಿ ಮರೆತು, ಹದಿನಾಲ್ಕು ವರ್ಷ ಕಠೋರ ದೀಕ್ಷೆಯಿಂದ ಕಳೆದ ಲಕ್ಷ್ಮಣನ ಕೈಯಲ್ಲಿಯೇ ಇಂದ್ರಜಿತ್ತುವಿನ ಮರಣವು ಬರೆದಿದೆ ಎಂದು ವಿಭೀಷಣನು ಹೇಳಿದನು.

ಲಕ್ಷ್ಮಣನೂ, ವಿಭೀಷಣ ಹನುಮಂತ ಮೊದಲಾದವರೂ ಇಂದ್ರಜಿತ್ತು ಇರುವಲ್ಲಿಗೆ ಹೋದರು. ನಿಕುಂಭಿಲೆಯಲ್ಲಿ ಇಂದ್ರಜಿತ್ತು ಕಪ್ಪು ಹೋತಗಳನ್ನು ಬಲಿಗೊಟ್ಟು ಹೋಮ ಮಾಡಲು ಕುಳಿತಿದ್ದನು. ಹನುಮದಾದಿಗಳು ಆ ಹೋಮವನ್ನು ಧ್ವಂಸ ಮಾಡಿದರು. ಅಲ್ಲಿಯೇ ಲಕ್ಷ್ಮಣನು ಇಂದ್ರಜಿತ್ತುವನ್ನು ಸಂಹರಿಸಿಬಿಟ್ಟನು.

ಎಲ್ಲರನ್ನೂ ಕಳೆದುಕೊಂಡ ರಾವಣನು ಪಾತಾಳ ಲಂಕಾಧಿಪತಿಯಾದ ಮೈರಾವಣನ ಬಳಿಗೆ ಹೋಗಿ, ರಾಮಲಕ್ಷ್ಮಣರನ್ನು ಮಹಾಕಾಳಿಗೆ ಬಲಿಕೊಟ್ಟು ಬಿಡುವಂತೆ ಕೇಳಿಕೊಂಡನು.

ಮಹಾ ಮಾಯಾವಿಯಾದ ಮೈರಾವಣನು ತನ್ನ ಮಾಯೆಯಿಂದ ರಾಮಲಕ್ಷ್ಮಣರಿಗೆ ನಿದ್ದೆ ಬರುವ ಹಾಗೆ ಮಾಡಿ, ಪಾತಾಳ ಲಂಕೆಗೆ ಎತ್ತಿಕೊಂಡು ಹೋಗಿ, ಕಾಳಿಕಾಲಯದಲ್ಲಿ ಅವರನ್ನು ಬಲಿಕೊಡಲು ಏರ್ಪಾಡು ಮಾಡಿದನು.

ಇದನ್ನು ತಿಳಿದು ಹನುಮಂತನು ಪಾತಾಳ ಲಂಕೆಗೆ ಹೋಗಿ ದ್ವಾರಪಾಲಕನಾಗಿದ್ದ ಮತ್ಸ್ಯವಲ್ಲಭನೊಂದಿಗೆ ಹೋರಾಡತೊಡಗಿದನು. ಆಗ ಸುವರ್ಚಲಾದೇವಿ ಹನುಮಂತನನ್ನು ಗುರುತಿಸಿ, ಅವರಿಬ್ಬರೂ ತಂದೆ ಮಗಂದಿರೆಂದು ಹೇಳಿ ಅವರ ಜಗಳ ನಿಲ್ಲಿಸಿದಳು.

ಅಲ್ಲಿಂದ ಹನುಮಂತನು ಸೂಕ್ಷ್ಮರೂಪದಿಂದ ಕಾಳಿಕಾಲಯವನ್ನು ಪ್ರವೇಶಿಸಿ, ರಾಮಲಕ್ಷ್ಮಣರನ್ನು ಹೆಗಲುಗಳ ಮೇಲೆ ಕುಳ್ಳಿರಿಸಿಕೊಂಡು ಹೊರಗೆ ಬಂದನು. ಆಗ ಅಡ್ಡಗಟ್ಟಿದ ಮೈರಾವಣನೊಂದಿಗೆ ರಾಮಲಕ್ಷ್ಮಣರು ಖಾಡಾಖಾಡಿಯಾಗಿ ಯುದ್ಧ ಮಾಡಿದರು.

ರಾಮನನ್ನೇ ತನ್ನ ದೇವನೆಂದು ಭಾವಿಸಿಕೊಂಡಿದ್ದ ಚಂದ್ರಸೇನೆಯನ್ನು ಮೈರಾವಣನು ಸೆರೆಯಲ್ಲಿಟ್ಟಿದ್ದನು. ಆಕೆಯಿಂದ ಹನುಮಂತನು ಮೈರಾವಣನ ಜೀವ ರಹಸ್ಯವನ್ನು ತಿಳಿದುಕೊಂಡು ಅವನ ಜೀವವನ್ನು



ಧ್ವಂಸ ಮಾಡಿದನು. ಅದೇ ವೇಳೆಯಲ್ಲಿ ರಾಮನಿಂದ ಮೈರಾವಣನು ಮತ್ತೆ ಎಂದಿಗೂ ಹುಟ್ಟದಂತೆ ಸತ್ತುಬಿದ್ದನು.

ರಾಮನು ಚಂದ್ರಸೇನೆಗೆ ಆತ್ಮತತ್ವವನ್ನು ಬೋಧಿಸಿ, ಮರು ಜನ್ಮದಲ್ಲಿ ಅವಳು ವಿಷ್ಣುವನ್ನು ಹೊಂದುವಂತೆ ಆಶೀರ್ವಾದ ಮಾಡಿ, ಅವಳ ತಾಪವನ್ನು ಶಾಂತಪಡಿಸಿದನು,

ಈ ರೀತಿಯಾಗಿ ತನ್ನ ಮಾಯೋಪಾಯಗಳೆಲ್ಲಾ ವಿಫಲವಾದ ಮೇಲೆ ರಾವಣನು ಪಾತಾಳ ಲಂಕಾ ಯಾಗವನ್ನು ಮಾಡಲು ಕುಳಿತನು. ಆ ಸಮಯದಲ್ಲಿ ಹನುಮಂತನು ರಾಮಲಕ್ಷ್ಮಣರನ್ನು ಹೊತ್ತುಕೊಂಡು ಲಂಕೆಗೆ ಬಂದನು. ವಿಭೀಷಣನು ರಾವಣನು ಮಾಡುವ ಯಾಗವನ್ನು ಹೇಳಿ, ಆ ಯಾಗದಿಂದ ಉಕ್ಕಿನಂಥ ಯೋಧರೂ, ಚತುರಂಗ ಬಲಗಳೂ ಉಂಟಾಗುತ್ತವೆಂದನು. ಅದನ್ನು ಭಂಗಪಡಿಸುವ ಉಪಾಯವನ್ನೂ ಹೇಳಿದನು.

ಅಂಗದನು ಅದೃಶ್ಯಕರಣಿ ಎಂಬ ವಿದ್ಯಾಪ್ರಭಾವದಿಂದ ಹೋಗಿ ಮಂಡೋದರಿಯ ತಲೆಗೂದಲನ್ನು ಹಿಡಿದು ಅವಳನ್ನು ದರದರನೆ ಎಳೆದುಕೊಂಡು ರಾವಣನ ಇದಿರಿಗೆ ಹೋದನು, ಅದರಿಂದ ರಾವಣನ ಯಾಗದೀಕ್ಷೆ ಭಗ್ನವಾಗಿಹೋಯಿತು.

ರಾವಣನು ಮೋಸ ಹೋದೆನೆಂದು ತಿಳಿದು ಹತಾಶನಾಗಿ, ಕಡೆಗೆ ಯುದ್ಧ ಮಾಡಲಿಕ್ಕೇ ತಯಾರಾದನು. ಆಗ ಕೂಡ ಮಂಡೋದರಿ ರಾವಣನೊಂದಿಗೆ, ಈಗಲಾದರೂ ಸೀತೆಯನ್ನು ರಾಮನಿಗೆ ಒಪ್ಪಿಸುವಂತೆ ಹಿತವನ್ನು ಹೇಳಿ ಬೇಡಿಕೊಂಡಳು.

"ರಾವಣನು ರಾವಣನೇ!" ಎಂದು ಸಿಂಹಗರ್ಜನೆ ಮಾಡಿ, ರಾವಣನು ಹತ್ತು ಕುದುರೆಗಳನ್ನು ಹೂಡಿದ ರಥದ ಮೇಲೇರಿ ರಾಮನ ಮುಂದೆ ಯುದ್ಧಕ್ಕೆ ಹೋದನು.

ತನ್ನ ಮಗ ಇಂದ್ರಜಿತ್ತುವನ್ನು ಕೊಂದ ಲಕ್ಷ್ಮಣನನ್ನು ನೋಡಿದ ಕೂಡಲೇ ರಾವಣನ ಆಗ್ರಹಾವೇಶವು ಮಿತಿಮೀರಿತು, ಶೂರ್ಪನಖಿಯನ್ನು ಅವಮಾನಪಡಿಸಿದವನೂ ಈ ಲಕ್ಷ್ಮಣನೇ! ಹಿಂದೆ ದೇವೇಂದ್ರನು ತನ್ನ ಬಂಧ ವಿಮೋಚನೆಗೆ ಪಣವಾಗಿ ಶಕ್ತಿ ಎಂಬ ಮಹಾಯುಧಾಸ್ತ್ರ ಒಂದನ್ನು ರಾವಣನಿಗೆ ಕೊಟ್ಟಿದ್ದನು. ಆ ಅಸ್ತ್ರವನ್ನು ಈಗ ರಾವಣನು ಲಕ್ಷ್ಮಣನ ಮೇಲೆ ಪ್ರಯೋಗಿಸಿದನು, ಅದರ ಹವೆಯಿಂದ ಲಕ್ಷ್ಮಣನು ನೆಲಕ್ಕೆ ಬಿದ್ದನು.

ಹನುಮಂತನು ಕ್ಷಣಮಾತ್ರದಲ್ಲಿ ಹಿಮಾಲಯ ಪರ್ವತಕ್ಕೆ ಹೋಗಿ ಸೂರ್ಯೋದಯವಾಗುವುದರೊಳಗೆ ಸಂಜೀವಿನಿ ಮೂಲಿಕೆಯನ್ನು ತಂದು ಲಕ್ಷ್ಮಣನನ್ನೂ, ಇತರ ವಾನರರನ್ನೂ ಸ್ವಸ್ಥರಾಗಿ ಏಳುವಂತೆ ಮಾಡಿದನು.

ರಾಮರಾವಣರ ಯುದ್ಧವು ನಡೆಯುತ್ತಿರುವಾಗ, ಇಂದ್ರನು ರಾಮನಿಗೆ ಮಾತಲಿಯ ಸಾರಥ್ಯದಲ್ಲಿರುವ ದಿವ್ಯ ರಥವನ್ನು ಕಳುಹಿಸಿದನು.

ರಾಮ ರಾವಣರ ಭೀಷಣ ಸಂಗ್ರಾಮದಲ್ಲಿ ರಾವಣನ ತಲೆಗಳು ನೆಲದ ಮೇಲೆ ಉರುಳಿದರೂ ಮತ್ತೆ ಮತ್ತೆ ತಲೆಗಳು ಮೊಳೆಯುತ್ತಿದ್ದವು. ಆಗ ವಿಭೀಷಣನು ರಾವಣನ ಹೊಟ್ಟೆಯಲ್ಲಿರುವ ಅಮೃತ ಭಾಂಡವು ಕಿತ್ತು ಬೀಳುವಂತೆ ಎದೆಯನ್ನು ಭೇದಿಸಲು ಹೇಳಿದನು. ರಾಮನು ಬ್ರಹ್ಮಾಸ್ತ್ರದಿಂದ ಹಾಗೆಯೇ ಮಾಡಿದನು. ರಾವಣನು ಒಂಟಿ ತಲೆಯೊಂದಿಗೆ ವಿಕಾರಿಯಾಗಿ ಬಿದ್ದು ಪ್ರಾಣಬಿಟ್ಟನು.

ಈ ವಿಧವಾಗಿ ಗುಟ್ಟುಗಳನ್ನು ರಟ್ಟುಮಾಡಿದ ವಿಭೀಷಣನಿಂದ "ಸಂಸಾರ ಲಂಕಾವ್ಯಾಧಿರಟ್ಟು" ಎಂಬ ಸಾಮತಿಗೆ ಮೂಲವಾಯಿತು.

ರಾವಣ ಸಂಹಾರದಿಂದ ಲಂಕಾ ರಾಜ್ಯವು ಪತನವಾಗಿ, ದುಷ್ಟ ರಾಕ್ಷಸ ರಾಜ್ಯಭಾರವು ಅಂತರಿಸಿ, ವಿಭೀಷಣನು ಲಂಕೆಯ ರಾಜನಾದನು.

ರಾವಣ ಕುಂಭಕರ್ಣರ ಮರಣದಿಂದ ಜಯ ವಿಜಯರ ಎರಡನೇ ಜನ್ಮವು ಮುಗಿಯಿತು.

ಅಶೋಕ ವನದೊಳಗಿದ್ದ ಸೀತೆ ರಾಮನ ಮುಂದೆ ಬಂದು ನಿಂತಳು. ಆಗ ರಾಮನು ಸೀತೆಯೊಂದಿಗೆ, "ಸೀತೇ, ದುಷ್ಟರನ್ನು ಶಿಕ್ಷಿಸಿ ನನ್ನ ಕರ್ತವ್ಯವನ್ನು ನಿರ್ವಹಿಸಿಯಾಯಿತು. ನಿನ್ನನ್ನು ರಾವಣನು ಎತ್ತಿಕೊಂಡು ತಂದು ಲಂಕೆಯಲ್ಲಿ ಇರಿಸಿದ್ದಾನೆ. ಅಂತಹ ನಿನ್ನನ್ನು ನಾನು ಹೇಗೆತಾನೇ ಸ್ವೀಕರಿಸಲು ಸಾಧ್ಯ? ಹೇಗೆ ಅಯೋಧ್ಯೆಗೆ ಕರೆದುಕೊಂಡು ಹೋಗಲಿ? ಆದುದರಿಂದ ಇನ್ನು ಮೇಲೆ ನೀನು ನಿನ್ನ ಇಷ್ಟಾನುಸಾರವಾಗಿಯೇ ನಡೆಯಬಹುದು" ಎಂದು ಹೇಳಿದನು.

ಸೀತೆ ಅಲ್ಲಿರುವವರಿಗೆ ಆಜ್ಞಾಪಿಸುವ ರೀತಿಯಲ್ಲಿ ತನಗಾಗಿ ಅಗ್ನಿಕುಂಡವನ್ನು ನಿರ್ಮಿಸಲು ಹೇಳಿದಳು.

ಆಮೇಲೆ ಸೀತೆ ರಾಮನ ಪಾದಗಳಲ್ಲೇ ದೃಷ್ಟಿಯನ್ನಿಟ್ಟು ನಮಸ್ಕರಿಸಿ ಅಗ್ನಿಯೊಳಗೆ ಹಾರಿದಳು. ಜ್ವಾಲೆಗಳು ಆಕಾಶದಷ್ಟೆತ್ತರವಾದುವು.

ಆ ಜ್ವಾಲೆಯೊಳಗಿನಿಂದ ಅಗ್ನಿದೇವನು ಸೀತೆಯನ್ನು ಆಗಲೇ ಅರಳಿದ ಪದ್ಮದ ಹಾಗೆ ತನ್ನ ಅಂಜಲಿಗಳಲ್ಲಿ ಎತ್ತಿಕೊಂಡು ರಾಮನ ಮುಂದೆ ನಿಲ್ಲಿಸಿ, "ರಾಮಾ, ಸೀತೆ ಬೆಂಕಿಯಂಥವಳು. ಪರಮ ಪಾವನೆ! ಸ್ವೀಕರಿಸು" ಎಂದನು.

ಅದೇ ಸಮಯದಲ್ಲಿ ಸ್ವರ್ಗದಿಂದ ದಶರಥನು ವಿಮಾನದಲ್ಲಿ ಕಾಣಿಸಿ, "ಅಪ್ಪಾ, ರಾಮಚಂದ್ರಾ! ಅಗ್ನಿಪರೀಕ್ಷೆಯಲ್ಲಿ ಸೀತೆ ಪವಿತ್ರಳೆಂದು ನಿರೂಪಣೆಯಾಯಿತು. ಸೀತೆಯೊಂದಿಗೆ ಅಯೋಧ್ಯೆಗೆ ಹೋಗಿ ರಾಜ್ಯಪಾಲನೆ ಮಾಡು" ಎಂದು ಉಪದೇಶಿಸಿದನು.

ರಾಮನು ಎಷ್ಟು ಮಂದಿ ಹತ್ತಿದರೂ ತುಂಬದಿರುವ ಪುಷ್ಪಕ ವಿಮಾನದಲ್ಲಿ ಎಲ್ಲರೊಂದಿಗೂ ಅಯೋಧ್ಯೆಗೆ ಬಂದು ಸೇರಿದನು.





ಪಟ್ಟಾಭಿಷಿಕ್ತನಾಗಿ ಮಹಾರಾಜನಾದ ರಾಮನು ಭರತ ಶತ್ರುಘ್ನರ ಸಹಾಯದಿಂದ ರಾಜ್ಯವನ್ನು ಸುವ್ಯವಸ್ಥೆಗೊಳಿಸಿ, ಆದರ್ಶಪ್ರಾಯವಾಗುವಂತೆ ಪಾಲನೆ ಮಾಡತೊಡಗಿದನು.

ಹಾಗಿರುವಾಗ ಒಂದು ವಿಚಿತ್ರ ಸಂಭವವಾಯಿತು. ಒಂದು ದಿನ ಗ್ರಾಮವಾಸಿಯಾದ ಬ್ರಾಹ್ಮಣನೊಬ್ಬನು ತನ್ನ ಐದು ವಯಸ್ಸಿನ ಮಗನ ಶವವನ್ನು ತಂದು ರಾಜದ್ವಾರದ ಹತ್ತಿರ ಇಟ್ಟು ರೋದಿಸಲು ತೊಡಗಿದನು. ರಾಜ್ಯಪಾಲನೆ ಸರಿಯಾಗಿದ್ದರೆ, ಈ ಬಗೆಯ ಅಕಾಲ ಮರಣವು ಬರುತ್ತಿತ್ತೇ ಎಂಬುದು ಅವನ ರೋದನೆ. ಇಕ್ಷ್ವಾಕು ವಂಶದ ರಾಜ್ಯದಲ್ಲಿ ರಾಮನ ಪಾಲನೆ ಬಹಳ ಕೇಡಿನದಾಯಿತಲ್ಲಾ ಎಂದು ಎದೆಬಡೆದುಕೊಂಡನು ಆ ಬ್ರಾಹ್ಮಣ.

ಈ ಸಂಗತಿಯನ್ನು ತಿಳಿದು ರಾಮನು ಬಹಳವಾಗಿ ಚಿಂತಿಸಿ, ಮಂತ್ರಿಗಳನ್ನೂ, ವಸಿಷ್ಠ ಮೊದಲಾದ ಪುರೋಹಿತರನ್ನೂ ಕರೆಯಿಸಿ ಅವರೊಂದಿಗೆ, ಬ್ರಾಹ್ಮಣ ಕುಮಾರನ ಅಕಾಲಮರಣಕ್ಕೆ ಕಾರಣವೇನೆಂದು ಪರಿಶೀಲಿಸುವಂತೆ ಕೇಳಿಕೊಂಡನು. ಶಂಬುಕನೆಂಬೊಬ್ಬ ಶೂದ್ರನು ದೊಡ್ಡ ತಪಸ್ಸು ಮಾಡುತ್ತಿರುವನೆಂದೂ, ಅದು ಯುಗಧರ್ಮಕ್ಕೆ ವಿರೋಧವೆಂದೂ, ಆದುದರಿಂದಲೇ ಅಕಾಲ ಮರಣಕ್ಕೆ ಅದೇ ಕಾರಣವೆಂದೂ ನಾರದನು ಹೇಳಿದ ಸಂಗತಿಯಿಂದ ಗೊತ್ತಾಯಿತು.

ಕೂಡಲೇ ರಾಮನು ಲಕ್ಷ್ಮಣನೊಂದಿಗೆ, "ನೀನು ಬೇಗನೇ ಹೋಗಿ ಆ ಬ್ರಾಹ್ಮಣನನ್ನು ಸಮಾಧಾನಪಡಿಸು. ಆ ಬಾಲಕನ ಕಳೇಬರವನ್ನು ತೈಲ ಭಾಂಡದಲ್ಲಿ ಭದ್ರವಾಗಿಡಿಸು" ಎಂದು ಆಜ್ಞೆ ಮಾಡಿದನು. ತರುವಾಯ ರಾಮನು ಆಯುಧಗಳನ್ನು ತೆಗೆದುಕೊಂಡು ಪುಷ್ಪಕವಿಮಾನವೇರಿ, ಪೂರ್ವ, ಪಶ್ಚಿಮ, ಉತ್ತರ ದಿಕ್ಕುಗಳಲ್ಲೆಲ್ಲಾ ಹುಡುಕಾಡಿ, ಕಡೆಗೆ ದಕ್ಷಿಣ ದಿಕ್ಕಿನಲ್ಲಿದ್ದ ಒಂದಾನೊಂದು ಸರೋವರದಲ್ಲಿ ತಲೆಕೆಳಗಾಗಿ ತಪಸ್ಸಿನಲ್ಲಿ ಪೂರ್ತಿ ಮಗ್ನನಾಗಿದ್ದ ಶಂಬುಕನೆಂಬ ಆ ಮನುಷ್ಯನನ್ನು ನೋಡಿದನು. ತತ್ಕ್ಷಣವೇ ರಾಮನು ಪುಷ್ಪಕದಿಂದಿಳಿದು.



ಖಡ್ಗದಿಂದ ಶಂಬುಕನ ತಲೆಯನ್ನು ಕಡಿದು ಹಾಕಿದನು. ಆಗ ಶಂಬುಕನ ತಲೆ ಕಣ್ಣುಗಳನ್ನು ಬಿಡಿಸಿ ರಾಮನನ್ನು ನೋಡಿ ಆತ್ಮಾನಂದದಿಂದ, "ಸ್ವತಃ ನೀನೇ ಬಂದೆಯಾ ರಾಮಾ? ಮರಣವೆಂಬುದು ಯಾವುದೋ ಒಂದು ವಿಧದಲ್ಲಿ ತಪ್ಪದೆ ಬರುವಂತಹುದೇ. ನೀನು ಕೇವಲ ನಿಮಿತ್ತ ಮಾತ್ರನೇ. ವರ್ಣಾಶ್ರಮಧರ್ಮಗಳಿಗೆ ಕಟ್ಟುಗೊಂಡ ವಿವಿಧ ವರ್ಣಗಳಿಂದ ಕೂಡಿದ ಪ್ರಜೆಗಳಿಗೆ ನೀನು ಮಹಾರಾಜನು. ರಾಜನೆಂದರೆ ಪ್ರಜೆಗಳ ಸೇವಕನು. ಧರ್ಮಕ್ಕೆ ವಿರುದ್ಧವಾಗಿ ಪ್ರವರ್ತಿಸಿದ ನನ್ನಂಥವನನ್ನು ನಿಗ್ರಹಿಸಲು ಸ್ವತಃ ಬಂದೆ. ನೀನೇ ನಿಜವಾದ ರಾಜನು. ನಿನ್ನನ್ನು ಕೊಲೆಕಾರ್ಯಕ್ಕೆ ಎಳೆದ ನಾನೇ ದೋಷಿಯಾಗಿರುವೆನು. ನನ್ನನ್ನು ಕ್ಷಮಿಸು! ನಾನು ಕುಲಧರ್ಮಗಳಿಗೆ ಅತೀತನಾದ ಯೋಗಿಯಾದುದರಿಂದಲೇ ಕಡೆಗೆ ಇಂತಹ ಕೆಲಸಮಾಡಿದೆನು. ನಿನ್ನ ಕೈಯಿಂದ ಮುಕ್ತಿಪಡೆದು ನಾನು ವಿಷ್ಣು ಸಾಯುಜ್ಯವನ್ನೇ ಹೊಂದುವಂತೆ ಮಾಡು, ರಾಮಾ!" ಎಂದು ಹೇಳಿದ ಮೇಲೆ ಕಣ್ಣುಗಳು ಮುಚ್ಚಿದುವು.

ಶಂಬುಕನ ಹೆಂಡತಿಯಾದ ಕಪಿಲೆ ರಾಮನನ್ನು ನೋಡಿ, "ಸೀತಾಪತೀ! ಹೊಸತಾಗಿ ಪಟ್ಟಾಭಿಷಿಕ್ತನಾದ ನೀನು ಮುಂದೆ ಇದಿರಿಸಬೇಕಾದ ಕಠೋರ ಪರೀಕ್ಷೆಗಳಿಗೆ ಇದು ನಾಂದಿ. ನಾನು ನನ್ನ ಗಂಡನೊಂದಿಗೆ ಸಂತೋಷವಾಗಿ ಹೋಗುತ್ತಿದ್ದೇನೆ. ದೃಢಚಿತ್ತನಾಗಿ ಕರ್ತವ್ಯಪಾಲನೆ ಮಾಡು ಶ್ರೀರಾಮಾ" ಎಂದು ಹೇಳುತ್ತ, ಗಂಡನ ಚಿತೆಯಲ್ಲಿ ಪ್ರವೇಶಿಸಿ ಸಹಗಮನ ಮಾಡಿದಳು.

ಅಲ್ಲಿಂದ ಹಿಂದಿರುಗಿ ಬರುವ ದಾರಿಯಲ್ಲಿ ರಾಮನು ಒಂದು ಮರದ ಪೊಟರೆಯನ್ನು ನೋಡಿದನು. ಅದೊಂದು ಗೂಗೆಯ ಪೊಟರೆಯಾಗಿತ್ತು, ಆ ಗೂಗೆಯನ್ನು ಓಡಿಸಿ ದುರಾಕ್ರಮಣ ಮಾಡಿದ ಹದ್ದಿನ ಸಂಗತಿ ರಾಮನಿಗೆ ತಿಳಿಯಿತು. ಅದನ್ನು ಶಿಕ್ಷಿಸುವಂತೆ ರಾಮನು ಕೈಯಿಂದ ಹದ್ದಿನ ತಲೆಯ ಮೇಲೆ ತಟ್ಟಿದನು. ಕೂಡಲೇ ಆ ಹದ್ದು ಮಾಯವಾಗಿ, ಆ ಸ್ಥಳದಲ್ಲಿ ಬ್ರಹ್ಮದತ್ತನೆಂಬ ರಾಜನು ಶಾಪ ವಿಮೋಚನೆಗೊಂಡು ಪ್ರತ್ಯಕ್ಷನಾಗಿ, ರಾಮನಿಗೆ ವಂದಿಸಿ ಹೊರಟುಹೋದನು.

ರಾಮನು ಅಯೋಧ್ಯೆಗೆ ಹಿಂದಿರುಗಿದಾಗ, ಸತ್ತ ಬ್ರಾಹ್ಮಣ ಕುಮಾರನು ಬದುಕಿ ಎದ್ದಿದ್ದನು.

ಒಂದು ದಿನ ವಿಶ್ವಾಮಿತ್ರನು ರಾಮನ ಸಭಾಸ್ಥಾನಕ್ಕೆ ಬಂದು, ತನ್ನನ್ನು ಅವಮಾನಪಡಿಸಿದ ಶಕುಂತರಾಜನನ್ನು ವಧಿಸಬೇಕೆಂದು ರಾಮನನ್ನು ಕೇಳಿಕೊಂಡನು. ಇದು ರಾಮನ ಗುರುವಿನ ಆಜ್ಞೆ.

ಮರುಕ್ಷಣದಲ್ಲೇ ರಾಮನು ಶಕುಂತನನ್ನು ವಧಿಸಲು ಹೊರಟನು.

ಇದನ್ನು ತಿಳಿದ ಶಕುಂತನು ಹನುಮಂತನ ತಾಯಿಯಾದ ಅಂಜನಾದೇವಿಗೆ ಶರಣಾರ್ಥಿಯಾಗಿ.



ಅವಳಿಂದ ಅಭಯದಾನ ಪಡೆದನು. ತಾಯಿಯ ಮಾತನ್ನು ಮೀರಲಾಗದ ಹನುಮಂತನು, ಶಕುಂತನನ್ನು ರಕ್ಷಿಸುವ ಭಾರ ಹೊತ್ತು, ರಾಮನ ಬಾಣಕ್ಕೆ ಇದಿರಾಗಿ ಕಣ್ಣುಮುಚ್ಚಿ ನಿಂತು ತನ್ನ ಎದೆಯ ನ್ನೊಡ್ಡಿದನು. ರಾಮನು ಪ್ರಯೋಗಿಸಿದ ಬಾಣಗಳೆಲ್ಲ ಹನುಮಂತನ ಎದೆಯೊಳಗೆ ಲೀನವಾದುವು.

ಇದನ್ನೆಲ್ಲ ನೋಡಿ ವಿಶ್ವಾಮಿತ್ರನು ದುರಾಗ್ರಹವನ್ನು ಬಿಟ್ಟು, ಶಕುಂತನನ್ನು ಮನ್ನಿಸಿ ಆಶೀರ್ವಾದ ಮಾಡಿ, ತನ್ನ ಪಾಡಿಗೆ ಹೊರಟುಹೋದನು.

ಮತ್ತೊಂದು ದಿನ ಅರ್ಧರಾತ್ರಿಯ ಹೊತ್ತಿನಲ್ಲಿ ಒಂದು ನಾಯಿ, ಅರಮನೆಯ ಬಾಗಿಲಿಗೆ ಬಂದು ತನಗೆ ನ್ಯಾಯಬೇಕೆಂದು ಆರ್ತನಾದ ಮಾಡ ತೊಡಗಿತು. ರಾಮನು ತಟಕ್ಕನೆದ್ದು ಹೊರಗೆ ಬಂದು ನೋಡಿದನು. ರಕ್ತ ಸುರಿಯುತ್ತಿದ್ದ ನಾಯಿಯ ಶರೀರದಲ್ಲಾದ ಗಾಯವನ್ನು ಒತ್ತಿ ಹಿಡಿದನು.

ನಾಯಿ ತನ್ನ ಸಮಾಚಾರವನ್ನು ಹೇಳಿಕೊಂಡಿತು. ಅದು ಪೂರ್ವಜನ್ಮದಲ್ಲಿ ದೇವಾಲಯದ ಅರ್ಚಕನಾದ ಮನುಷ್ಯನಾಗಿದ್ದಿತಂತೆ. ಆಗ ಮಾಡಿದ ಪಾಪದಿಂದಲೇ ಅದು ನಾಯಿಯಾಗಿ ಹುಟ್ಟಿತಂತೆ. ಈಗ ಕಾರಣವೇನಿಲ್ಲದೆ ತನ್ನನ್ನು ಹೀಗೆ ಹೊಡೆದ ಒಡೆಯನನ್ನು ದೇವಾಲಯದ ಅರ್ಚಕನಾಗಿ ನಿಯಮಿಸಬೇಕೆಂದು ಅದು ಕೇಳಿಕೊಂಡಿತು. ಅದೇ ಅವನಿಗೆ ತಕ್ಕ ಶಿಕ್ಷೆ ಎಂಬುದು ನಾಯಿಯ ಅಭಿಪ್ರಾಯ. ರಾಮನು ಹಾಗೇ ಮಾಡುವೆನೆಂದು ಹೇಳಿದ ಕೂಡಲೇ, ಅದರ ನೋವೆಲ್ಲಾ ಮಾಯವಾಗಿ ಸಂತೋಷದಿಂದ ಹೊರಟುಹೋಯಿತು.

ಹಾಗಿರುವಾಗ ಅಲ್ಪಮತಿಯೊಬ್ಬನು ತನ್ನ ಹೆಂಡತಿಗೆ ಬಯ್ಯುವಾಗ, "ಪರಪುರುಷನ ಮನೆಯಲ್ಲಿದ್ದ ಹೆಂಡತಿಯನ್ನು ತಂದು ಇಟ್ಟುಕೊಳ್ಳುವಂಥ ರಾಮನಂಥವನು ನಾನಲ್ಲ," ಎಂದ ಮಾತು, ಕಿವಿಯಿಂದ ಕಿವಿಗೆ ಹೋಗಿ, ರಾಮನ ಕಿವಿಗೂ ಬಿದ್ದಿತು.

ಅದನ್ನು ತಾಳಲಾಗದೆ ರಾಮನು ಅಗ್ನಿಪೂತಳಾದ ಸೀತೆಯನ್ನು ಅರಣ್ಯದಲ್ಲಿ ಬಿಟ್ಟುಬರುವಂತೆ ಲಕ್ಷ್ಮಣನಿಗೆ ಆಜ್ಞೆ ಮಾಡಿದನು. ಲಕ್ಷ್ಮಣನು ಅತ್ಯಾಕ್ರೋಶದಿಂದ ಅಂಥಾ ಕೆಲಸವು ಸಲ್ಲದೆಂದು ಹೇಳಲು, ರಾಮನು "ಎಲೋ ಲಕ್ಷ್ಮಣಾ, ಒಬ್ಬ ಅಲ್ಪನ ಬಾಯಿಯಿಂದ ಅಂತಹ ಮಾತು ಹೊರಡಬೇಕಾದರೆ ಅನೇಕ ಮಂದಿಯ ಮನಸ್ಸಿನೊಳಗೆ ಹಾಗೊಂದು ಭಾವನೆ ಇದೆಯೆಂದು ಅಯಿತು. ಪಾತ್ರದ ಅನ್ನದ ಹದನೋಡಲು ಒಂದಗುಳೇ ಸಾಕು. ರಾಜ್ಯವೆಂದರೆ ಭೂಮಿಯಲ್ಲ; ಮನುಷ್ಯರೇ. ಪ್ರಜೆಗಳನ್ನು ಪಾಲಿಸುವುದೆಂದರೆ ಕತ್ತಿಯ ಅಲಗಿನ ಮೇಲೆ ನಡೆಯುವುದೇ, ಅಲ್ಲಿ ಸ್ವಾರ್ಥಕ್ಕೆ ತಾವಿಲ್ಲ. ಜನವಾಕ್ಯವನ್ನು ಗೌರವಿಸಿ ಕರ್ತವ್ಯಪಾಲನೆ ಮಾಡುವುದೇ ರಾಜಧರ್ಮ. ನನ್ನ ಆಜ್ಞೆಯನ್ನು ನೆರವೇರಿಸುವುದು ನಿನ್ನ ಧರ್ಮ." ಎಂದನು ರಾಮ.

ಸೀತೆ ಮುನಿಪತ್ನಿಯರೊಂದಿಗೆ ಆಶ್ರಮಗಳಲ್ಲಿ



ತಿರುಗಾಡಿ ಬರಬೇಕೆಂದು ಒಂದೆರಡು ಬಾರಿ ರಾಮನೊಂದಿಗೆ ಹೇಳಿದ್ದಳು. ಅದನ್ನೇ ನೆಪಮಾಡಿ ಲಕ್ಷ್ಮಣನು ರಥದ ಮೇಲೆ ಸೀತೆಯನ್ನು ಕರೆದುಕೊಂಡು ಹೋಗಿ, ಅರಣ್ಯದಲ್ಲಿ ಬಿಟ್ಟು ಹಿಂದಿರುಗಿ ಬಂದು, "ಅಯ್ಯೊ! ಆ ದಿನ ಹನುಮಂತನು ಸಂಜೀವಿನಿಯನ್ನು ತಂದು ನನ್ನನ್ನು ಬದುಕಿಸಿದ್ದು ಈ ಕಟು ಕಾರ್ಯಕ್ಕಾಗಿಯೇನಾ?" ಎಂದು ಎದೆಯೊಡೆಯುವಂತೆ ರೋದಿಸಿದನು.

ಸೀತೆಯನ್ನು ನೋಡಿ ವಾಲ್ಮೀಕಿ ಮಹರ್ಷಿ ತನ್ನ ಆಶ್ರಮಕ್ಕೆ ಕರೆದುಕೊಂಡು ಹೋದನು. ಅಲ್ಲಿ ಸೀತೆ, ಕುಶ ಮತ್ತು ಲವ ಎಂಬ ಅವಳಿಜವಳಿ ಕುಮಾರರನ್ನು ಹಡೆದಳು.

ಮುಂದೆ ಅಯೋಧ್ಯಾ ನಗರದಲ್ಲಿ ಅನಾವೃಷ್ಟಿಯುಂಟಾಗಿ ಜನರು ಕಷ್ಟಕ್ಕೆ ಬಿದ್ದರು. ನೆಲವೆಲ್ಲಾ ಒಣಗಿ ಒಡೆದೊಡೆದು ಹೋಯಿತು. ಸೀತಾವಿಯೋಗದಿಂದ ಒಳಗೊಳಗೇ ಕುದಿಯುತ್ತಿದ್ದ ರಾಮನಿಗೆ ಅಶ್ವಮೇಧ ಯಾಗ ಮಾಡಬೇಕೆಂದು ಹಿರಿಯರು ಆದೇಶ ಮಾಡಿದರು. ಬಂಗಾರದಿಂದ ಸೀತೆಯ ವಿಗ್ರಹವನ್ನು ಮಾಡಿಸಿ ರಾಮನು ಯಾಗದೀಕ್ಷೆ ಹಿಡಿದನು.

ಕುಶಲವರು ವಾಲ್ಮೀಕಿ ರಚಿಸಿದ ರಾಮಾಯಣ ಕಾವ್ಯವನ್ನು ಗಾನಮಾಡುತ್ತ ಅಯೋಧ್ಯೆಗೆ ಬಂದರು. ತಾವು ಮುನಿಬಾಲಕರೆಂದು ಹೇಳಿಕೊಂಡ ಆ ಹುಡುಗರನ್ನು ನೋಡಿ ರಾಮನು, ಅತ್ಯಂತ ವಾತ್ಸಲ್ಯದಿಂದ ಅವರನ್ನು ಆಲಿಂಗಿಸಿ, ಮುದ್ದುಗುಲುಕುವ ಮಾತುಗಳನ್ನಾಡಿ, ಕಾಣಿಕೆಗಳನ್ನು ಕೊಟ್ಟು ಕಳುಹಿಸಿದನು.

ರಾಮನ ಅಶ್ವಮೇಧಯಾಗಾಶ್ವವನ್ನು ಕುಶಲವರು ಹಿಡಿದು ಕಟ್ಟಿ ಹಾಕಿದರು.

ಯಾಗಾಶ್ವದ ಹಿಂದೆ ಬಂದಿದ್ದ ಭರತ, ಲಕ್ಷ್ಮಣ, ಶತ್ರುಘ್ನರು ಕುಶಲವರೊಂದಿಗೆ ಯುದ್ಧ ಮಾಡಬೇಕಾಯಿತು. ಆ ಹುಡುಗರ ಬಾಣದೇಟುಗಳಿಂದ ಭರತ, ಲಕ್ಷ್ಮಣ, ಶತ್ರುಘ್ನರು ಮೂರ್ಛೆ ಹೋಗಿ ಬಿದ್ದರು. ಆಮೇಲೆ ರಾಮನೇ ಕುಶಲವರೊಂದಿಗೆ ಯುದ್ಧ ಮಾಡಿದನು.

ಕುಶಲವರು ಯುದ್ಧಮಾಡುತ್ತ, ತಾಯಿಯ ಹೆಸರಿನಲ್ಲಿ ಆಣೆಮಾಡಿ ಬಾಣ ಬಿಡಲು, ರಾಮನು ಮೂರ್ಛೆ ಹೋಗಿ ಬಿದ್ದನು. ಸೀತೆ ಬಂದು ರಾಮನನ್ನು ಉಪಚರಿಸಿದಳು. ರಾಮನೊಂದಿಗೆ ಎಲ್ಲರೂ ಮೂರ್ಛೆಯಿಂದ ಎಚ್ಚೆತ್ತರು.

ವಾಲ್ಮೀಕಿ ಎಲ್ಲಾ ಸಂಗತಿಯನ್ನೂ ರಾಮನೊಂದಿಗೆ ಹೇಳಿ ಕುಮಾರರನ್ನೂ, ಸೀತೆಯನ್ನೂ ರಾಮನಿಗೆ ಒಪ್ಪಿಸಿದನು. ರಾಮನು ಸೀತೆಯೊಂದಿಗೆ ಸಿಂಹಾಸನವನ್ನೇರಿ, ಕುಶಲವರನ್ನು ತೊಡೆಗಳ ಮೇಲೆ ಕುಳ್ಳಿರಿಸಿಕೊಂಡನು. ಅನಂತರ ಅವರಿಗೆ ಯುವರಾಜ ಪಟ್ಟಾಭಿಷೇಕವನ್ನೂ ಮಾಡಿದನು.

ಸೀತೆ ರಾಮನ ಅಪೇಕ್ಷೆಯಂತೆ ಮಹಾಪ್ರಜೆಗಳ ಮುಂದೆ ನಿಂತುಕೊಂಡು, ಆಕಾಶವನ್ನು ನೋಡಿ,



ಮನಸ್ಸಿನಲ್ಲಿ ತನ್ನ ಪಾತಿವ್ರತ್ಯದ ಮೇಲೆ ಶಪಥ ಹಾಕಿ, ಮಳೆ ಬರಬೇಕೆಂದು ಕೇಳಿಕೊಂಡಳು. ಮರುಕ್ಷಣದಲ್ಲಿ ಆಕಾಶವು ಕಾರ್ಮೋಡಗಳಿಂದ ಕೂಡಿ, ಅಮೃತ ಜಲಧಾರೆ ಸುರಿಸಿತು.

ಆಮೇಲೆ ಸೀತೆ ನೆಲವನ್ನು ನೋಡುತ್ತ "ಅಮ್ಮಾ, ರಘುವಂಶ ದೀಪಕರಾದ ಕುಮಾರರು ತಂದೆಯ ತೊಡೆಯನ್ನು ಸೇರಿಕೊಂಡುದಾಯಿತು. ನನ್ನ ಕರ್ತವ್ಯ ತೀರಿತು. ನನ್ನ ಕೆಲಸ ಇನ್ನೇನಿಲ್ಲ. ನನ್ನನ್ನು ಸ್ವೀಕರಿಸಿಕೋ ತಾಯೀ !" ಎಂದಳು.

ಭೂಮಿ ನಡುಗಿತು. ಹಾಗೆಯೇ ಎರಡು ಭಾಗವಾಗಿ ಸೀಳಿತು. ಆ ಸೀಳಿನೊಳಗಿನಿಂದ ದಿವ್ಯ ಕಾಂತಿ ಹೊರಟಿತು. ರತ್ನಸಿಂಹಾಸನದ ಮೇಲೆ ಆಸೀನಳಾಗಿದ್ದ ಭೂದೇವಿ ಮೇಲೆದ್ದು ಬಂದು, ಸೀತೆಯನ್ನು ಎರಡು ಕೈಗಳಿಂದ ಬಾಚಿ ಎತ್ತಿ ತನ್ನ ಮಡಿಲಲ್ಲಿರಿಸಿಕೊಂಡು ಭೂಮಿಯೊಳಗೆ ಹೊರಟು ಹೋದಳು. ಪುಷ್ಪವೃಷ್ಟಿ ಸುರಿಯುತ್ತಿರಲು, ಭೂಮಿ ಎಂದಿನಂತೆ ಮುಚ್ಚಿಕೊಂಡಿತು. ಜನರೆಲ್ಲಾ ಬಹಳ ಹೊತ್ತಿನವರೆಗೆ ಚಿತ್ರಪ್ರತಿಮೆಗಳಾದರು.

ಆಗ ರಾಮನು ಮಹೋಗ್ರನಾಗಿ ಭೂಮಿಯನ್ನು ಪುಡಿಮಾಡಿ ಹಾಕುವೆನೆಂದು ಕೋದಂಡವನ್ನು ಹಿಡಿದು ಎತ್ತಿದನು. ಅಷ್ಟರಲ್ಲಿ "ರಾಮಾ ! ಶಾಂತನಾಗು ! ಭೂಜಾತೆಯಾದ ಸೀತೆ ತನ್ನ ತಾಯಿಯನ್ನು ಸೇರಿ ನಿನ್ನನ್ನು ಕಾಯುತ್ತಿದ್ದಾಳೆ. ನೀನೂ ಕರ್ತವ್ಯದ ಪ್ರಜ್ಞೆ ತಂದುಕೋ !" ಎಂದು ಆಕಾಶವಾಣಿ ಮೊಳಗಿತು.

ರಾಮನು ಶಾಂತನಾಗಿ ಕುಮಾರರನ್ನು ನೋಡುತ್ತ, ಬಹಳಕಾಲ ರಾಜ್ಯವನ್ನು ಆಳಿಕೊಂಡಿದ್ದನು. ಹಾಗಿರುವಾಗ ಒಂದು ದಿನ ಯಮಧರ್ಮ ರಾಜನು ಬ್ರಾಹ್ಮಣ ವೇಷದಲ್ಲಿ ರಾಮನ ಬಳಿಗೆ ಬಂದು. ದೇವರಹಸ್ಯವನ್ನು ಹೇಳಲು ಬಂದೆನೆಂದೂ, ಲಕ್ಷ್ಮಣನು ಬಾಗಿಲು ಕಾಯುತ್ತ ಯಾರನ್ನೂ ಒಳಗೆ ಬಿಡಬಾರದೆಂದೂ, ಬಿಟ್ಟರೆ ಮರಣವೇ ದಂಡನೆಯೆಂದೂ ಹೇಳಿ ರಾಮನನ್ನು ಒಪ್ಪಿಸಿದನು. ಲಕ್ಷ್ಮಣನು ದ್ವಾರದಲ್ಲಿ ನಿಂತಿರಲು, ಯಮನು ನಿಜರೂಪದಿಂದ ರಾಮನೊಂದಿಗೆ, ಅವನು ಅವತರಿಸಿದ ಕೆಲಸ ಮುಗಿಯಿತೆಂದು ಹೇಳಿ, ವೈಕುಂಠದಲ್ಲಿ ಕಾಯುವ ಲಕ್ಷ್ಮೀದೇವಿಯನ್ನು ಸೇರಬೇಕೆಂಬುದನ್ನು ನೆನಪು ಮಾಡಿದನು.

ಅದೇ ಸಮಯದಲ್ಲಿ ದುರ್ವಾಸನು ಬಂದು, ಲಕ್ಷ್ಮಣನೊಂದಿಗೆ ತತ್‌ಕ್ಷಣದಲ್ಲಿಯೇ ರಾಮನನ್ನು ನೋಡಬೇಕೆಂದು ಹೇಳಿದನು. ಒಳಗೆ ಬಿಡದಿದ್ದರೆ ರಘುವಂಶವೇ ನಾಶವಾಗುವಂತೆ ಶಪಿಸುವುದಾಗಿ ಬೆದರಿಸಿದನು. ಲಕ್ಷ್ಮಣನು ನಿರುಪಾಯವಾಗಿ ದುರ್ವಾಸನನ್ನು ಒಳಗೆಬಿಟ್ಟು, ಹಿಂದಿರುಗಿ ನೋಡದೆಯೇ ಹೋಗಿ ಸರಯೂ ನದಿಯಲ್ಲಿ ಮುಳುಗಿ ಮಾಯವಾಗಿ ಹೋದನು. ಯಮನ ಆದೇಶದಂತೆ ರಾಮನು ಕುಶಲವರಿಗೆ ಪಟ್ಟಾಭಿಷೇಕ ಮಾಡಿ,

ಅವರಿಂದ ರಾಜ್ಯಪಾಲನೆ ಸುಗಮವಾಗುವಂತೆ ಮಾಡಿದನು. ಅನಂತರ ಶ್ರಾವಣ ಮಾಸದಲ್ಲಿ ಸರಿಯೂ ನದಿ ನೆರೆದುಂಬಿ ಪ್ರವಹಿಸುತ್ತಿರಲು, ಹುಣ್ಣಿಮೆಯ ದಿನ ಚಂದ್ರಗ್ರಹಣ ಪರ್ವಕಾಲವೂ ಸೇರಲು, ಮಂಗಳ ತೂರ್ಯನಾದಗಳು ಮೊಳಗುತ್ತಿರಲು, ಎರಡು ಬದಿಗಳಲ್ಲಿ ಭರತ ಶತ್ರುಘ್ನರು ನಡೆಯುತ್ತಿರಲು, ರಾಮನು ಸರಯೂ ನದಿಯ ಕಡೆಗೆ ಹೊರಟನು. ಅಶೇಷ ಪ್ರಜಾನೀಕವೂ ಅನುಸರಿಸಿಕೊಂಡಿದ್ದಿತು.

ಹೋಗಿ ಹೋಗಿ ರಾಮನು ನದೀಜಲದೊಳಗೆ ಪ್ರವೇಶಮಾಡಿದನು. ಹಿಂದೆಯೇ ಅವನ ತಮ್ಮಂದಿರೂ ಇಳಿದರು. ಆಗಲೇ ಗ್ರಹಣಬಿಟ್ಟು ಹೋಗಿ ತುಂಬು ಚಂದ್ರಬಿಂಬವು ದೇದೀಪ್ಯಮಾನವಾಗಿ ಪ್ರಕಾಶಿಸಿತು. ಆಕಾಶದಿಂದ ಜಲಜಲನೆ ಹೂವಿನ ಮಳೆ ಸುರಿಯಿತು. ಸಾಮ, ದೇವಗಾಂಧಾರ, ಹಿಂದೋಳ, ಸುರುಟಿ ರಾಗಗಳ ಮೇಳವಿಕೆಯೊಂದಿಗೆ ವೀಣಾನಾದಗಳು ನಾಲ್ಕು ದಿಕ್ಕುಗಳಿಂದಲೂ ಕೇಳಿಸಿದುವು.

ಎಂಟು ದಿಕ್ಕುಗಳೂ ಬೆಳುದಿಂಗಳ ರಾಶಿಯಂತೆ ತೋರಿದುವು. ಸುರಿಯುತ್ತಿದ್ದ ಹೂವಿನ ಮಳೆಯಿಂದ ಸರಯೂ ನದಿ ಕ್ಷೀರಸಾಗರದಂತೆ ಆ ಹೂಗಳ ತೆರೆಗಳಿಂದ ಬೆಟ್ಟವಷ್ಟೆತ್ತರಕ್ಕೆ ಚಲಿಸಿಕೊಂಡು ಹೋಯಿತು.

ಆದಕ್ಕೆ ಮೊದಲೇ ಕ್ಷೀರಸಾಗರದಲ್ಲಿ ಲಕ್ಷ್ಮಣನು ಶೇಷತಲ್ಪವಾಗಿ, ಸೀತೆ ಲಕ್ಷ್ಮೀದೇವಿಯಾಗಿ ಮಹಾವಿಷ್ಣುವನ್ನು ಇದಿರು ನೋಡಿಕೊಂಡಿದ್ದರು. ಭರತ ಶತ್ರುಘ್ನರು ಶಂಖಚಕ್ರಗಳಾಗಿ ಮಹಾವಿಷ್ಣುವಿನ ಕೈಗಳನ್ನು ಅಲಂಕರಿಸಿದರು. ವಿಷ್ಣು ಶೇಷತಲ್ಪದಲ್ಲಿ ಅರ್ಧಶಾಯಿತನಾಗಲು, ಲಕ್ಷ್ಮಿ ಅವನ ಪಾದಗಳನ್ನು ತನ್ನ ಕರಕಮಲಗಳಲ್ಲಿ ತೆಗೆದುಕೊಂಡು ತನ್ನ ತೊಡೆಗಳ ಮೇಲೆ ಇರಿಸಿಕೊಂಡಳು.



ಮಾಯಾಮಾನುಷ ವಿಗ್ರಹನಾಗಿ, ಉತ್ತಮ ಮಾನವನಾಗಿ, ಪಿತೃವಾಕ್ಯ ಪರಿಪಾಲನೆಗಾಗಿ ವನವಾಸಮಾಡಿ ಕಾರ್ಯಸಾಧಕನಾಗುವುದು ಹೇಗೆಂಬುದನ್ನು ತೋರಿಸಿದನು ರಾಮಾವತಾರದಲ್ಲಿ. ಸಹಾಯಕರಾಗಿ ವಾನರರನ್ನು ಕೂಡಿಸಿಕೊಂಡನು. ವಾರಿಧಿಯನ್ನು ಕಟ್ಟಿದನು. ಅಜೇಯನೆಂದು ಬೀಗಿಕೊಂಡಿದ್ದ ರಾವಣನನ್ನು ಹತಮಾಡಿ, ರಾಕ್ಷಸರ ದುಷ್ಪರಿಪಾಲನೆಯನ್ನು ಅಂತ್ಯಗೊಳಿಸಿದನು. ಸೀತೆಯನ್ನು ತಂದು ಏಕಪತ್ನೀವ್ರತಸ್ಥನಾಗಿ ಆದರ್ಶ ಪರಿಪಾಲನೆ ಮಾಡಿದ ರಾಮನ ಅವತಾರವು, ವಿಷ್ಣುವಿನ ದಶಾವತಾರಗಳಲ್ಲಿ ವಿಶೇಷವಾದುದೆಂದು ಕೀರ್ತಿಸಲ್ಪಡುತ್ತಿದೆ. ರಾಮರಾಜ್ಯವೆಂಬ ಹೆಸರು ಆಚಂದ್ರಾರ್ಕಸ್ಥಾಯಿಯಾಗಿದೆ.

ಸೂತಪುರಾಣಿಕನು ಹೀಗೆ ರಾಮಾವತಾರವನ್ನು ಮುಗಿಸಿದ ಮೇಲೆ, ಶೌನಕಾದಿಗಳಿಗೆ ಕೃಷ್ಣಾವತಾರವನ್ನು ಹೇಳಲು ಪ್ರಾರಂಭಿಸಿದನು.

ಶಿವನು ತನ್ನ ಭಕ್ತರಾದ ದಾನವ ಪ್ರಮುಖರನ್ನೆಲ್ಲಾ ವಿಷ್ಣು ಅವಲೀಲೆಯಾಗಿ ಅಂತ್ಯಗೊಳಿಸುವುದನ್ನು ನೋಡಿ, ಹುಬ್ಬು ಸುರುಗಿಸಿಕೊಂಡನು. ಆಗ ಆ ಕುಪಿತ ಶಿವನ ಕಣ್ಣುಬೊಂಬೆಗಳೆಡೆಯಿಂದ ಸಹಸ್ರಕವಚನೆಂಬ ಘೋರಾಕಾರದವನೊಬ್ಬನು ಉದ್ಭವಿಸಿ ಹೊರಬಿದ್ದನು. ಅವನ ಶರೀರದಲ್ಲಿ ಒಂದರ ಮೇಲೊಂದು ಪೊರೆಗಳಂತೆ ಸಾವಿರ ಕವಚಗಳಿದ್ದುವು. ಅಜೇಯವಾದ ಪ್ರಭಾವವನ್ನೊಳಗೊಂಡ ಕುಂಡಲಗಳು ಅಂಟಿಕೊಂಡಿದ್ದುವು. ಹುಟ್ಟಿದ ಕೂಡಲೇ ಅವನು ಭೀಕರವಾದ ಗರ್ಜನಾಧ್ವನಿಯಿಂದ, "ನಾನು ಬುದ್ಧಿಗೇಡಿಗಳಾದ ರಾಕ್ಷಸಮಾತ್ರನೇನಲ್ಲ. ರುದ್ರಾಂಶಸಂಭೂತನಾಗಿದ್ದೇನೆ. ಕೈಲಾಗುವವನಾಗಿದ್ದರೆ ಆ ವಿಷ್ಣು ನನ್ನನ್ನು ಏನು ಮಾಡುವನೋ ಮಾಡುವಂತೆ ಹೇಳಿರಿ!" ಎಂದು ಎಂಟು ದಿಕ್ಕುಗಳೂ ನಡುಗುವ ಹಾಗೆ ಕೂಗಿ ಹೇಳಿದನು. ಅವನ ವಿಜೃಂಭಣೆಯಿಂದ ಲೋಕಗಳೆಲ್ಲಾ ನಡುಗಿದುವು.

ಆಗ ವಿಷ್ಣು ನರನಾರಾಯಣರೆಂಬ ಜಂಟಿ ಋಷಿಗಳಾಗಿ ಅವತರಿಸಿದನು. ಆ ನರನಾರಾಯಣರು ಸಹಸ್ರ ಕವಚನನ್ನು ಜಯಿಸುವ ಶಕ್ತಿಗಳ ಸಾಧನೆಗಾಗಿ ಬಹುದೊಡ್ಡ ತಪಸ್ಸುಮಾಡಲು ತೊಡಗಿದರು. ಇಂದ್ರನು ಅವರಾರೆಂಬುದನ್ನರಿಯದೆ, ಅವರ ತಪಸ್ಸನ್ನು ಕೆಡಿಸಲು ಅಪ್ಸರಸಿಯರನ್ನು ಕಳುಹಿಸಿಕೊಟ್ಟನು. ನಾರಾಯಣನು ತನ್ನ ತೊಡೆಯಿಂದ ಊರ್ವಶಿಯನ್ನು ಹುಟ್ಟಿಸಿದುದನ್ನು ನೋಡಿ, ರಂಭಾದಿ ಅಪ್ಸರಸಿಯರು ನಾಚಿ ನಿರ್ವಿಣ್ಣರಾದರು. ಇಂದ್ರನು ನರನಾರಾಯಣರ ಮುಂದೆ ಓಡಿಬಂದು ಮಣಿದು ಕ್ಷಮಾಪಣೆ ಕೇಳಿದನು. ನಾರಾಯಣನು ಊರ್ವಶಿಯನ್ನು ಕರೆದುಕೊಂಡು ಹೋಗುವಂತೆ ಹೇಳಿ, ಅವಳನ್ನು ಇಂದ್ರನೊಂದಿಗೆ ಕಳುಹಿಸಿಕೊಟ್ಟನು. ಹಾಗೆ ಊರ್ವಶಿ ಸ್ವರ್ಗ ಸೇರಿದಳು.

ನರನಾರಾಯಣರು, ಒಬ್ಬರು ತಪಸ್ಸು ಮಾಡುವಾಗ, ಇನ್ನೊಬ್ಬರು ಸಹಸ್ರ ಕವಚನೊಂದಿಗೆ ಹೋರಾಡುತ್ತ, ಈ ವಿಧವಾಗಿ ಸಾವಿರ ವರ್ಷಗಳವರೆಗೆ ಮಾಡಿದರು. ಅಷ್ಟು ಹೊತ್ತಿಗೆ ಸಹಸ್ರ ಕವಚನ ಒಂಬೈನೂರ ತೊಂಬತ್ತೊಂಬತ್ತು ಕವಚಗಳು ಭೇದಿಸಲ್ಪಟ್ಟುವು.

ಕಡೆಗೆ ಸಹಸ್ರ ಕವಚನು ಒಂದೇ ಒಂದು ಕವಚದೊಂದಿಗೆ ಓಡಿಹೋಗಿ ಸೂರ್ಯನೊಳಗೆ ಹುದುಗಿಕೊಂಡನು.

"ಪ್ರಗಲ್ಭ ಪ್ರಲಾಪಮಾಡಿ ಕೊನೆಗೆ ಓಡಿಹೋಗಿಬಿಟ್ಟನು. ಕೈಲಾಗದ ಹೇಡಿ! ಇವನ ಕೆಲಸ ಕೃಷ್ಣಾವತಾರದಲ್ಲಿ ನೋಡುತ್ತೇನೆ!" ಎಂದು ವಿಷ್ಣು ನಿಶ್ಚಯಿಸಿಕೊಂಡನು.





ದ್ವೈತ ಮತ್ತು ತ್ರೇತಾಯುಗಗಳಾದ ಮೇಲೆ ಬರುವ ದ್ವಾಪರಯುಗದಲ್ಲಿ ಬಹು ಹೆಚ್ಚಿನ ಸಂಖ್ಯೆಯಲ್ಲಿ ರಾಕ್ಷಸರು ಮನುಷ್ಯರಾಗಿ ಹುಟ್ಟಿದುದರಿಂದ ಭೂಮಿಗೆ ಭಾರ ಹೆಚ್ಚಾಯಿತು. ಭೂದೇವಿ ಅಂತಹ ಕೆಟ್ಟ ಭಾರವನ್ನು ಹೊರಲಾಗದೆ, ಅದರಿಂದಾಗುವ ಬಾಧೆಯನ್ನು ತಾಳಲಾಗದೆ ದೇವತೆಗಳ ಆಲೋಚನೆಯಂತೆ, ವಿಷ್ಣುವಿನ ಹತ್ತಿರ ಹೋಗಿ ತನ್ನ ಕಷ್ಟವನ್ನು ಮೊರೆಯಿಟ್ಟುಕೊಂಡಳು.

"ದೇವೀ, ಸ್ವಲ್ಪ ಸಹನೆಯಿಂದಿರು. ನಾನು ಕೃಷ್ಣಾವತಾರವನ್ನೆತ್ತಿ ನಿನ್ನ ದುಃಖವನ್ನು ಪರಿಹರಿಸುತ್ತೇನೆ" ಎಂದು ಅಭಯವಿತ್ತನು ವಿಷ್ಣು. ಈ ಅಭಯ ವಚನದಿಂದಲೇ ಭೂದೇವಿಯ ಅರ್ಧಭಾರ ಕಡಿಮೆಯಾಯಿತು.

ಆದಿಕಾಲದಿಂದಲೇ ವಿಷ್ಣುವಿಗೆ ಪ್ರಬಲ ಶತ್ರುವಾದ ಕಾಲನೇಮಿ ರಾಕ್ಷಸನು ಕಂಸನಾಗಿ ಭೂಮಿಯಲ್ಲಿ ಹುಟ್ಟಿ ಬಂದನು. ಈ ಕಂಸನ ತಂದೆ ಮಥುರಾನಗರವನ್ನಾಳುವ ಉಗ್ರಸೇನ ಮಹಾರಾಜ.

ಕಂಸನು ಉಗ್ರಸೇನನ ಮಗನಾಗಿ ಹುಟ್ಟಿದುದೇ ಒಂದು ವಿಚಿತ್ರ ರೀತಿಯಲ್ಲಿ, ಉಗ್ರಸೇನನು ವಿವಾಹವಾದ ಮೇಲೆ ಸ್ವಲ್ಪ ಕಾಲ ಹೆಂಡತಿಯನ್ನು ಬಿಟ್ಟಿದ್ದನು. ವಿರಹತಾಪದಲ್ಲಿದ್ದ ರಾಣಿಯನ್ನು ರಾಕ್ಷಸನೊಬ್ಬನು ಉಗ್ರಸೇನನ ರೂಪತಾಳಿ ಮೋಸಪಡಿಸಿದನು. ಆಗಲೇ ಕಾಲನೇಮಿ ಅವಳ ಗರ್ಭವನ್ನು ಪ್ರವೇಶಿಸಿ ಕಂಸನಾಗಿ ಹುಟ್ಟಿದ್ದನು. ಹೀಗಾಗಿ ಸಾತ್ವಿಕ ಗುಣಗಳಿರುವ ಉಗ್ರಸೇನನು ಕೆಟ್ಟ ಮಗನ ತಂದೆ ಎನಿಸಿಕೊಳ್ಳಬೇಕಾಯಿತು.

ದೇವಾಸುರರ ಯುದ್ಧದಲ್ಲಿ ದಾನವರಿಗೆ ನಾಯಕನಾಗಿ ವಿಷ್ಣುವಿನೊಂದಿಗೆ ಹೋರಾಡಿದ ವಿಪ್ರಚಿತ್ತಿ ರಾಜನೇ ಮಗಧ ರಾಜ್ಯವನ್ನಾಳುವ ಜರಾಸಂಧನಾಗಿ ಹುಟ್ಟಿದನು. ಜರಾಸಂಧನು ಮಹಾ ಕ್ರೂರನೂ, ದೊಡ್ಡ ಬಲಶಾಲಿಯೂ ಆಗಿದ್ದನು. ಈ ಜರಾಸಂಧನು ರಾಜರನ್ನೆಲ್ಲ ಸೆರೆ ಹಿಡಿದು ತಂದು, ತಾನು ಪೂಜಿಸುವ ಭೈರವನಿಗೆ ಬಲಿಗೊಟ್ಟು ನೈವೇದ್ಯ ಮಾಡುತ್ತಿದ್ದನು. ಕಂಸನು ಜರಾಸಂಧನ ಅಳಿಯನಾಗಿದ್ದನು.



ಉಗ್ರಸೇನನ ತಮ್ಮನ ಕುಮಾರಿಯಾದ ದೇವಕಿಗೆ ಯದುವಂಶದ ರಾಜನಾದ ವಸುದೇವನೊಂದಿಗೆ ವಿವಾಹವಾಯಿತು, ಆ ಸಂದರ್ಭದಲ್ಲಿ ಒಂದು ವಿಚಿತ್ರ ಸಂಭವ ಘಟಿಸಿತು. ಹೊಸತಾಗಿ ಮದುವೆಯಾದ ದಂಪತಿಗಳನ್ನು ಕಂಸನು ರಥದ ಮೇಲೆ ಕುಳ್ಳಿರಿಸಿ ಕೊಂಡು ಬರುತ್ತಿದ್ದಾಗ, 'ಈ ದೇವಕಿಯ ಎಂಟನೇ ಸಂತಾನದಿಂದ ಕಂಸನು ಕೊಲ್ಲಲ್ಪಡುತ್ತಾನೆ' ಎಂದು ಆಕಾಶವಾಣಿ ಧ್ವನಿಸಿತು.

ಆಗ ಕಂಸನು ದೇವಕಿಯನ್ನು ಕೊಲ್ಲಲು ನೋಡಿದನು. ವಸುದೇವನು ಅಡ್ಡಬಂದು, ಬಹು ದೀನನಾಗಿ ಬೇಡಿಕೊಂಡನು. ದೇವಕಿ ಪ್ರಸವಿಸುವ ಶಿಶುಗಳನ್ನು ಕಂಸನಿಗೆ ಕೊಡುವೆನೆಂದು ಮಾತು ಕೊಟ್ಟನು. ಅದರಂತೆ ಆರು ಶಿಶುಗಳನ್ನು ಕಂಸನಿಗೆ ಕೊಟ್ಟುಬಿಟ್ಟನು ವಸುದೇವ.

ದೇವಕಿಯ ಏಳನೇ ಗರ್ಭದಲ್ಲಿ ವಿಷ್ಣುವಿನ ಆಜ್ಞೆ ಯಂತೆ ಆದಿಶೇಷನು ತನ್ನ ಅಂಶವನ್ನು ಸೇರಿಸಿದನು. ಆ ಪಿಂಡವನ್ನು ಗೋಕುಲದಲ್ಲಿದ್ದ ವಸುದೇವನ ಇನ್ನೊಬ್ಬಳು ಹೆಂಡತಿಯಾದ ರೋಹಿಣಿಯ ಗರ್ಭ ದೊಳಗೆ ಸೇರಿಸಿಬಿಟ್ಟನು ವಿಷ್ಣು. ಅನಂತರ ಯೋಗ ಮಾಯೆಯನ್ನು ನಂದಗೋಪನ ಹೆಂಡತಿಯಾದ ಯಶೋದೆಯ ಗರ್ಭದಲ್ಲಿ ಹುಟ್ಟುವಂತೆ ಆಜ್ಞೆ ಮಾಡಿದನು.

ಅದರಂತೆ ದೇವಕಿಯ ಏಳನೇ ಗರ್ಭವು ಪ್ರಸವ ವಾಗದೆ ಇಂಗಿಹೋಯಿತು. ಅನಂತರ ಎಂಟನೇ ಬಾರಿ ದೇವಕಿ ಗರ್ಭಿಣಿಯಾಗಿರುವಳೆಂದು ತಿಳಿದ ಕೂಡಲೇ, ಈ ಶಿಶುವೇ ತನ್ನನ್ನು ಕೊಲ್ಲುವಂತಹು ದೆಂದುಕೊಂಡು ಕಂಸನು ದೇವಕೀ ವಸುದೇವರನ್ನು ಕಾರಾಗೃಹದಲ್ಲಿ ಇರಿಸಿದನು.

ಶ್ರಾವಣಮಾಸ, ಕೃಷ್ಣಪಕ್ಷ ಅಷ್ಟಮಿಯದಿನ, ಚಂದ್ರನು ರೋಹಿಣೀ ನಕ್ಷತ್ರದೊಂದಿಗೆ ಇರುವಾಗ, ಮಧ್ಯರಾತ್ರಿಯ ಹೊತ್ತಿನಲ್ಲಿ ಕಾವಲಿನ ಭಟರು ಅವರಿಗೆ ತಿಳಿಯದಂತೆಯೇ ನಿದ್ದೆಯ ಮತ್ತಿನಲ್ಲಿ ಬಿದ್ದಿದ್ದರು.

ಆ ಸಮಯದಲ್ಲಿ ದೇವಕಿ ಗಂಡು ಮಗುವನ್ನು ಪ್ರಸವಿಸಿದಳು. ವಿಷ್ಣುವೇ ಅವಳ ಮಗನಾಗಿ ಅವತರಿಸಿ ಕೃಷ್ಣನೆನಿಸಿದನು. ಆಗ ಸೆರೆಮನೆಯ ಬಾಗಿಲು ತಾನಾಗಿ ತೆರೆಯಿತು.

ವಿಷ್ಣುವಿನ ಆದೇಶದಂತೆ ವಸುದೇವನು ಶಿಶು ಕೃಷ್ಣನನ್ನು ಎತ್ತಿಕೊಂಡು ಯಮುನಾ ನದಿಯನ್ನು ದಾಟಿ ಗೋಕುಲಕ್ಕೆ ಹೋದನು.

ಅದೇ ಸಮಯದಲ್ಲಿ ಗೋಕುಲದಲ್ಲಿ ಎಲ್ಲರನ್ನೂ ಮಾಯಾನಿದ್ರೆ ಆವಹಿಸಿರಲು, ಏನೂ ನೋವಿಲ್ಲದಂತೆ ನಿದ್ದೆಯಲ್ಲಿಯೇ ಹೆಣ್ಣು ಮಗುವನ್ನು ಹಡೆದ ಯಶೋದೆಯ ಬದಿಯಲ್ಲಿ ವಸುದೇವನು ಕೃಷ್ಣ ಶಿಶುವನ್ನು ಇಟ್ಟು, ಪ್ರಾಣವಿಲ್ಲದಂತಹ ಯಶೋದೆಯ ಹೆಣ್ಣು ಮಗುವನ್ನು ಎತ್ತಿಕೊಂಡು ಅಲ್ಲಿಂದ ಹೊರಟುಹೋದನು.

ಇದ್ದಕ್ಕಿದ್ದ ಹಾಗೆ ಸೆರೆಮನೆಯೊಳಗೆ ದಿಕ್ಕುಗಳನ್ನು ಕೊರೆಯುವಂತೆ ಆ ಹೆಣ್ಣು ಮಗು ಕ್ಯಾರು ಕ್ಯಾರೆಂದು ಕೂಗಿತು.

ಕೂಡಲೇ ಓಡಿ ಬಂದ ಕಂಸನು ಆ ಶಿಶುವನ್ನು ಎತ್ತಿಕೊಂಡು ಹೋಗಿ ವಧ್ಯಶಿಲೆಯ ಮೇಲೆ ಹೊಡೆದು ಕೊಲ್ಲಲು ಎತ್ತಿದನು. ಆಗ ಆ ಶಿಶು ಫಕ್ಕನೆ ಅವನ ಕೈಯಿಂದ ಜಾರಿ ಮೇಲಕ್ಕೆ ಹಾರಿ ಕಿಲಕಿಲನೆ ನಕ್ಕು, "ಎಲೋ ಕಂಸಾ! ನಿನ್ನನ್ನು ಕೊಲ್ಲುವವನು ಕ್ಷೇಮವಾಗೇ ಇದ್ದಾನೆ!" ಎಂದು ಹೇಳಿ ದುರ್ಗಾದೇವಿಯಾಗಿ ತೋರಿ, ಮರುಕ್ಷಣದಲ್ಲಿ ಮಾಯವೂ ಆಯಿತು.



ಗೋಕುಲದಲ್ಲಿ ಕೃಷ್ಣನು ಹುಟ್ಟಿದನೆಂದು ಸಂಭ್ರಮವಾಯಿತು. ಕೃಷ್ಣಾಷ್ಟಮಿ ಎಂದೂ, ಗೋಕುಲಾಷ್ಟಮಿ ಎಂದೂ ಆ ದಿನವು ಕೊಂಡಾಡಲ್ಪಟ್ಟಿತು. ಅದಕ್ಕೆ ಮೊದಲೇ ಕೃಷ್ಣನಿಗೆ ಅಣ್ಣನಾಗಿ ರೋಹಿಣಿಗೆ ಬಲರಾಮನು ಹುಟ್ಟಿದ್ದೂ ಆಗಿತ್ತು.

ಒಂದು ದಿನ ನಾರದನು ಕಂಸನ ಬಳಿಗೆ ಬಂದು, "ಕಂಸಾ, ನೀನು ಉಗ್ರಸೇನನ ಕುಮಾರನಾಗಿ ಕಂಡರೂ ನಿಜಕ್ಕೂ ನೀನು ಕಾಲನೇಮಿ. ನಿನ್ನನ್ನು ಕೊಲ್ಲಬೇಕೆಂದು ಹುಟ್ಟಿದ ಆ ವಿಷ್ಣು ಎಲ್ಲಿಯೋ ಇದ್ದಾನೆಂದು ಕೇಳಿರುವಿಯಷ್ಟೆ? ಸುಮ್ಮನಿರಬೇಡ. ನಿನ್ನ ಕರೆಯನ್ನು ಕಾಯುತ್ತ ಲೋಕದೊಳಗಿನ ನಿನ್ನ ಕಡೆಯ ರಾಕ್ಷಸರೆಲ್ಲಾ ಎದುರು ನೋಡುತ್ತಿದ್ದಾರೆ" ಎಂದು ಜಾಗ್ರತೆ ಹೇಳಿ ಹೋದನು.

ಇದರಿಂದ ಭೀತನಾದ ಕಂಸನು ಅಧಿಕಾರವಿಲ್ಲದೆ ಏನೂ ಮಾಡಲಾಗದೆಂದುಕೊಂಡು, ಮೊದಲು ತಂದೆಯಾದ ಉಗ್ರಸೇನನನ್ನು ಕಾರಾಗೃಹದಲ್ಲಿ ಬಂಧಿಸಿ ಸಿಂಹಾಸನವನ್ನು ಆಕ್ರಮಿಸಿಕೊಂಡನು.

ಹೀಗೆ ಕೇಳುವವರಿಲ್ಲದೆ ವಾತಾವರಣವು ತನಗೆ ತಕ್ಕಂತೆ ಸರಿಯಾದ ಮೇಲೆ ಎಲ್ಲೆಲ್ಲಿದ್ದ ರಾಕ್ಷಸರನ್ನೆಲ್ಲಾ ತನ್ನ ಬಳಿಗೆ ಕರೆಯಿಸಿ ಆಪ್ತರನ್ನಾಗಿ ಮಾಡಿಕೊಂಡನು. ಹುಟ್ಟಿದ ಹಸುಕಂದಗಳನ್ನು ಕೊಲ್ಲಲು ಮಾಯಾವಿನಿಯಾದ ಪೂತನಿಯನ್ನು ಕಳುಹಿಸಿದನು.

ಆ ರಕ್ಕಸಿ ಪೂತನಿ ಊರೊಳಗಿನ ಮಕ್ಕಳನ್ನು ಕೊಲ್ಲುತ್ತ ಮಾನವ ಸ್ತ್ರೀಯ ರೂಪದಲ್ಲಿ ಗೋಕುಲಕ್ಕೆ ಹೋದಳು. ಕೃಷ್ಣನಿಗೂ ವಿಷದ ಹಾಲು ಕುಡಿಸಲು, ಆ ಪೂತನಿ ಕೃಷ್ಣನನ್ನು ಎತ್ತಿಕೊಂಡಾಗ, ಕೃಷ್ಣನು ಅವಳ ಪ್ರಾಣವನ್ನೇ ಹೀರಿಕೊಂಡು ಹಾಕಿದನು,

ಆಮೇಲೆ ಕಂಸನು ಕಳುಹಿಸಿದ ತೃಣಾವರ್ತನೆಂಬ ರಾಕ್ಷಸನು ಸುಳಿಗಾಳಿಯಾಗಿ ಕೃಷ್ಣನನ್ನು ಆಕಾಶಕ್ಕೆ ಎತ್ತಿಕೊಂಡು ಹೋಗಲು, ಕೃಷ್ಣ ಶಿಶು ಅವನನ್ನೂ ಕೊಂದಿತು. ಬಂಡಿಯಾಗಿ ಮುಗಿಬಿದ್ದ ಶಕಟಾಸುರನನ್ನೂ, ಕೃಷ್ಣನು ತುಳಿದು ಚೂರು ಚೂರು ಮಾಡಿದನು. ಯಶೋದೆ ಅದ್ಭುತ ಶಕ್ತಿಯುಳ್ಳ ತನ್ನ ಮಗ ಕೃಷ್ಣನನ್ನು ಅತ್ಯಂತ ಮುದ್ದಿನಿಂದ ಬೆಳೆಸುತ್ತ ಸಂತೋಷಪಡುತ್ತಿದ್ದಳು.



ಬಾಲಕೃಷ್ಣನು ದೊಡ್ಡ ತಂಟೆಗಾರನಾಗಿ, ಪುಂಡಾಟ ಮಾಡುತ್ತ ಪ್ರತಿಯೊಬ್ಬರ ಮನೆಯಿಂದಲೂ ಬೆಣ್ಣೆ ಕದ್ದು ತಿನ್ನುತ್ತಿದ್ದನು.

ಕೃಷ್ಣನ ಬಾಲಲೀಲೆಗಳಿಗೆ ತುದಿ ಮೊದಲಿರಲಿಲ್ಲ, ಕೃಷ್ಣಲೀಲೆಗಳಿಂದ ಗೋಕುಲ ತುಂಬಾ ಆನಂದತರಂಗ ಮಯವಾಗಿ ಹೋಯಿತು.

ಎಡೆಯೆಡೆಯಲ್ಲಿ ಕೃಷ್ಣನ ತಂಟೆ ತಾಳಲಾಗ ದಂತಾಗುತ್ತಿತ್ತು. ಒಮ್ಮೆ ಯಶೋದೆ ಕೃಷ್ಣನನ್ನು ಒರಳಿಗೆ ಕಟ್ಟಿ ಹಾಕಿದಳು. ಕೃಷ್ಣನು ಎರಡು ಜಂಟಿ ಮರಗಳ ಸಂದಿನಲ್ಲಿ ತೂರಿ ಆ ಮರಗಳನ್ನು ಬೇರಿನೊಂದಿಗೆ ಉರುಳಿಸಿ, ಗಂಧರ್ವರನ್ನು ಶಾಪ ದಿಂದ ಮುಕ್ತ ಗೊಳಿಸಿದನು.

ಮಣ್ಣು ತಿಂದನೆಂಬ ದೂರುಕೇಳಿ, ಯಶೋದೆ ಬಾಯಿ ತೋರಿಸಲು ಹೇಳಿದಾಗ, ಅವಳಿಗೆ ತನ್ನ ಬಾಯಿಯೊಳಗೆ ವಿಶ್ವರೂಪವನ್ನೇ ತೋರಿಸಿ ಬೆರಗಾಗಿಸಿದನು ಬಾಲಕೃಷ್ಣ.

ಕಾಳೀಯ ಮಹಾಸರ್ಪದ ಹೆಡೆಗಳ ಮೇಲೆ ಕೃಷ್ಣನು ತಾಂಡವ ನೃತ್ಯಮಾಡಿ ಅದನ್ನು ದುರ್ದನ ಮಾಡಿ ಓಡಿಸಿದನು.

ಗೋಕುಲ ನಿವಾಸಿಗಳೆಲ್ಲಾ ಬೃಂದಾವನಕ್ಕೆ ವಲಸೆ ಹೋಗಿದ್ದರು. ಅಲ್ಲಿ ತನ್ನನ್ನು ಪೂಜಿಸಲಿಲ್ಲವೆಂದು ಇಂದ್ರನಿಗೆ ಕೋಪಬಂದು ಗುಡುಗು ಸಿಡಿಲು ಗಳೊಂದಿಗೆ ಜಡಿಮಳೆ ಸುರಿಸಿದನು. ಗೋಕುಲ ವಿಡೀ ಹಾಹಾಕಾರದಿಂದ ತುಂಬಿತು. ಆಗ ಕೃಷ್ಣನು ಒಂದೇ ಕಿರಿಬೆರಳಿನಿಂದ ಗೋವರ್ಧನಗಿರಿಯನ್ನೆತ್ತಿ ಕೊಡೆಯಂತೆ ಹಿಡಿದು ಗೋವುಗಳನ್ನೂ, ಗೋಪ ಜನ ರನ್ನೂ ಕಾಪಾಡಿ ಇಂದ್ರನ ಗರ್ವವನ್ನು ಮುರಿದನು.

ವೇಣುಗೋಪಾಲನಾಗಿ ಕೃಷ್ಣನು ಹಸುಗಳ ಮಂದೆ ಯನ್ನು ಕಾಯ್ವನು, ಮುರಳೀ ಗಾನದಿಂದ ಗೋವು ಗಳನ್ನು ಮಾತ್ರವಲ್ಲದೆ, ಗೋಪಿಕೆಯರನ್ನೂ ಪರವಶ ಗೊಳಿಸಿದನು. ರೂಪ ಬದಲಾಯಿಸಿಕೊಂಡು ಬಂದ ಅನೇಕ ಮಂದಿ ರಾಕ್ಷಸರನ್ನು ಹತ ಮಾಡಿದನು. ಕೆಲವರನ್ನು ಬಲರಾಮನು ಕೊಂದನು.

ಕಡೆಗೆ ಕೃಷ್ಣ ಬಲರಾಮರೇ ತನ್ನ ಪ್ರಬಲ ವೈರಿ ಗಳೆಂದು ಕಂಸನಿಗೆ ಗಟ್ಟಿಯಾಗಿ ತಿಳಿಯಿತು. ತನ್ನ ಕಣ್ಣೆದಿರೇ ಅವರನ್ನು ಕೊಲ್ಲಲು ನಿರ್ಧರಿಸಿ, ಕಂಸನು ತಾನು ಧನುರ್ಯಾಗ ಮಾಡುವೆನೆಂಬ ನೆವನದಲ್ಲಿ ಅವರನ್ನು ಮಥುರಾನಗರಕ್ಕೆ ಅಕ್ರೂರನ ಮೂಲಕ ಬರಮಾಡಿ ಕೊಂಡನು. ಅವರನ್ನು ಕೊಲ್ಲಲು ತಯಾರಾದವರೆಲ್ಲರೂ ಅವರಿಂದ ಹತರಾದರು.

ಕೃಷ್ಣನು ನೇರಾಗಿ ಹೋಗಿ ಸಿಂಹಾಸನದಲ್ಲಿದ್ದ ಕಂಸನನ್ನು ಜುಟ್ಟು ಹಿಡಿದು ಕೆಳಗೆಳೆದು ಮುಷ್ಟಿ ಘಾತದಿಂದ ಕೊಂದನು.

ಆಮೇಲೆ ಕೃಷ್ಣನು ದೇವಕೀ ವಸುದೇವರನ್ನೂ, ಹಿರಿಯ ರಾಜನಾದ ಉಗ್ರಸೇನನನ್ನೂ ಸೆರೆ ಮನೆ ಯಿಂದ ಬಿಡುಗಡೆ ಮಾಡಿ, ಉಗ್ರಸೇನನನ್ನು ಸಿಂಹಾಸನದ ಮೇಲೆ ಕೂಡಿಸಿದನು.



ಈ ಬಗೆಯ ಮಹಾ ಮಹಾ ಕಾರ್ಯಗಳನ್ನು ಸಾಧಿಸಿ ಕೃಷ್ಣ ಬಲರಾಮರು ಯುವಕರಾದಾಗ, ಯದುವಂಶದವರಿಗೆಲ್ಲ ಅವರು ನಾಯಕರಾದರು. ಯದುವಂಶವೂ ಪ್ರಸಿದ್ಧವಾಯಿತು.

ಜರಾಸಂಧನೇ ಕೃಷ್ಣನ ಪ್ರಬಲ ವೈರಿ. ತನ್ನ ಕುಮಾರಿಯರಾದ ಅಸ್ತೀ ಮತ್ತು ಪ್ರಾಪ್ತೀಯರನ್ನು ವಿಧವೆಯರಾಗುವಂತೆ ಮಾಡಿದ ಕೃಷ್ಣನ ಮೇಲೆ ಅವನು ತೀವ್ರ ಹಗೆ ತೊಟ್ಟಿದ್ದನು. ಅಂತೆಯೇ ಅವನು ಬಹಳ ಸಾಧನೆ ಮಾಡಿ ಇಪ್ಪತ್ತ ಮೂರು ಅಕ್ಷೋಹಿಣೀ ಸೈನ್ಯದೊಂದಿಗೆ ಬಂದು ಮಥುರೆಯನ್ನು ಮುತ್ತಿದನು.

ಅವನ ಪ್ರಯತ್ನವು ವಿಫಲವಾಯಿತು. ಕೃಷ್ಣನು ಜರಾಸಂಧನನ್ನು ಸೋಲಿಸಿ, ಜೀವದೊಂದಿಗೆ ಪಾರಾಗಿ ಹೋಗಲು ಬಿಟ್ಟನು.

ಹಗೆ ತೊಟ್ಟ ಜರಾಸಂಧನು, ವಾಮ ಮಾರ್ಗದ ಉಪಾಯವನ್ನು ಹಿಡಿದು, ಯವನ ಮ್ಲೇಚ್ಛರ ರಾಜನಾದ ರಾಕ್ಷಸ ಕಾಲಯವನನನ್ನು ಉಬ್ಬಿಸಿ ಕೆರಳಿಸಿ ಚೆನ್ನಾಗಿ ಹುರಿಗೊಳಿಸಿ, ಕೃಷ್ಣನ ಮೇಲೆ ಜಗಳಕ್ಕೆ ಕಾಲು ಕೆದರಿಸಿ ಯುದ್ಧಕ್ಕೆ ಕಳುಹಿಸಿದನು.

ಕೃಷ್ಣನು ಕಾಲಯವನನಿಗೆ ಸಿಕ್ಕದಂತೆ ಓಡುತ್ತ ಓಡುತ್ತ ಒಂದು ದೊಡ್ಡ ಗುಹೆಯೊಳಗೆ ನುಗ್ಗಿದನು. ಆ ಗುಹೆಯಲ್ಲಿ ಮುಚುಕುಂದನು ನಿದ್ದೆಯಲ್ಲಿದ್ದನು. ಕೃಷ್ಣನು ಸದ್ದಿಲ್ಲದೆ ಅವನನ್ನು ದಾಟಿ ಆಚೆಗೆ ಹೋಗಿ ಅಡಗಿದನು.

ಮುಚುಕುಂದನು ಇಕ್ಷ್ವಾಕು ರಾಜರ ಕಾಲದ ಮಾಂಧಾತನ ಕುಮಾರನು. ದೊಡ್ಡ ರಾಜನಾಗಿ ಮೆರೆದ ಮುಚುಕುಂದನು ಯುದ್ಧಗಳಲ್ಲಿ ದೇವತೆಗಳಿಗೂ ಸಹಾಯ ಮಾಡಿದವನು. ದೇವತೆಗಳು ಮೆಚ್ಚಿ ವರವನ್ನು ಕೇಳುವಂತೆ ಹೇಳಲು, ತನಗೆ ಮೋಕ್ಷಬೇಕೆಂದು ಮುಚುಕುಂದನು ಕೇಳಿದನು.

ದ್ವಾಪರ ಯುಗದಲ್ಲಿ ಕೃಷ್ಣನ ದರ್ಶನವಾದ ಮೇಲೆ ಮೋಕ್ಷ ಸಿದ್ಧಿಸುವುದೆಂದು ದೇವತೆಗಳು ಹೇಳಿದರು. ಅದುವರೆಗೆ ನಿದ್ರಿಸುವೆನೆಂದೂ, ತನ್ನ ನಿದ್ರೆಯನ್ನು ಕೆಡಿಸಿದವರು ತಾನು ನೋಡಿದ ಕೂಡಲೇ ಬೂದಿಯಾಗಿ ಹೋಗಬೇಕೆಂದೂ ಅವನು ವರ ಪಡೆದಿದ್ದನು.

ಕಾಲಯವನನು ಕೃಷ್ಣನನ್ನು ಓಡಿಸಿಕೊಂಡು ಆ ಗುಹೆಗೆ ಹೊಕ್ಕು, ಮಲಗಿದ್ದ ಮುಚುಕುಂದನನ್ನು ಕೃಷ್ಣನೆಂದುಕೊಂಡು ಒದೆದನು. ನಿದ್ರಾಭಂಗವಾದ ಮುಚುಕುಂದನು ತೀಕ್ಷ್ಣದೃಷ್ಟಿಯಿಂದ ನೋಡಿದ್ದೇ ತಡ, ಕಾಲಯವನನು ಭಗ್ಗನೆ ಉರಿದು ಬೂದಿಯಾಗಿ ಹೋದನು.

ಆಮೇಲೆ ಕೃಷ್ಣನು ಮುಚುಕುಂದನಿಗೆ ದರ್ಶನವಿತ್ತು, ಬದರಿಕಾಶ್ರಮಕ್ಕೆ ಹೋಗಿ ತಪಸ್ಸು ಮಾಡಿದರೆ ಮೋಕ್ಷ ಸಿದ್ಧಿಸುವುದೆಂದು ಹೇಳಿ, ಮುಚುಕುಂದನನ್ನು ಕಳುಹಿಸಿಕೊಟ್ಟನು.



ಶಾಪಗ್ರಸ್ತರಾದ ಜಯವಿಜಯರು, ಅವರ ಮೂರನೇ ಜನ್ಮದಲ್ಲಿ ಶಿಶುಪಾಲ, ದಂತವಕ್ತ್ರರೆಂಬ ಹೆಸರಿನಿಂದ ಕೃಷ್ಣನಿಗೆ ಶತ್ರುಗಳಾಗಿ ಜನ್ಮಿಸಿದ್ದರು. ಚೇದಿ ದೇಶಕ್ಕೆ ರಾಜನಾದ ದಮಘೋಷನಿಗೆ ಕುಮಾರನಾಗಿ ಶಿಶುಪಾಲನು ವಿಚಿತ್ರವಾಗಿ ಹುಟ್ಟಿದ್ದನು. ಹುಟ್ಟಿದ ಮಗುವಿಗೆ ನಾಲ್ಕು ಕೈಗಳೂ ಮೂರು ಕಣ್ಣುಗಳೂ ಇದ್ದುವು.

ಯಾರು ಮಗುವನ್ನು ಎತ್ತಿಕೊಂಡಾಗ ಎರಡು ಕೈಗಳೂ, ಮೂರನೇ ಕಣ್ಣೂ ಮಾಯವಾಗುವುದೋ ಅವರ ಕೈಯಲ್ಲೇ ಕೊಲ್ಲಲ್ಪಡುತ್ತಾನೆಂದು ಆಕಾಶವಾಣಿಯಾಯಿತು.

ಶಿಶುಪಾಲನ ತಾಯಿ ಸಾತ್ವತಿ ಬಂದವರ ಕೈಗೆಲ್ಲಾ ಆ ಮಗುವನ್ನು ಎತ್ತಿಕೊಳ್ಳಲು ಕೊಡುತ್ತಿದ್ದಳು. ಈ ಸಾತ್ವತಿ ಕೃಷ್ಣ ಬಲರಾಮರಿಗೆ ಅತ್ತೆಯಾಗಬೇಕು. ಸಾತ್ವತಿ ಅವರ ಕೈಗೂ ಮಗುವನ್ನು ಕೊಟ್ಟಳು. ಕೃಷ್ಣನು ಎತ್ತಿಕೊಂಡ ಕೂಡಲೇ ಮಗುವಿನ ಹೆಚ್ಚಿನ ಕೈಗಳೂ, ಕಣ್ಣೂ ಮಾಯವಾಗಿಹೋಗಿ ಸಾಧಾರಣ ಶಿಶುವಿನಂತಾಯಿತು.

ಅದನ್ನು ನೋಡಿ ಸಾತ್ವತಿ ತುಂಬಾ ಹೆದರಿದಳು. ಶಿಶುಪಾಲನು ನೂರು ತಪ್ಪು ಮಾಡಿದರೂ ಕೋಪ ತೋರಿಸದೆ ಕ್ಷಮಿಸಿಕೊಳ್ಳುವಂತೆ ಸಾತ್ವತಿ ಕೃಷ್ಣನನ್ನು ಕೇಳಿಕೊಂಡಳು. ಹಾಗೆಯೇ ಆಗಲೆಂದು ಅವಳಿಗೆ ಮಾತು ಕೊಟ್ಟನು ಕೃಷ್ಣ.

ಶಿಶುಪಾಲನು ರಾಜನಾದ ಮೇಲೆ ಜರಾಸಂಧನೊಂದಿಗೆ ಸೇರಿ, ಅಪರಾಧಗಳನ್ನೂ ಅತ್ಯಾಚಾರಗಳನ್ನೂ ನಾನಾಬಗೆಯಾಗಿ ಮಾಡುತ್ತಾ ಬಂದನು. ಅವನ ತಮ್ಮ ದಂತವಕ್ತ್ರನೂ ಅವನಿಗೆ ಜತೆಯಾಗಿದ್ದನು.

ಜರಾಸಂಧನು ಮಾತುಮಾತಿಗೂ ಮಥುರಾನಗರದ ಮೇಲೆ ದಾಳಿ ಮಾಡುತ್ತಿದ್ದನು. ಕೃಷ್ಣನು ಅವನನ್ನು ಪದೇಪದೇ ಸೋಲಿಸಿ ಓಡಿಸುತ್ತಲೇ ಇದ್ದನು. ಇದರಿಂದ ಭೂಮಿಯಲ್ಲಿದ್ದ ದುಷ್ಟರಾದ ಎಷ್ಟೋ ರಾಜರು ಸತ್ತರು.

ಕೃಷ್ಣನು ಸಮುದ್ರ ರಾಜನನ್ನು ಪ್ರಾರ್ಥಿಸಿ ಸ್ಥಳ ಕೇಳಿದನು. ಸಮುದ್ರದ ಮಧ್ಯದಲ್ಲಿ ವಿಶ್ವಕರ್ಮನಿಂದ ಸುರಕ್ಷಿತವಾದ ದ್ವಾರಕಾನಗರವನ್ನು ವೈಭವೋಪೇತವಾಗುವಂತೆ ನಿರ್ಮಾಣ ಮಾಡಿಸಿ, ಕೃಷ್ಣನು ತನ್ನವರೆಲ್ಲರೊಂದಿಗೆ ಹೋಗಿ ದ್ವಾರಕೆಗೆ ಸೇರಿಕೊಂಡನು.

ಜರಾಸಂಧನು ಪಟ್ಟುಬಿಡದೆ ಕೊನೆಯಸಾರಿಯಾಗಿ, ಶಿಶುಪಾಲ, ದಂತವಕ್ತ್ರ, ಪೌಂಡ್ರಕ, ಸಾಳ್ವ ಮೊದಲಾದ ತನ್ನ ಅನುಯಾಯಿಗಳಾದ ರಾಜರನ್ನೆಲ್ಲಾ ಕೂಡಿಸಿಕೊಂಡು ಹೋಗಿ ಮಥುರೆಯನ್ನು ಮುತ್ತಿಗೆ ಹಾಕಿದನು,

ಅದಕ್ಕೆ ಮೊದಲೇ ಯಾದವರನ್ನೂ, ಮಥುರೆಯ ಪ್ರಜೆಗಳನ್ನೂ ದ್ವಾರಕೆಗೆ ಸೇರಿಸಿ ಹಿಂದಿರುಗಿ ಬಂದಿದ್ದ ಕೃಷ್ಣ ಬಲರಾಮರು, ಪ್ರವರ್ಷಣಗಿರಿಯ ಶಿಖರಾಗ್ರವನ್ನು ಆಧಿರೋಹಿಸಿ ನಿಂತರು.

ಅದನ್ನು ನೋಡಿ ಜರಾಸಂಧಾದಿಗಳು ಪ್ರವರ್ಷಣ ಗಿರಿಯ ಸುತ್ತಲೂ ಬೆಂಕಿಹಚ್ಚಿ ಗಿರಿಯನ್ನು ಸುಡ ತೊಡಗಿದರು. ಅದನ್ನು ನೋಡಿ ನಗುತ್ತಾ ಕೃಷ್ಣ ಬಲರಾಮರು ಗರುಡನ ಮೇಲೇರಿ ಆಕಾಶ ಮಾರ್ಗ ದಿಂದ ಸುರಕ್ಷಿತವಾಗಿ ದ್ವಾರಕೆಯನ್ನು ಸೇರಿಕೊಂಡರು.

ಜರಾಸಂಧನೂ ಶಿಶುಪಾಲನೂ ಕೃಷ್ಣ ಬಲರಾಮರು ದಗ್ಧರಾಗಿ ಹೋದರೆಂದು ಸಂತೋಷಪಡುತ್ತ, ಹೊರಟುಹೋಗುತ್ತಿರುವಾಗ, ದ್ವಾರಕೆಯಿಂದ ಕೃಷ್ಣನು ಮೊಳಗಿಸಿದ ಪಾಂಚಜನ್ಯ ಶಂಖಧ್ವನಿಯನ್ನು ಕೇಳಿ, ಬಿಳುಪೇರಿದ ಮೋರೆಯಿಂದ ಒಬ್ಬರನ್ನೊಬ್ಬರು ನೋಡಿದರು.

ಶಿಶುಪಾಲನು ರೊಚ್ಚಿಗೆದ್ದು ಹಿಂದಿರುಗಿ ಹೋಗಿ ಮಥುರಾನಗರವನ್ನು ಪೂರ್ತಿ ಸುಟ್ಟು ಹಾಕಿದನು.

ಜರಾಸಂಧನು ದ್ವಾರಕೆಯನ್ನು ಮುತ್ತಿಗೆ ಹಾಕಲು ನೌಕೆಗಳಲ್ಲಿ ಅಸಂಖ್ಯ ಸೈನಿಕರನ್ನು ಕಳುಹಿಸಿದನು. ಸಮುದ್ರದಲ್ಲಿ ಎದ್ದ ಪ್ರಚಂಡ ಚಂಡಮಾರುತದ ಸುಳಿದಾಳಿಗಳಿಗೆ ಸಿಕ್ಕಿ ಸೈನಿಕರ ನೌಕೆಗಳೆಲ್ಲಾ ಮುಳುಗಿ ಹೋದುವು. ಜರಾಸಂಧನು ಈಚೆಗೆ ಸಮುದ್ರ ತೀರದಲ್ಲಿ ನಿಂತು ಬೆಟ್ಟದಂತಹ ತೆರೆಗಳನ್ನು ನೋಡು ತ್ತಿರುವಾಗ, "ಓ! ತಾತಾ!" ಎಂದು ಕೃಷ್ಣನು ಅವನನ್ನು ಗಟ್ಟಿಯಾಗಿ ಕೂಗಿ ಕರೆದು, ಗಲಗಲವೆಂದು ನಗಾಡಿದನು.

ಅದನ್ನು ಕೇಳಿ ಜರಾಸಂಧನು ಆ ಕಡೆಗೆ ತಿರುಗಿ ನೋಡಲು, ಸಮುದ್ರದಲ್ಲಿ ಒಂದು ಬಂಡೆಯ ಮೇಲೆ ನಿಂತು ನಗಾಡುವ ಕೃಷ್ಣನನ್ನು ನೋಡಿದನು.

"ಅಯ್ಯಾ! ಜರಾಸಂಧ ಮಹಾಶಯಾ! ಈಗ ಏನು ಮಾಡಲಿಕ್ಕೂ ನಿನ್ನಿಂದಾಗದು. ದ್ವಾರಕೆಯನ್ನು ಸೇರಲು ಸಮುದ್ರರಾಜನು ನಿನ್ನನ್ನು ಬಿಡಲಾರನು. ನಿನಗೆ ನನ್ನ ಕೈಯಲ್ಲಿ ಸಾಯುವ ಅದೃಷ್ಟವೇ ಇಲ್ಲ. ನಿನಗೆ ಸರಿಸಮನಾದ ಬಲವಂತನೊಬ್ಬನ ಕೈಯಲ್ಲೇ ಮರಣ ಬರೆದಿದೆ. ಸ್ವಲ್ಪ ಕಾಲ ಕಳೆದ ಮೇಲೆ ನಿನಗೆ ನನ್ನ ಪುನರ್ದರ್ಶನವಾಗುತ್ತದೆ. ಈಗ ಸುಮ್ಮನೆ ಹೋಗು!" ಎಂದು ಹೇಳಿದನು ಕೃಷ್ಣ.

ಅದಾದ ಮೇಲೆ ಶಿಶುಪಾಲನಿಗೆ ರುಕ್ಮಿಣಿಯೊಂದಿಗೆ ಮದುವೆ ಎಂಬ ಸಮಾಚಾರ ಕೇಳಿಸಿತು. ರುಕ್ಮಿಣಿ ವಿದರ್ಭ ರಾಜನಾದ ಭೀಷ್ಮಕನ ಮಗಳು. ಚಿಕ್ಕ ಪ್ರಾಯದಿಂದಲೇ ಆವಳು ಕೃಷ್ಣನ ಮಹಿಮೆಗಳನ್ನು ಕೇಳಿ, ಅವನೇ ತನ್ನ ನಾಯಕನೆಂದು ಮನಸಾ ಕೃಷ್ಣ ನನ್ನು ವರಿಸಿಕೊಂಡವಳು. ಆದರೆ ರುಕ್ಮಿಣಿಯ ಅಣ್ಣನಾದ ರುಕ್ಮಿ, ಕೃಷ್ಣನ ಶತ್ರುವರ್ಗದೊಂದಿಗೆ ಸೇರಿ, ತಂಗಿಯನ್ನು ಶಿಶುಪಾಲನಿಗೆ ಕೊಟ್ಟು ವಿವಾಹ ಮಾಡಬೇಕೆಂದು ಸರ್ವಸನ್ನಾಹಗಳನ್ನೂ ಮಾಡಿ ಕೊಂಡಿದ್ದನು.







ಕೃಷ್ಣನ ಔನ್ನತ್ಯವು ಬೆಳೆಯುತ್ತಿದ್ದಂತೆಯೇ ಕೃಷ್ಣನ ಶತ್ರುಗಳು ಕೂಡಾ ಬೆಳೆಯುತ್ತಿದ್ದರು. ಆ ಶತ್ರುಗಳಲ್ಲಿ ಮುಖ್ಯಸ್ಥರಾದ ಶಿಶುಪಾಲ, ಜರಾಸಂಧರ ಕೂಟಗಳೊಂದಿಗೆ ದುಷ್ಟರೂ, ದುರ್ಮಾರ್ಗಿಗಳೂ ಆದ ಅನೇಕ ರಾಜರು ಸೇರಿಕೊಂಡರು. ಪೌಂಡ್ರಕನೆಂಬ ಕರೂಶ ದೇಶದ ರಾಜನು ಕೃತ್ರಿಮವಾದ ಮರದ ಕೈಗಳನ್ನು ಜೋಡಿಸಿಕೊಂಡು, ಶಂಖ, ಚಕ್ರಗಳನ್ನು ಮಾಡಿಸಿ ಆ ಕೈಗಳಿಗೆ ಅಂಟಿಸಿ, ದೊಡ್ಡದೊಂದು ಗದೆಯನ್ನು ಕೂಡಾ ಹಿಡಿದು, ತಾನೇ ವಿಷ್ಣುವಿನ ಅವತಾರವೆಂದೂ, ತಾನೇ ವಾಸುದೇವನೆಂದೂ ಪ್ರಗಲ್ಭತೆಯಿಂದ ಸಾರಿಕೊಂಡಿದ್ದನು. ಶಿಶುಪಾಲನ ಮತ್ತೊಬ್ಬ ತಮ್ಮನಾದ ಸಾಲ್ವನು ಸೌಭಕವೆಂಬ ವಿಮಾನದಲ್ಲಿ ದ್ವಾರಕಾ ನಗರದ ಮೇಲೆ ವಿಹರಿಸುತ್ತ, ಜಗಳಕ್ಕೆ ಕಾಲು ಕೆದರಿಕೊಂಡಿದ್ದನು. ಪೂರ್ವದಿಕ್ಕಿನಲ್ಲಿ ನರಕಾಸುರನು ಅಟ್ಟಹಾಸ ಮಾಡಿಕೊಂಡಿದ್ದನು. ದಕ್ಷಿಣದಲ್ಲಿ ಬಲಿಚಕ್ರವರ್ತಿಯ ಕುಮಾರನಾದ ಬಾಣಾಸುರನು ಶಿವನ ರಕ್ಷಣೆಯ ಬಲದಿಂದ ನಿರ್ಭೀತನಾಗಿ ಶೋಣಪುರವನ್ನು ರಾಜಧಾನಿ ಮಾಡಿಕೊಂಡು ರಾಕ್ಷಸ ಪರಿಪಾಲನೆ ಸಾಗಿಸುತ್ತಿದ್ದನು, ಅವನ ಶಾಸನಗಳು ನೆರೆಹೊರೆಗಳಿಗೆಲ್ಲಾ ವಿಸ್ತರಿಸಿಕೊಂಡಿದ್ದುವು.

ಇನ್ನೊಂದು ಕಡೆ ಕಾಲಯವನನ ತಮ್ಮನಾದ ಕಾಲಾಂತಕನು, ತನಗೆ ಜೀವದೊಂದಿಗಿರುವ ಯಾವ ಪ್ರಾಣಿಯಿಂದಲೂ ಭಯವಿಲ್ಲವೆಂಬ ದೈವಜ್ಞವಚನದ ವಿಶ್ವಾಸದ ಧಿಮಾಕಿನಲ್ಲಿ ಮ್ಲೇಚ್ಛ ಯವನರ ಸೈನ್ಯಗಳೊಂದಿಗೆ ದಾರುಣವಾಗಿ ರಕ್ತಪಾತ ನಡೆಸುತ್ತ, ದೇವತಾ ವಿಗ್ರಹಗಳನ್ನೂ ಶಿಲ್ಪಗಳನ್ನೂ ಧ್ವಂಸ ಮಾಡುತ್ತ, ದೇಶಗಳನ್ನು ಕೊಳ್ಳೆ ಹೊಡೆಯುತ್ತ ಕೃಷ್ಣನನ್ನು ಸಂಹರಿಸುವ ಗುರಿಯಿಂದಲೇ ಇದ್ದನು.

ಅವನು ಹಾಗೆ ದಂಡಯಾತ್ರೆ ಮಾಡಿಕೊಂಡು ಗಾಂಧಾರ ಸೀಮೆಯಲ್ಲಿ, ಹಾಳುಗಲ್ಲಿನಲ್ಲಿ ಕಡೆಯಲ್ಪಟ್ಟ ಜಗನ್ಮೋಹನವಾದ ಮೋಹಿನಿಯ ಶಿಲ್ಪವನ್ನು ನೋಡಿ ಅದರ ಸೌಂದರ್ಯದಿಂದ ವಿವಶನಾದನು. ಆ ಮೋಹಿನೀ ವಿಗ್ರಹವನ್ನು ಕೃಷ್ಣನು ವಿಶ್ವ

೧೭. ಕೃಷ್ಣವಿಜಯ



ಕರ್ಮನಿಂದ ಮಾಡಿಸಿ, ತನ್ನ ಯೋಗ ಮಾಯಾಗ್ನಿ ಯನ್ನು ಅದರೊಳಗೆ ಅಡಗಿಸಿಟ್ಟಿರುವನೆಂಬ ರಹಸ್ಯವು ಕಾಲಾಂತಕನಿಗೆ ತಿಳಿದಿರಲಿಲ್ಲ,

ಆ ಸಾಲಭಂಜಿಕಾ ವಿಗ್ರಹವನ್ನು ಕಾಲಾಂತಕನು ಎತ್ತಿಕೊಂಡು ಹೋಗಿ ತನ್ನ ಅಂತಃಪುರ ಮಂದಿರ ದೊಳಗೆ ಇಟ್ಟುಕೊಂಡು, ಆ ಶಿಲ್ಪ ಸುಂದರಿಗೆ ಜೀವ ಬಂದರೆ ತಾನೆಂತಹ ಅದೃಷ್ಟಶಾಲಿಯೋ ಎಂದು ಕೊಳ್ಳುತ್ತ ಎಂಜಲು ನುಂಗುತ್ತಿದ್ದನು.

ಒಂದು ದಿನ ರಾತ್ರಿ ಮುರಳೀಗಾನಕ್ಕೆ ತಕ್ಕ ಹಾಗೆ ಅಂದುಗೆಗಳ ಝಣಕು ನಾದಗಳೂ ಕೇಳಿಸುತ್ತಿರಲು, ಕಾಲಾಂತಕನಿಗೆ ಎಚ್ಚರವಾಯಿತು. ವಿಗ್ರಹಕ್ಕೆ ಬದ ಲಾಗಿ ನಾಟ್ಯವಾಡಿಕೊಂಡಿದ್ದ ಅದ್ಭುತ ಸುಂದರಿಯನ್ನು ನೋಡಿದನು. ಮೋಹಾವೇಶದಿಂದ ಕಾಲಾಂತಕನು ತಟಕ್ಕನೆದ್ದು ಅವಳ ಕೈಗಳನ್ನು ಹಿಡಿದು ತನ್ನ ಕೊರಳಿನ ಸುತ್ತಲೂ ಬಳಸಿಕೊಂಡನು. ಮರುಕ್ಷಣ ದಲ್ಲಿ ಅವಳು ಶಿಲಾ ವಿಗ್ರಹವಾಗಿ ನಿಂತಳು. ವಿಗ್ರಹದ ಬಾಹುಬಂಧದಲ್ಲಿ ಕೊರಳು ಬಿಗಿದುಕೊಂಡು ಕಾಲಾಂತಕನು ಚಡಪಡಿಸುತ್ತ, ಬೆಂಕಿಯ ಕೆಂಡವಾಗಿ ಹಾಗೆಯೇ ಕರಿಯಾಗಿ ಬಿದ್ದು ರಾಶಿಯಾದನು. ವಿಗ್ರಹದ ಕೈಗಳೂ ಉರಿದು ಮುರಿದುಬಿದ್ದುವು. ಮೊಂಡಿ ಮೋಹಿನೀ ವಿಗ್ರಹ ಮಾತ್ರ ಉಳಿದಿತ್ತು.

ಕಾಲಾಂತಕನ ಸೇನೆಗಳನ್ನು ಕೃಷ್ಣನು ಹೊಡೆ ದೋಡಿಸಿದನು. ಆ ಸಮಯದಲ್ಲಿ ಅಗ್ನಿ ಪರ್ವತವು ಸಿಡಿದು ಯವನ ರಾಜ್ಯವನ್ನೇ ಧ್ವಂಸ ಮಾಡಿತು.

ಪಶ್ಚಿಮ ದಿಕ್ಕಿನ ಮ್ಲೇಚ್ಛ ಯವನರ ಕಾಟ ತೊಲಗಿದ ಮೇಲೆ, ಪೂರ್ವ ದಿಕ್ಕಿನ ಪ್ರಾಗ್ಜ್ಯೋತಿಷ ವನ್ನು ಪಾಲಿಸುವ ನರಕಾಸುರನ ವಿಜೃಂಭಣೆಗಳು ಇನ್ನಷ್ಟು ಪೀಡಾಕರವಾಗಿ ಸಾಧು ಸಜ್ಜನರನ್ನು ಹಾಹಾಕಾರಗೊಳಿಸಿಕೊಂಡಿದ್ದುವು.

ಹಿಂದೆ ವಿಷ್ಣು ವರಾಹಾವತಾರದಿಂದ ಭೂದೇವಿ ಯನ್ನು ಉದ್ಧರಿಸುವ ಸಂದರ್ಭದಲ್ಲಿ ಭೂದೇವಿಗೆ ಜನಿಸಿದ ಪುತ್ರನೇ ನರಕಾಸುರ. ಅವನು ಪ್ರಾಗ್ಜ್ಯೋ ತಿಷ ಪುರವನ್ನು ರಾಜಧಾನಿ ಮಾಡಿಕೊಂಡು, ಅಸುರ ಸೇನೆಗಳೊಂದಿಗೆ ದೇವಲೋಕದ ಮೇಲೆ ದಾಳಿಮಾಡಿ ಜಯಿಸಿ, ದೇವತೆಗಳನ್ನು ತನ್ನ ಪಾದಾ ಕ್ರಾಂತ ಮಾಡಿಕೊಂಡಿದ್ದನು. ದೇವಮಾತೆಯಾದ ಅದಿತಿಯ ಕರ್ಣಕುಂಡಲಗಳನ್ನು ಎಳೆದುಕೊಂಡು ಬಂದಿದ್ದನು. ಮುನಿಗಳನ್ನೂ ಸಾಧುಗಳನ್ನೂ ಹಿಂಸಿ ಸುವುದು ಅವನಿಗೊಂದು ಆಟ. ಹದಿನಾರು ಸಾವಿರ ಮಂದಿ ಕನ್ಯೆಯರನ್ನು ತಂದು ಸೆರೆಮನೆ ಯೊಳಗೆ ಕೂಡಿಹಾಕಿದ್ದನು.

ದೇವತೆಗಳೂ ಮುನಿಗಳೂ ಕೃಷ್ಣನ ಬಳಿಗೆ ಬಂದು ನರಕಾಸುರನ ಪೀಡೆ ತೊಲಗಿಸಬೇಕೆಂದು ಪ್ರಾರ್ಥಿಸಿ ದರು. ಕೃಷ್ಣನು ಅವರಿಗೆ ಅಭಯವಿತ್ತು, ಆ ಕಾರ್ಯಕ್ಕೆ ಹೊರಡಲು ಸಿದ್ಧನಾದಾಗ ಸತ್ಯಭಾಮೆ ತಾನೂ ಬರುವೆನೆಂದು ಕೃಷ್ಣನೊಂದಿಗೆ ಹೊರಟಳು. ತಾಯಿಯಾದ ಭೂದೇವಿಯಿಂದ ಗಾಯಪಟ್ಟ

ರೇನೇ ನರಕಾಸುರನಿಗೆ ಸಾವು ಬರಲು ಸಾಧ್ಯವೆಂಬ ವರವು ಅವನಿಗಿದ್ದಿತು. ಸತ್ಯಭಾಮೆ ಭೂದೇವಿಯ ಅಂಶದಲ್ಲೇ ಹುಟ್ಟಿದವಳು.

ಕೃಷ್ಣನು ಸತ್ಯಭಾಮೆಯೊಂದಿಗೆ ಗರುಡಾರೂಢನಾಗಿ ಪ್ರಾಗ್ಜ್ಯೋತಿಷಪುರದ ಮೇಲೆ ದಾಳಿ ಮಾಡಿ, ಅಸುರ ಸೇನೆಗಳನ್ನು ಸಂಹಾರ ಮಾಡಿದನು.

ನರಕಾಸುರನು ಮದಗಜದ ಮೇಲೇರಿ ಕೃಷ್ಣನನ್ನು ಇದಿರಿಸಿದನು. ಯುದ್ಧ ಮಾಡುತ್ತಾ ಬಳಲಿದ ಕೃಷ್ಣನು ಸ್ವಲ್ಪ ವಿಶ್ರಾಂತಿಗಾಗಿ ಕುಳಿತರೂ, ನರಕಾಸುರನು ಯುದ್ಧ ಧರ್ಮ ಬಿಟ್ಟು ಆಯುಧ ಪ್ರಯೋಗ ಮಾಡುವುದನ್ನು ನೋಡಿ, ಸತ್ಯಭಾಮೆ ಸಿಡಿದೆದ್ದು ನರಕಾಸುರನ ಮೇಲೆ ಬಾಣಪ್ರಯೋಗ ಮಾಡಿದಳು.



ಅವಳು ಆಕರ್ಣಾಂತ ಎಳೆದು ಬಿಟ್ಟ ಬಾಣವು ನರಕಾಸುರನ ಎದೆಯೊಳಗೆ ಬಲವಾಗಿ ನಾಟಿತು. "ಅಮ್ಮಾ !" ಎಂದು ಕೂಗುತ್ತ, ನರಕಾಸುರನು ನೆಲಕ್ಕೊರಗಿ ಹೊರಳಾಡಿ ಎದ್ದು, ಕೊನೆಯ ಸಾಹಸದಿಂದ ಗದೆಯನ್ನೆತ್ತಿ ಕೃಷ್ಣನ ಮೇಲೆ ಹಾರಿದನು. ಆಗ ಕೃಷ್ಣನ ಚಕ್ರಾಯುಧವು ನರಕನ ತಲೆಯನ್ನು ತರಿದು ಹಾಕಿತು. ಆ ತಲೆ ಮೇಲೆ ಹಾರಿ ಕೃಷ್ಣನನ್ನು ವಿಷ್ಣುವೆಂದು ಸ್ತುತಿಸುತ್ತಾ, ಲೋಕದವರು ತನ್ನನ್ನು ಯಾವಾಗಲೂ ಜ್ಞಾಪಿಸಿಕೊಂಡಿರಬೇಕೆಂದು ವರವನ್ನು ಕೇಳಿ ಕಣ್ಣು ಮುಚ್ಚಿತು.

ಅದರಂತೆ ಕೃಷ್ಣನು ವರವನ್ನು ಕೊಟ್ಟನು. ಅಂದಿನಿಂದ ನರಕಾಸುರ ಸಂಹಾರವು ನಡೆದ ದಿನ ನರಕ ಚತುರ್ದಶಿಯಾಗಿ, ಮರುದಿನ ನರಕ ಪರಿಪಾಲನೆ ಅಂತ್ಯವಾಗಿ ಸಂತೋಷ ಸಂಭ್ರಮಗಳ ದೀಪಾವಳಿ ಹಬ್ಬಗಳು ಆಚರಣೆಗೆ ಬಂದುವು.

ಕೃಷ್ಣನು ನರಕಾಸುರನ ಕುಮಾರನಾದ ಭಗದತ್ತನಿಗೆ ಪಟ್ಟಕಟ್ಟಿ, ಅದಿತಿಯ ಕರ್ಣಕುಂಡಲಗಳೊಂದಿಗೆ ದ್ವಾರಕೆಯನ್ನು ಸೇರಿದನು. ಒಂದು ದಿನ ಕೃಷ್ಣನು ರುಕ್ಮಿಣೀದೇವಿಯ ಮಂದಿರದಲ್ಲಿರುವಾಗ, ನಾರದನು ಬಂದು, ಅಲಭ್ಯವಾದ ಪಾರಿಜಾತ ಪುಷ್ಪವನ್ನು ಕೃಷ್ಣನಿಗೆ ಕೊಟ್ಟನು. ಕೃಷ್ಣನು ಅದನ್ನು ತನ್ನ ಪಕ್ಕದಲ್ಲಿದ್ದ ರುಕ್ಮಿಣಿಗೆ ಅಲಂಕಾರ ಮಾಡಿದನು.

ಈ ಸಮಾಚಾರ ಸತ್ಯಭಾಮೆಗೆ ತಿಳಿದು ಅವಳು ಕೃಷ್ಣನ ಮೇಲೆ ರುಷ್ಟಳಾದಳು. ಆಗ ಕೃಷ್ಣನು ಪಾರಿಜಾತ ವೃಕ್ಷವನ್ನೇ ತಂದು ನೆಡುವೆನೆಂದು ಹೇಳಿ ಅವಳನ್ನು ಸಮಾಧಾನಪಡಿಸಿದನು.

ಅದಿತಿಗೆ ಕರ್ಣಕುಂಡಲಗಳನ್ನು ಕೊಡುವ ನೆವನದಲ್ಲಿ ಕೃಷ್ಣನು ಸತ್ಯಭಾಮೆಯೊಂದಿಗೆ ಗರುಡನ ಮೇಲೇರಿಕೊಂಡು ದೇವಲೋಕಕ್ಕೆ ಹೋದನು. ಅದಿತಿಗೆ ಕುಂಡಲಗಳನ್ನು ಕೊಟ್ಟ ಮೇಲೆ ಕೃಷ್ಣನು ನಂದನವನದಲ್ಲಿ ವಿಹಾರ ಮಾಡುತ್ತ, ಪಾರಿಜಾತ ವೃಕ್ಷವನ್ನು ಕಿತ್ತು, ಗರುಡನ ಮೇಲೆ ಹಾಕಿಕೊಂಡು ಹಿಂದಿರುಗತೊಡಗಿದನು.



ಗಳೊಂದಿಗೂ ಕೃಷ್ಣನಿಗೆ ಬಾಂಧವ್ಯವೇರ್ಪಟ್ಟು ಒಳ್ಳೆಯ ಐಕ್ಯತೆ ಉಂಟಾಯಿತು.

ಕೃಷ್ಣನು ಧರ್ಮಾನುವರ್ತಿಗಳಾದ ಪಾಂಡವರಿಗೆ ಹಿತವಾಗಿಯೇ ಪ್ರವರ್ತಿಸುತ್ತಿದ್ದನು. ಬಲರಾಮನ ಸಮ್ಮತಿಯನ್ನು ಕೇಳದೆಯೇ ತಂಗಿಯಾದ ಸುಭದ್ರೆಯನ್ನು ಕೃಷ್ಣನು ಅರ್ಜುನನಿಗೆ ಕೊಡಿಸಿ ಮದುವೆ ಮಾಡಿಸಿದನು.

ಬಾವ ಮೈದುನಂದಿರಾದ ಕೃಷ್ಣಾರ್ಜುನರು ಖಾಂಡವವನವನ್ನು ದಹಿಸುವಾಗ, ಆ ವನದೊಳಗೆ ಸಿಕ್ಕಿಕೊಂಡ ರಾಕ್ಷಸ ಶಿಲ್ಪಿಯಾದ ಮಯನನ್ನು ಕಾಪಾಡಿದರು. ಅದಕ್ಕಾಗಿ ಮಯನು ಪಾಂಡವರಿಗೆ ದೊಡ್ಡದೊಂದು ಸಭಾಭವನವನ್ನು ನಿರ್ಮಿಸಿಕೊಡುವೆನೆಂದು ಹೇಳಿದನು. ಅಗ್ನಿದೇವನು ಸಂತೃಪ್ತನಾಗಿ ಕೃಷ್ಣನಿಗೆ ಸುದರ್ಶನ ಚಕ್ರವನ್ನೂ, ಪಾಂಚಜನ್ಯವೆಂಬ ಶಂಖವನ್ನೂ ಕೊಟ್ಟು, ಅರ್ಜುನನಿಗೆ ಗಾಂಡೀವವೆಂಬ ಧನುಸ್ಸನ್ನೂ, ಅಕ್ಷಯ ತೂಣೀರವನ್ನೂ, ದೇವದತ್ತವೆಂಬ ಶಂಖವನ್ನೂ ಕೊಟ್ಟನು. ಇವುಗಳಿಂದ ಕೃಷ್ಣಾರ್ಜುನರ ಬಲವು ಬಹಳ ವೃದ್ಧಿಯಾಯಿತು.

ಧರ್ಮರಾಜನು ರಾಜಸೂಯಯಾಗವನ್ನು ಪ್ರಾರಂಭಿಸಿದನು. ಜರಾಸಂಧನನ್ನು ಅಂತ್ಯಗೊಳಿಸಬೇಕಾದ ಕಾಲವು ಈಗ ಪ್ರಾಪ್ತವಾಯಿತು.

ಕೃಷ್ಣನು ಭೀಮಾರ್ಜುನರೊಂದಿಗೆ ಮಾರುವೇಷಗಳಲ್ಲಿ ಹೋಗಿ ಗಿರಿವ್ರಜಪುರವನ್ನು ಪ್ರವೇಶಿಸಿ, ಅತಿಥಿಗಳೆಂದು ಹೇಳಿಕೊಂಡು, ಜರಾಸಂಧನ ಮಂದಿರವನ್ನು ಪ್ರವೇಶ ಮಾಡಿದರು.

ಬಕಾಸುರ, ಧುರ್ಯೋಧನ, ಕೀಚಕ, ಭೀಮ, ಜರಾಸಂಧ ಇವರಿಷ್ಟು ಮಂದಿ ಆಗ ಸಮಬಲರಾಗಿದ್ದವರು, ಇವರಲ್ಲಿ ಒಬ್ಬನ ಕೈಯಿಂದಲೇ ಉಳಿದ ನಾಲ್ವರೂ ಸಂಹರಿಸಲ್ಪಡುವರೆಂಬ ರಹಸ್ಯವು ಕೃಷ್ಣನೊಬ್ಬನಿಗಷ್ಟೇ ಗೊತ್ತಿತ್ತು. ಭೀಮನು ಬಕಾಸುರನನ್ನು ಈ ಮೊದಲೇ ಕೊಂದುಹಾಕಿದ್ದನು. ಈಗ ಜರಾಸಂಧನನ್ನು ಕೊಲ್ಲಬೇಕಾದವನು ಭೀಮನೇ. ಜರಾಸಂಧನು ಅಸ್ತ್ರಶಸ್ತ್ರಗಳಿಂದ ಸಾಯುವವನಲ್ಲ. ಅವನ ಶರೀರವನ್ನು ಇಬ್ಭಾಗವಾಗಿ ಸೀಳಿಯೇ ಕೊಲ್ಲಬೇಕಿತ್ತು.

ಅತಿಥಿಗಳಾದ ತಮಗೆ ಭೋಜನಕ್ಕೆ ಬದಲಾಗಿ, ತಮ್ಮೊಳಗೆ ಒಬ್ಬನೊಂದಿಗೆ ಮಲ್ಲಯುದ್ಧವನ್ನು ಕೊಡಬೇಕೆಂದು ಕೃಷ್ಣನು ಜರಾಸಂಧನೊಂದಿಗೆ ಹೇಳಿದನು. ಆಗ ಅತಿಥಿಗಳು ಯಾರೆಂಬುದು ಜರಾಸಂಧನಿಗೆ ಗೊತ್ತಾಯಿತು.

"ಕೃಷ್ಣಾ, ನೀನು ನನಗೆ ಹೆದರಿ ಪ್ರವರ್ಷಣಗಿರಿಗೆ ಓಡಿಹೋದವನು. ಅರ್ಜುನನೊಬ್ಬ ಇನ್ನೂ ಬೆಳೆಯದ ಎಳಸೇ. ಭೀಮನು ಪರವಾಗಿಲ್ಲ, ನನಗೆ ತಕ್ಕ ಜೋಡಿ!" ಎಂದನು ಜರಾಸಂಧ.

ಭೀಮ ಜರಾಸಂಧರೊಳಗೆ ಮುಷ್ಟಿಯುದ್ಧವು ಪ್ರಾರಂಭವಾಗಿ ಮಹಾ ಮಲ್ಲಯುದ್ಧವಾಯಿತು. ಘೋರವಾದ ಈ ಮಲ್ಲಯುದ್ಧದಲ್ಲಿ ಭೀಮನು



ಸತ್ಯಭಾಮಾ ಕೃಷ್ಣರು ದೇವಪಾರಿಜಾತವನ್ನು ಅಪಹರಣ ಮಾಡಿಕೊಂಡು ಹೋಗುತ್ತಿದ್ದಾರೆಂದು ದೇವೇಂದ್ರನಿಗೆ ಗೊತ್ತಾಗಿ, ಯುದ್ಧಕ್ಕೆ ಬಂದನು. ಆಗ ಇಂದ್ರನು ಬೀಸಿದ ವಜ್ರಾಯುಧವು ಗರುತ್ಮಂತನ ರೆಕ್ಕೆಗೆ ತಾಗಲು, ರೆಕ್ಕೆಯ ಒಂದು ಗರಿಯನ್ನು ಅದಕ್ಕೆ ಬಿಟ್ಟುಕೊಟ್ಟನು ಗರುತ್ಮಂತ.

ಗರ್ವಗುಂದಿದ ಇಂದ್ರನು ಕ್ಷಮಿಸುವಂತೆ ಪ್ರಾರ್ಥಿಸಿ, ಕೃಷ್ಣನಿರುವಷ್ಟು ಕಾಲ ಪಾರಿಜಾತವೂ ಭೂಮಿಯಲ್ಲಿರುವುದೆಂದು ಹೇಳಿ ಹಿಂದಿರುಗಿದನು.

ಸತ್ಯಭಾಮೆಯ ಅಂತಃಪುರದ ಉದ್ಯಾನದಲ್ಲಿ ಪಾರಿಜಾತ ವೃಕ್ಷವು ಹೂಗಳಿಂದ ಗಮಗಮಿಸಿತು.

ಇಷ್ಟೆಲ್ಲಾ ಆದ ಮೇಲೆ ಕೃಷ್ಣನು ತನಗೆ ಪುತ್ರ ಪ್ರಾಪ್ತಿಯಾಗಬೇಕೆಂದು ಕೈಲಾಸಕ್ಕೆ ಹೋಗಿ ತಪಸ್ಸು ಮಾಡಿ, ಶಿವನ ಅನುಗ್ರಹವನ್ನು ಪಡೆದನು. ಆ ಸಮಯದಲ್ಲಿ ಸಾಲ್ವನೂ ಪೌಂಡ್ರಕನೂ ದ್ವಾರಕೆಗೆ ಕಾಟಕೊಡತ್ತಿರಲು, ಕೃಷ್ಣನು ಬೇಗನೆ ಹಿಂದಿರುಗಿ ಬಂದು ಅವರಿಬ್ಬರನ್ನೂ ವಧಿಸಿದನು. ಹಾಗೆ ಸತ್ತವರಿಗೆ ದಂತವಕ್ತ್ರನು ಉತ್ತರ ಕ್ರಿಯೆಗಳನ್ನು ಮಾಡಿ ಬರುತ್ತಿರುವಾಗ, ತನಗಿದಿರಾಗಿ ಕೃಷ್ಣನು ಬರುವುದನ್ನು ನೋಡಿದನು. ಕೂಡಲೇ ಅವನು ಮಹಾ ರೋಷದಿಂದ ಗದೆಯನ್ನೆತ್ತಿಕೊಂಡು ಕೃಷ್ಣನ ಮೇಲೆ ಲಂಘಿಸಿದನು. ಕೃಷ್ಣನು ಅವನನ್ನು ಸಂಹರಿಸಿದ ಕೂಡಲೇ ಅವನಿಂದ ಹೊರಟ ಕಾಂತಿಯಲ್ಲಿ ವೈಕುಂಠ ದ್ವಾರಪಾಲಕ ವಿಜಯನ ರೂಪವು ತೋರಿ ಕೃಷ್ಣನಲ್ಲಿ ಐಕ್ಯವಾಯಿತು.

ಕೃಷ್ಣನಿಗೆ ಪ್ರದ್ಯುಮ್ನನೇ ಮೊದಲಾದ ಅನೇಕ ಮಂದಿ ಕುಮಾರರು ಹುಟ್ಟಿದರು. ಪ್ರದ್ಯುಮ್ನನ ಕುಮಾರನಾದ ಅನಿರುದ್ಧನನ್ನು ಬಾಣಾಸುರನ ಕುಮಾರಿ ಉಷಾ, ಕನಸಿನಲ್ಲಿ ನೋಡಿ ಮೋಹಿಸಿದಳು. ಅವಳ ಸಖಿಯಾದ ಚಿತ್ರಲೇಖೆ, ಶಾಂಬರೀ ಮಾಯಾ ವಿದ್ಯೆಯ ಪ್ರಭಾವದಿಂದ ಅನಿರುದ್ಧನನ್ನು ಉಷೆಯ ಅಂತಃಪುರಕ್ಕೆ ತರಿಸಿಬಿಟ್ಟಳು. ಉಷೆ ಅವನನ್ನು ಗಾಂಧರ್ವ ವಿಧಿಯಿಂದ ವರಿಸಿಕೊಂಡಳು.

ಬಾಣಾಸುರನು ಅನಿರುದ್ಧನನ್ನು ಹಿಡಿದು ನಾಗ ಪಾಶದಿಂದ ಬಂಧಿಸಿ ಸೆರೆಮನೆಯಲ್ಲಿಟ್ಟನು. ಮೊಮ್ಮಗನು ಹಾಗೆ ಬಂಧಿತನಾಗಿರುವುದನ್ನು ತಿಳಿದು ಕೃಷ್ಣನು ಯುದ್ಧಕ್ಕೆ ಬಂದನು. ಶಿವನು ಬಾಣನ ಪಕ್ಷದಲ್ಲಿ ಕೃಷ್ಣನೊಂದಿಗೆ ಯುದ್ಧಮಾಡಿ ಕಡೆಗೆ ಸೋತು ಹೋದನು.

ಆಮೇಲೆ ಕೃಷ್ಣನು ಬಾಣಾಸುರನನ್ನು ಸಂಧಿಸಿ ಯುದ್ಧ ಮಾಡುತ್ತ ಅವನಿಗೆ ಎರಡು ಕೈಗಳನ್ನು ಮಾತ್ರ ಉಳಿಸಿ ಉಳಿದ ಒಂಬೈನೂರ ತೊಂಬತ್ತೆಂಟು ಕೈಗಳನ್ನೂ ಕಡಿದು ಹಾಕಿದನು. ಬಾಣಾಸುರನು ಕೃಷ್ಣನಿಗೆ ಶರಣಾಗತನಾಗಿ ಸುಮುಖನಾಗಿ ಸಂಬಂಧಿಕನಾಗಿರಲು ಒಪ್ಪಿದನು. ಉಷಾ ಅನಿರುದ್ಧರ ಮದುವೆ ವೈಭವದಿಂದ ನಡೆಯಿತು. ಇದರಿಂದ ದಕ್ಷಿಣ ಭಾಗದ ಅಸುರರೊಂದಿಗೂ, ಉತ್ತರ ದಿಕ್ಕಿನ ರಾಜರು



ದುರ್ಯೋಧನನ ಮಾವನೆಂದು ಪ್ರಖ್ಯಾತನಾದವನು ಶಕುನಿ. ದುರ್ಯೋಧನನ ತಾಯಿಯಾದ ಗಾಂಧಾರಿಗೆ ಅವನು ತಮ್ಮನು, ಗಾಂಧಾರದ ದೇಶದ ರಾಜನಾದ ಸುಬಲನ ಕುಮಾರನು.

ಗಾಂಧಾರಿಯ ಜಾತಕಫಲದ ಪ್ರಕಾರ ಅವಳಿಗೆ ವೈಧವ್ಯಯೋಗವಿರುವುದೆಂದು ಗೊತ್ತಾದುದರಿಂದ, ಸುಬಲನು ಮೊದಲು ಅವಳಿಗೆ ಟಗರಿನೊಂದಿಗೆ ವಿವಾಹ ಮಾಡಿದ್ದನು. ಅನಂತರ ಹುಟ್ಟು ಕುರುಡನಾಗಿದ್ದ ಧೃತರಾಷ್ಟ್ರನೊಂದಿಗೆ ಅವಳ ವಿವಾಹವಾಗಿತ್ತು. ಆಗ ಜಾತಕ ಫಲದಂತೆ ಅವಳ ಗಂಡನೆನಿಸಿದ ಟಗರು ಸತ್ತುಹೋಗಿತ್ತು.

ಈ ಹಿಂದಿನ ಸಂಗತಿ ಭೀಮನು ದುರ್ಯೋಧನನನ್ನು "ವಿಧವೆಗೆ ಹುಟ್ಟಿದ ಗೋಳಕಾ!" ಎಂದು ಸಂಬೋಧಿಸಿ ನಿಂದಿಸಿದಾಗಲೇ ದುರ್ಯೋಧನನಿಗೆ ಗೊತ್ತಾದುದು.

ಆದರಿಂದ ರೋಷಗೊಂಡ ದುರ್ಯೋಧನನು ಶಕುನಿಯನ್ನೂ, ಅವನ ತಂದೆಯಾದ ಸುಬಲನನ್ನೂ ಹಿಡಿದು ತರಿಸಿ, ಅತ್ಯಂತ ಯಾತನಾಮಯವಾದ ಕಾರಾಗಾರದಲ್ಲಿ ಇರಿಸಿ ತನ್ನ ರೋಷವನ್ನು ಸ್ವಲ್ಪ ಮಟ್ಟಿಗೆ ತಣಿಸಿಕೊಂಡನು.

ಸುಬಲರಾಜನು ದೊಡ್ಡ ತಪಸ್ಸು ಮಾಡಿದವನು. ಅವನು ಸಾಯುವ ಮೊದಲು ತನ್ನ ಅಸ್ಥಿಕೆಗಳಿಂದ ದಾಳಗಳನ್ನು ತಯಾರುಮಾಡಿಸಿ ದುರ್ಯೋಧನನ ಮೇಲೆ ಪ್ರತೀಕಾರ ಮಾಡಬೇಕೆಂದು ಶಕುನಿಗೆ ಹೇಳಿ ಸತ್ತುಹೋಗಿದ್ದನು.

ತಂದೆಯ ತಪೋ ಮಹಿಮೆಯ ಅಸ್ಥಿಕೆಗಳಿಂದ ಮಾಡಲ್ಪಟ್ಟ ದಾಳಗಳಿಂದ ಜೂಜಾಡಿದರೆ ಶಕುನಿ ಯಾವ ಅಂಕೆ ಬೇಕೆಂದುಕೊಳ್ಳುವನೋ ಅದೇ ಅಂಕೆ ಬರುತ್ತಿತ್ತು.

ಶಕುನಿಯ ಹತ್ತಿರವಿರುವ ಈ ಅದ್ಭುತವಾದ ದಾಳಗಳ ಸಂಗತಿ ಕಾರಾಗಾರದ ಪಾಲಕರಿಂದ ದುರ್ಯೋಧನನಿಗೆ ಗೊತ್ತಾಯಿತು. ಆಗ ದುರ್ಯೋಧನನು ಸೋದರಮಾವ ಶಕುನಿಯನ್ನು ಬಿಡುಗಡೆ ಮಾಡಿಸಿ, ಕ್ಷಮೆ ಕೇಳಿ, ತನ್ನ ಮಂತ್ರಿಯಾಗಿ ಮಾಡಿ



ಕೊಂಡನು. ತಾಯಿಯ ವಿಷಯದಲ್ಲಿ ತನಗೆ ಬಂದ ಕೋಪಕ್ಕೆ ಶಕುನಿಯದೇನೂ ತಪ್ಪಿಲ್ಲವೆಂದು ದುರ್ಯೋಧನನು ಶಕುನಿಯ ಮೇಲೆ ಪ್ರಿಯವಾಗಿಯೇ ಇದ್ದನು. ಶಕುನಿಯೂ ಅವನ ಹಿತಚಿಂತಕನಂತೆ ಪ್ರವರ್ತಿಸಿಕೊಂಡಿದ್ದನು.

ಹಸ್ತಿನಾಪುರದಲ್ಲಿ ಶಕುನಿ ಪಾಂಡವರನ್ನು ಜೂಜಾಡಲು ಕರೆಯಿಸಿ, ಧರ್ಮರಾಜನೊಂದಿಗೆ ಜೂಜಾಡಿ ಧರ್ಮರಾಜನನ್ನು ಪೂರ್ತಿ ಸೋಲಿಸಿದನು. ತಮ್ಮಂದಿರನ್ನೂ ದ್ರೌಪದಿಯನ್ನೂ ಪಣವೊಡ್ಡಿ ಸೋತನು ಧರ್ಮರಾಜ.

ಅದೇ ಸಮಯದಲ್ಲಿ ಕೃಷ್ಣನು ದ್ವಾರಕೆಯಲ್ಲಿ ಸತ್ಯಭಾಮೆಯೊಂದಿಗೆ ವಿನೋದವಾಗಿ ಜೂಜಾಡುತ್ತಾ, ತನ್ನನ್ನೂ, ರುಕ್ಮಿಣಿ ಮೊದಲಾದ ಏಳು ಮಂದಿ ಮಹಿಷಿಯರನ್ನೂ ಪಣವಿಟ್ಟು ಸೋತನು.

ಸತ್ಯಭಾಮೆ ರುಕ್ಮಿಣಿಯನ್ನು ನೋಡಿ, "ಅಕ್ಕಾ, ಈಗ ನೀನೂ ನಮ್ಮ ನಾಥನೂ ನನ್ನ ಸೊತ್ತು, ನಿಮ್ಮನ್ನು ನಾನು ವಿಕ್ರಯ ಅಂತ ಏನು ಮಾಡಲಿಕ್ಕೂ ಸರ್ವಾಧಿಕಾರವೂ ನನಗಿದೆ." ಎಂದು ಪರಿಹಾಸವಾಗಿ ಹೇಳುತ್ತ, ರುಕ್ಮಿಣಿಯ ಸೆರಗಿನ ತುದಿಯನ್ನು ತನ್ನ ಕೈಗೆ ಸಿಕ್ಕಿಸಿಕೊಂಡಳು.

ಆಗ ಕೃಷ್ಣನು ಎತ್ತಲೋ ನೋಡಿ ಕಿವಿಗೊಟ್ಟು ಏನನ್ನೋ ಕೇಳಿ "ಅಕ್ಷಯವಾಗಲಿ!" ಎಂದನು.

ಹಾಗೆ ಏಕೆ ಹೇಳಿದನೆಂದು ತಿಳಿಯದೆ, ಎಲ್ಲರೂ ಬೆಪ್ಪು ಬೆರಗಾಗಿ ಅತ್ತಿತ್ತ ನೋಡಿದರು.

ಅದೇ ಸಮಯದಲ್ಲಿ ಹಸ್ತಿನಾಪುರದಲ್ಲಿ ತುಂಬಿದ ಸಭೆಯಲ್ಲಿ ದುಶ್ಶಾಸನನು ದ್ರೌಪದಿ ಉಟ್ಟಿದ್ದ ಸೀರೆಯ ಸೆರಗು ಹಿಡಿದು ಎಳೆಯುತ್ತಿರವಾಗ, ಅಸಹಾಯಕಳಾದ ದ್ರೌಪದಿ ಎರಡು ಕೈಗಳನ್ನೂ ಮೇಲೆತ್ತಿ "ಕೃಷ್ಣಾ!" ಎಂದು ಮೊರೆ ಇಡುತ್ತಿದ್ದಳು.

ದುಶ್ಶಾಸನನ ಎದೆಯನ್ನು ಸೀಳಿ ರಕ್ತ ಕುಡಿಯುವೆನೆಂದು, ದುರ್ಯೋಧನನ ತೊಡೆಯನ್ನು ಒಡೆದು ಹಾಕುವೆನೆಂದು ಭೀಮನು ಭಯಂಕರ ಪ್ರತಿಜ್ಞೆ ಮಾಡಿದನು.

ದುಶ್ಶಾಸನನು ಎಳೆಯುತ್ತಿದ್ದ ಹಾಗೆಯೇ ದ್ರೌಪದಿಯ ಭುಜಗಳ ಮೇಲಿನಿಂದ ವಸ್ತ್ರಗಳು ಅಕ್ಷಯವಾಗಿ ಬರುತ್ತಲೇ ಇದ್ದುವು. ಸಭೆಯಲ್ಲಿ ವಸ್ತ್ರದ ರಾಶಿಯೇ ಆಗಿ, ದುಶ್ಶಾಸನನ ತೋಳುಗಳು ಸೋತುಹೋದುವು. ಅವನು ಬೆವರಿ ನೀರಾಗಿ ಬವಳಿ ಬಂದು ಬಿದ್ದನು.

ದ್ರೌಪದಿ ಮಯಸಭೆಯಲ್ಲಿ ನಕ್ಕಳೆಂದು ಪ್ರತೀಕಾರ ಮಾಡಲು, ದುರ್ಯೋಧನನು ಹೀಗೆ ಅವಳ ವಸ್ತ್ರಾಪಹರಣಕ್ಕೆ ಎಳಸಿದನು. ಕಡೆಗೆ ಅವನು ಬಗ್ಗಿದ ತಲೆಯನ್ನು ಎತ್ತದೆ ಕರ್ಣ, ಶಕುನಿ, ದುಶ್ಶಾಸನಾದಿಗಳೊಂದಿಗೆ ಸಭೆಯಿಂದ ಹೊರಟುಹೋದನು.

ದುರ್ಯೋಧನ, ಕರ್ಣ, ಶಕುನಿ, ದುಶ್ಶಾಸನ ಈ ನಾಲ್ವರೂ ದುಷ್ಟ ಚತುಷ್ಟಯರೆಂದು ಹೆಸರು ಪಡೆದರು.



ಎರಡು ಪಕ್ಷಗಳ ಸೈನ್ಯಗಳೂ ಕುರುಕ್ಷೇತ್ರ ಯುದ್ಧರಂಗದಲ್ಲಿ ಸೇರಿರಲು, ಕೃಷ್ಣನು ಅರ್ಜುನನ ರಥವನ್ನು ಅವನ ಅಪೇಕ್ಷೆಯಂತೆ ರಣರಂಗದ ಮಧ್ಯಕ್ಕೆ ತಂದು ನಿಲ್ಲಿಸಿದನು.

ಅರ್ಜುನನು ಯುದ್ಧಕ್ಕೆ ಸನ್ನದ್ಧರಾಗಿ ಬಂದ ತಾತಂದಿರನ್ನು, ತಂದೆಯರನ್ನು, ಗುರುಗಳನ್ನು, ಬಂಧುಗಳನ್ನು, ಮಿತ್ರರನ್ನು ನೋಡಿ ದೊಡ್ಡ ಚಿಂತೆಗೆ ಬಿದ್ದನು. ರಥದಿಂದ ಇಳಿದು, ಧನುಸ್ಸು ತೂಣೀರಗಳನ್ನು ನೆಲದ ಮೇಲೆ ಹಾಕಿ ಕುಸಿದು ಕುಳಿತು, "ನನ್ನಿಂದಾಗದು ಕೃಷ್ಣಾ! ರಾಜ್ಯವೂ ಬೇಡ, ಈ ಯುದ್ಧವೂ ಬೇಡ. ಯಾರನ್ನೂ ಇದಿರಿಸಿ ನೆಟ್ಟಗೆ ನಿಲ್ಲಲಾರೆ. ಯಾರ ಸಾವನ್ನೂ ನೋಡಲಾರೆ! ಇದು ಬಹಳ ಘೋರ!" ಎಂದನು.

ಅದನ್ನು ಕೇಳಿ ಕೃಷ್ಣನು ಅವನ ಮುಂದೆ ಬಂದು "ಇದೇನು ಅರ್ಜುನಾ! ಯುದ್ಧರಂಗಕ್ಕೆ ಬಂದು ಅವಿವೇಕದಲ್ಲಿ ಬಿದ್ದು ಹೀಗೆ ಅಸ್ತ್ರ ಸನ್ಯಾಸ ಮಾಡುವುದೆಂದರೇನಿದು? ಇದು ಕ್ಷತ್ರಿಯ ವೀರನಾದ ನಿನಗೆ ಉಚಿತವಾದ ಕಾರ್ಯವೇ ಅಲ್ಲ. ಎಲೈ ಪಾರ್ಥನೇ! ಕಾಲವು ಯಾವಾಗಲೂ ಕರ್ತವ್ಯವನ್ನು ಪ್ರಬೋಧಿಸುತ್ತಾ ಇರುತ್ತದೆ. ಕರ್ತವ್ಯ ನಿರ್ವಹಣೆಗಿಂತ ಹೆಚ್ಚಿನ ಧರ್ಮವಾಗಲೀ ಯೋಗವಾಗಲೀ ಯಾವುದೂ ಇಲ್ಲ.

"ನರನು ನಿಮಿತ್ತ ಮಾತ್ರನಷ್ಟೇ. ನಡೆಯಿಸುವವನು ನಾರಾಯಣನೇ. ನರನೂ ನಾರಾಯಣನೂ ಬೇರೆ ಬೇರೆಯಾಗಿ ಕಾಣುವರಾದರೂ ಅವರಿಬ್ಬರೂ ಒಬ್ಬರೇ ಎಂದು ತಿಳಿ.

"ಅಧರ್ಮವನ್ನು ಇದಿರಿಸಿ. ನ್ಯಾಯಕ್ಕಾಗಿ ಹೋರಾಟವನ್ನು ಸಾಗಿಸಿ, ಒಳಿತಿಗೆ ವಿಜಯವಾಗುವಂತೆ ಮಾಡಿ, ಕೆಡುಕನ್ನು ನಿರ್ಮೂಲಿಸಲು ನರನು ನಾರಾಯಣನಿಗೆ ಸಾಧನವಾಗಿರುವವನು.

"ಈ ವಿಶ್ವವೆಲ್ಲವೂ ನಿತ್ಯ ಸಂಘರ್ಷಣೆಗಳಿಂದ ಪರಿಣಾಮ ಹೊಂದುತ್ತ, ಸಾಧುರಕ್ಷಣ, ದುಷ್ಟಶಿಕ್ಷಣ, ಧರ್ಮಸಂಸ್ಥಾಪನೆಗಳು ನಡೆಯುತ್ತಾ ಇರುತ್ತವೆ. ಅದಕ್ಕಾಗಿಯೇ ಭಗವಂತನು ಯುಗಯುಗದಲ್ಲಿಯೂ

೧೯. ಭಗವದ್ಗೀತೆ



ಅವತರಿಸುತ್ತಾ ಇರುತ್ತಾನೆ. ಆ ಭಗವಂತನ ಅವತಾರವಾಗಿ ನನ್ನನ್ನೂ ಗುರುತಿಸಿಕೊಂಡು ನಾನು ಹೇಳುವಹಾಗೆ ಮಾಡು. ಫಲವನ್ನು ನನಗೇ ಬಿಡು. ನಿನ್ನ ವಿಧಿಯನ್ನು ನೀನು ನೆರವೇರಿಸು. ಕರ್ಮವೀರನಾಗಿ ಸ್ವಧರ್ಮ ಪಾಲನೆಯನ್ನು ಮಾಡು" ಎಂದು ಹೇಳುತ್ತಾ ತನ್ನ ವಿಶ್ವವಿರಾಟ ಸ್ವರೂಪವನ್ನು ತೋರಿಸಿದನು.

ಸೃಷ್ಟಿ, ಸ್ಥಿತಿ ಲಯಗಳು ಚಕ್ರಭ್ರಮಣದಂತೆ ಉರುಳುತ್ತಿರಲು, ಸಾಯುವುದು, ಕೊಲ್ಲುವುದು, ಕರ್ತ ಕರ್ಮ ಕ್ರಿಯೆಗಳು ಒಂದಾಗಿಯೇ ಕಾಣುತ್ತವೆ. ಕಾಲವು ವಿರಾಟ ಸ್ವರೂಪನಾದ ಭಗವಂತನ ಇರುವಿಕೆಯೆಂಬುದು ಅರ್ಜುನನಿಗೆ ಆ ವಿಶ್ವರೂಪ ದರ್ಶನದಿಂದ ಅರ್ಥವಾಯಿತು.

ಅರ್ಜುನನ ಸಂದೇಹಗಳೆಲ್ಲಾ ನಿವೃತ್ತಿಯಾಗಿ ಚಿಂತೆ ಪೂರ್ತಿ ತೊಲಗಿತು. ಕೃಷ್ಣನೇ ತನ್ನನ್ನು ನಡೆಸುವವನು. ತಾನು ಯಾವುದಕ್ಕೂ ಹೊಣೆಯಲ್ಲ. ಈ ನಿಶ್ಚಯದಿಂದ ನಿಜವಾದ ಅರ್ಜುನನಾಗಿ ಗಾಂಡೀವವನ್ನು ಹಿಡಿದು ತೂಣೀರವನ್ನು ಧರಿಸಿ, ಬಾಣವನ್ನು ಎತ್ತಿದನು ಅರ್ಜುನ.

ಅಜರಾಮರವೆಂಬ ಪ್ರಸಿದ್ಧವಾದ ಮಹಾಸಂಗ್ರಾಮವು ನಡೆದು ಪಾಂಡವರು ಗೆದ್ದರು. ಆ ದಿನ ರಾಯಭಾರದಲ್ಲಿ ಕೃಷ್ಣನು ಹೇಳಿದುದೆಲ್ಲವೂ ನಿಜವಾಯಿತು. ಭೀಮನ ಪ್ರತಿಜ್ಞೆ ತೀರಿತು. ದುಶ್ಶಾಸನನ ಮರಣದಿಂದ ದ್ರೌಪದಿ ಬಿಚ್ಚಿದ ತನ್ನ ಕೂದಲನ್ನು ಸುತ್ತಿ ಮುಡಿಕಟ್ಟಿಕೊಂಡಳು.

ಅಭಿಮನ್ಯುವಾಗಿ ಹುಟ್ಟಿದ ಕಾಲನೇಮಿ ವೀರ ಸ್ವರ್ಗವನ್ನು ಅಲಂಕರಿಸಿದನು.

ಕರ್ಣನಾಗಿದ್ದ ಸಹಸ್ರ ಕವಚನ ಅಂಶವು ಪರಮಶಿವನನ್ನು ಹೋಗಿ ಸೇರಿಕೊಂಡಿತು. ನರನಾರಾಯಣರು ಯಾವುದಕ್ಕಾಗಿ ಕೃಷ್ಣಾರ್ಜುನರಾಗಿ ಹುಟ್ಟಿದರೋ ಆ ಕೆಲಸ ತೀರಿ ಹೋಯಿತು.

ತಾನು ಕೃಷ್ಣನಾಗಿ ಅವತರಿಸಿ ಭೂಭಾರವನ್ನು ತಗ್ಗಿಸುವೆನೆಂದು ವಿಷ್ಣು ಭೂದೇವಿಗೆ ಅಭಯ ನೀಡಿದಂತೆ ಎಲ್ಲವನ್ನೂ ಮಾಡಿ ಮುಗಿಸಿದನು.

ಅಶ್ವತ್ಥಾಮನು ಪಾಂಡವ ವಂಶವೇ ಭೂಮಿಯಲ್ಲಿಲ್ಲದಂತೆ ಮಾಡುವೆನೆಂದು ಪಣ ತೊಟ್ಟು ಪ್ರಯೋಗಿಸಿದ ಅಸ್ತ್ರ ಪ್ರಭಾವದಿಂದ, ಉತ್ತರೆ ಉಸಿರಿಲ್ಲದ ಶಿಶುವನ್ನು ಹೆತ್ತಳು. ಕೃಷ್ಣನು ತನ್ನ ಪಾದದಿಂದ ಆ ಶಿಶುವನ್ನು ಮೆಟ್ಟಿ ಪರೀಕ್ಷಿಸಿ ಶ್ವಾಸವಾಡುವಂತೆ ಮಾಡಿದನು. ಆ ಶಿಶು ಪರೀಕ್ಷಿತನೆಂಬ ಹೆಸರಿನಿಂದ ಪ್ರಸಿದ್ಧನಾಗಿ ಪಾಂಡವರ ವಂಶಾಂಕುರಕ್ಕೆ ಕಾರಣನಾದನು.

ಧೃತರಾಷ್ಟ್ರನು ಭೀಮನನ್ನು ಶ್ಲಾಘಿಸುತ್ತ ಅಪ್ಪಿಕೊಳ್ಳಬೇಕೆಂದು ಕೈಚಾಚಿದನು. ಕೃಷ್ಣನು ಭೀಮನಿಗೆ ಬದಲಾಗಿ, ಉಕ್ಕಿನ ವಿಗ್ರಹವನ್ನು ಅವನ ಕೈಗೆ ಸಿಗುವಂತೆ ಇರಿಸಿದುದರಿಂದ, ಧೃತರಾಷ್ಟ್ರನ ಪೂರ್ತಿ ಬಲದ ಆಲಿಂಗನದಲ್ಲಿ ಆ ವಿಗ್ರಹವು



ಬೆಳೆದು ಕತ್ತಿಗಳ ಕಾಡಿನಂತೆ ದಟ್ಟವಾದುವು. ಒಂದು ದಿನ ಯಾದವರು ಸಮುದ್ರ ತೀರವನ್ನು ಸೇರಿ ವಿನೋದವಾಗಿ ಕಾಲಕಳೆಯಲು ಮೈಮರೆಯು ವಂತೆ ಕುಡಿದು ತಿಂದು ಸೊಕ್ಕಿ ಒಬ್ಬರನ್ನೊಬ್ಬರು ಗೇಲಿಮಾಡುತ್ತ, ಕಲಹಕ್ಕೆ ತೊಡಗಿದರು. ಗುಂಪು ಗುಂಪುಗಳು ತಾಕಲಾಡಿದುವು. ಯಾದವ ವೀರರಿಗೆ ವೀರತ್ವವೇ ಸೊತ್ತು ಎಂದು ಒಬ್ಬರನ್ನೊಬ್ಬರು ಹೊಡೆದುಕೊಂಡರು. ಏಕೆ ಜಗಳವೋ ತಿಳಿಯದೆ, ಅಲ್ಲೆಲ್ಲಾ ದಟ್ಟವಾಗಿ ಬೆಳೆದ ಕಂತಿಹುಲ್ಲಿನ ಬುಡ ವನ್ನೇ ಕಿತ್ತು ಒಬ್ಬರಮೇಲೊಬ್ಬರು ಬೀಸಿ ಕಡಿದು ಒಬ್ಬರೂ ಉಳಿಯದಂತೆ ಎಲ್ಲರೂ ಮಡಿದು ಬಿದ್ದರು. ನೀಲಬಣ್ಣದಲ್ಲಿದ್ದ ಸಮುದ್ರದ ನೀರು ಯಾದವರ ರಕ್ತದಿಂದ ಕೆಂಪಾಯಿತು.

ಕೃಷ್ಣನ ತಮ್ಮಂದಿರಲ್ಲಿ ಒಬ್ಬನಾದ ಉದ್ಧವ ನೊಬ್ಬನೇ ಉಳಿದನು. ಅವನು ಕೃಷ್ಣಾವತಾರದ ತತ್ವವನ್ನು ತಿಳಿದವನು. ಪರಮ ಪುರುಷನಾದ ನಾರಾಯಣನೇ ಕೃಷ್ಣನಾಗಿ ಅವತರಿಸಿದವನೆಂದು ಅರಿತುಕೊಂಡವನು. ಸಂಸಾರ ಬಂಧನದಲ್ಲಿ ಬೀಳದೆ ಸೌಮ್ಯಜೀವನದಿಂದ ಕಾಲಕಳೆಯುತ್ತಿದ್ದವನು.

ನಡೆದ ದಾರುಣಗಳನ್ನೆಲ್ಲ ನೋಡಿ ಬಲರಾಮನು ವಿರಕ್ತನಾಗಿ, ಅರಣ್ಯಕ್ಕೆ ಹೋಗಿ, ಯೋಗನಿಷ್ಠೆ ಯಿಂದ ಶರೀರವನ್ನು ಬಿಟ್ಟು, ವೈಕುಂಠದಲ್ಲಿ ಮಹಾ ಶೇಷನಾಗಿ ಸೇರಿದನು.

ದ್ವಾರಕಾನಗರದಲ್ಲಿದ್ದ ಸ್ತ್ರೀ ಬಾಲ ವೃದ್ಧರೆಲ್ಲ ರನ್ನೂ ಕರೆದುಕೊಂಡು ಹೋಗುವಂತೆ ಕೃಷ್ಣನು ಅರ್ಜುನನಿಗೆ ಹೇಳಿಕಳುಹಿಸಿದನು. ಸಮುದ್ರ ರಾಜನು ದ್ವಾರಕೆಗಾಗಿ ಕೊಟ್ಟ ಜಾಗವನ್ನು ಇನ್ನು ಏಳು ದಿನ ಗಳೊಳಗೆ ಸಮುದ್ರನಿಗೆ ಬಿಟ್ಟುಕೊಡ ಬೇಕಾಗಿತ್ತು. ಆಮೇಲೆ ಆ ಪ್ರದೇಶವನ್ನು ಸಮುದ್ರ ಜಲವು ಆಕ್ರಮಿಸಿಕೊಳ್ಳುತ್ತದೆ. ಇದನ್ನೆಲ್ಲಾ ಕೃಷ್ಣನು ಉದ್ಧವನಿಗೆ ಹೇಳಿ, ಅನೇಕ ಪರಮಾರ್ಥ ತತ್ವ ಗಳನ್ನೂ, ವೇದಾಂತವಿಷಯಗಳನ್ನೂ ಉಪದೇಶ ಮಾಡಿ ತನ್ನ ವಿಷ್ಣು ಸ್ವರೂಪವನ್ನು ತೋರಿಸಿ ತನ್ನ ಅನಂತರ ಉದ್ಧವನು ಮಾಡಬೇಕಾದಕೆಲಸ ಗಳನ್ನು ಕುರಿತು ಹೇಳಿದನು.

ಯಾದವಕುಲದ ಅಂತ್ಯದೊಂದಿಗೆ ಕೃಷ್ಣನು ಅವತರಿಸಿದ ಕೆಲಸ ಪೂರ್ತಿಯಾಯಿತು. ಭೂಭಾರವು ಪೂರ್ತಿ ತಗ್ಗಿ ಸಮಸ್ಥಿತಿಗೆಬಂತು.

ಕೃಷ್ಣನು ಯಮುನಾತೀರದ ವನದೊಳಗೆ ಪ್ರವೇ ಶಿಸಿ ಮಧುರಾತಿ ಮಧುರವಾಗಿ ಮುರಳೀಗಾನ ಮಾಡತೊಡಗಿದನು. ಆ ಸ್ವರದಿಂದ ಹೊರಡುವ ಹಿಂದೋಳವೂ, ಯಮುನಾ ಕಲ್ಯಾಣಿಯೂ,' ದೇವ ಗಾಂಧಾರವೂ ಪ್ರಕೃತಿಯನ್ನು ಆನಂದ ಪರವಶ ಮಾಡಿತು. ಯಮುನೆ ಗಂಭೀರವಾಗಿ ಹರಿಯುವುದೇ ಗೊತ್ತಾಗದಂತೆ ಸ್ತಬ್ಧವಾಯಿತು. ತರುವಾಯ ಕೃಷ್ಣನು ಒಂದು ಮರದ ಕಾಂಡಕ್ಕೆ ಒರಗಿಕೊಂಡು ಕಾಲಿನ ಮೇಲೆ ಕಾಲನ್ನಿಟ್ಟು ಪಾದವನು ಆಡಿ



ಸುತ್ತಾ ತನ್ನ ಪಾಡಿಗೆ ವಿಶ್ರಮಿಸಿಕೊಂಡಿದ್ದನು. ಆಗ ಒನಕೆಯ ಮೊನೆಯನ್ನು ಬಾಣಕ್ಕೆ ತಗಲಿಸಿ ಕೊಂಡಿದ್ದ ಬೇಡನು ಆಚೆಯ ತೀರದಿಂದ ಮರದ ಮರೆಯಲ್ಲಿ ಆಡುತ್ತಿರುವ ಕೃಷ್ಣನ ಪಾದವನ್ನು ನೋಡಿದನು. ಅದೊಂದು ಎರಳೆಯ ಮುಖದಂತೆ ಅವನಿಗೆ ಕಂಡಿತು. ಕೂಡಲೇ ಅವನು ಬಿಲ್ಲಿಗೆ ಬಾಣ ಹೂಡಿ ಪ್ರಯೋಗಿಸಿಬಿಟ್ಟನು. ಕೃಷ್ಣನ ಪಾದಕ್ಕೆ ಒನಕೆಯ ಮೊನೆ ಬಹಳ ಆಳಕ್ಕೆ ಚುಚ್ಚಿಕೊಂಡಿತು. ರಕ್ತವು ಬೊಟ ಬೊಟನೆ ಸುರಿಯತೊಡಗಿತು.

ಹಿಂದೆ ದುರ್ವಾಸನು ಕೃಷ್ಣನ ಅತಿಥಿಯಾಗಿ ಬಂದು ತನ್ನ ಶರೀರಾದ್ಯಂತಕ್ಕೂ ಪಾಯಸವನ್ನು ಲೇಪಿಸುವಂತೆ ಕೃಷ್ಣನಿಗೆ ಹೇಳಿದ್ದನು. ಕೃಷ್ಣನು ದುರ್ವಾಸನ ಸರ್ವಾಂಗಕ್ಕೂ ಪಾಯಸವನ್ನು ಹಚ್ಚಿ ಪಾದಕ್ಕೆ ಪೂಸುವುದನ್ನು ಮರೆತುಹೋದನು.

ಆಗ ದುರ್ವಾಸ ಮಹರ್ಷಿಯು, "ಕೃಷ್ಣಾ, ಪಾದದಿಂದ ಮಾತ್ರವೇ ನಿನಗೆ ಕೇಡು ಬರುತ್ತದೆ. ನೆನಪಟ್ಟುಕೋ" ಎಂದಿದ್ದನು. ಆ ಮಾತು ಈಗ ಕೃಷ್ಣನ ನೆನಪಿಗೆ ಬಂತು. ಅದೇ ಸಮಯದಲ್ಲಿ ಬೇಟೆಗಾರನು ತಾನು ಹೊಡೆದ ಪ್ರಾಣಿಯನ್ನು ಎತ್ತಿಕೊಂಡು ಹೋಗಲು ಬಂದು, ಗಾಯದಿಂದ ನೊಂದುಕೊಂಡಿರುವ ಕೃಷ್ಣನನ್ನು ನೋಡಿದನು. ತನ್ನ ತಪ್ಪಿಗಾಗಿ ಬೇಡನು ದುಃಖಿಸುವುದನ್ನು ನೋಡಿ ಕೃಷ್ಣನು, "ಅಪ್ಪಾ, ನೀನೇನೂ ಚಿಂತಿಸ ಬೇಡ. ರಾಮಾವತಾರದಲ್ಲಿ ನೀನು ವಾಲಿಯ ಮಗ ಅಂಗದನಾಗಿದ್ದವನು. ನಿನ್ನ ತಂದೆಯಾದ ವಾಲಿ ಯನ್ನು ನಾನು ಮರೆಯಲ್ಲಿ ನಿಂತು ಕೊಂದೆನು. ಅದಕ್ಕೆ ಪರಿಹಾರವಾಗಿ ನಿನ್ನಿಂದ ಪೆಟ್ಟುತಿಂದೆನು" ಎಂದು ಹೇಳಿ ತನ್ನ ರಾಮಾವತಾರವನ್ನು ಅವನಿಗೆ ತೋರಿಸಿದನು.

ಆಗ ಬೇಟೆಗಾರನಿಗೆ ಪೂರ್ವಜನ್ಮದ ಸ್ಮೃತಿ ಯುಂಟಾಗಿ ಭಕ್ತಿಯಿಂದ ಕೃಷ್ಣನಿಗೆ ನಮಸ್ಕರಿಸುತ್ತಾ ಮೈಮರೆತು ರಾಮಧ್ಯಾನದಲ್ಲೇ ಕಣ್ಣು ಮುಚ್ಚಿದನು ಅಲ್ಲಿಯೇ ಅವನು ಶರೀರದಿಂದ ಮುಕ್ತನಾಗಿ ವಿಷ್ಣು ಸಾಯುಜ್ಯವನ್ನು ಹೊಂದಿದನು.

ಕೃಷ್ಣನ ಸಾರಥಿಯಾದ ದಾರುಕನು ಹುಡುಕುತ್ತಾ ಅಲ್ಲಿಗೆ ಬಂದು ಕೃಷ್ಣನನ್ನು ನೋಡಿ ಶೋಕಿಸಲು ತೊಡಗಿದನು. ಕೃಷ್ಣನು ದಾರುಕನಿಗೆ ಸಮಾಧಾನ ಹೇಳಿ, "ನೀನು ದ್ವಾರಕೆಗೆ ಹೋಗಿ ಎಲ್ಲರಿಗೂ ದ್ವಾರಕೆಯನ್ನು ಬಿಟ್ಟು ಹೋಗಬೇಕೆಂದು ಹೇಳು. ಉದ್ಧವನಿಗೂ ಅಕ್ರೂರನಿಗೂ ನನ್ನ ಅನುಗ್ರಹ ವಿರುವುದನ್ನು ಹೇಳಿ ಆಶೀರ್ವಾದ ತಿಳಿಸು. ಅರ್ಜುನನಿಗೂ ಹೇಳು. ನಿಮ್ಮೆಲ್ಲರನ್ನೂ ಕರೆದು ಕೊಂಡು ಹೋಗಲು ಅವನಿಗೆ ಹೇಳಿದ್ದೇನೆ. ಆ ಕೆಲಸ ಬೇಗನೇ ಆಗಬೇಕೆಂದು ಹೇಳು!" ಎಂದು ಆಜ್ಞೆಮಾಡಿ ಕಳುಹಿಸಿದನು.

ದಾರುಕನು ಇಷ್ಟವಿಲ್ಲದೆ ಅಡಿಗಡಿಗೂ ಹಿಂದಿರುಗಿ ನೋಡುತ್ತಾ ಹೊರಟುಹೋದನು.

ಅನಂತರ ಕೃಷ್ಣನು ಕೊಳಲನ್ನು ತೆಗೆದುಕೊಂಡು ಅತ್ಯಂತ ಮಧುರವಾಗಿ ನಾದ ಹೊರಡಿಸುವುದರಲ್ಲಿ ಲೀನನಾದನು. ಆ ರಾಗವು ಒಂದೇ ಸಮನೆ ಹೊರಡುತ್ತಾ ಪ್ರಣವನಾದವಾಗಿ ಝೇಂಕರಿಸಿ ಕೊಂಡು ಹೋಯಿತು.

ಅದರೊಂದಿಗೇ ಕೃಷ್ಣನು ಲೀಲಾಮಾನುಷ ವಿಗ್ರಹವನ್ನು ತ್ಯಜಿಸಿ ನಾದಾಂತರಾಳದಲ್ಲಿ ಹೋಗಿ ವೈಕುಂಠದ ಶೇಷತಲ್ಪದ ಮೇಲೆ ಪವಡಿಸಿದನು.

ಯಮುನಾನದಿಗೆ ದುಃಖವು ತಾಳಲಾಗದೆ ಮೇಲೆ ಮೇಲೆ ಉಕ್ಕೇರಿತು. ಆ ಇಡೀ ವನವನ್ನೆಲ್ಲಾ ಯಮುನಾಜಲವು ಮುಳುಗಿಸಿಬಿಟ್ಟಿತು. ನಿರ್ಯಾಣ ಹೊಂದಿದ ಕೃಷ್ಣನನ್ನು ಯಮುನೆ ತನ್ನ ಒಡಲಿ ನೊಳಗೆ ಅಡಗಿಸಿಕೊಂಡಳು.

ಕೃಷ್ಣನು ಯಾವಾಗ ನಿರ್ಯಾಣನಾದನೋ ಆ ಮರುಕ್ಷಣದಲ್ಲಿಯೇ ಕಲಿಯುಗವು ಪ್ರವೇಶ ಮಾಡಿತು. ಕಲಿ ಪ್ರಭಾವವು ಆಗಲೇ ಪ್ರಾರಂಭ ವಾಗತೊಡಗಿತು.

ಉದ್ಧವನು ಕೃಷ್ಣಾವತಾರದ ತತ್ವವನ್ನೂ, ಕೃಷ್ಣಭಕ್ತಿಯನ್ನೂ ಲೋಕದಲ್ಲಿ ಪ್ರಬೋಧ ಮಾಡಿ ಕೊಂಡಿದ್ದನು.

ಕೃಷ್ಣನು ಉದ್ಧವನಿಗೆ ಉಪದೇಶ ಮಾಡಿದ ವಿಷಯಗಳೆಲ್ಲವೂ ಭಗವದ್ಗೀತೆಯಲ್ಲಿ ಸೇರಿಕೊಂಡು, ಭಗವದ್ಗೀತೆ ಆಚಂದ್ರಾರ್ಕಸ್ಥಾಯಿಯಾಗಿ ನೆಲೆನಿಂತಿದೆ. ಕೃಷ್ಣನು ಲೀಲಾಮಾನುಷ ವಿಗ್ರಹನೆಂದು ಅವನ ಇಡೀ ಜೀವನಚರಿತ್ರೆಯಿಂದ ಗೊತ್ತಾಗುತ್ತದೆ. ತನ್ನ ಅವತಾರದ ಪ್ರಯೋಜನವನ್ನು ಸಾರ್ಥಕಗೊಳಿಸ ಲಿಕ್ಕಾಗಿ, ಯಾವ ಕಾಲಕ್ಕೆ ಹೇಗೆ ಹೇಗೆ ನಡೆದು ಕೊಳ್ಳಬೇಕೋ ಅದನ್ನೆಲ್ಲ ಚೆನ್ನಾಗಿ ತಿಳಿದು, ಆಚರಣೆಯಲ್ಲಿ ತೋರಿಸಿದ ದೊಡ್ಡ ಸರ್ವಜ್ಞನು ಕೃಷ್ಣ. ಕಾರ್ಯವಾದಿಯಾಗಿ, ಆದರ್ಶಗಳಿಗಿಂತಲೂ ದುಷ್ಟಶಿಕ್ಷಣ, ಶಿಷ್ಟರಕ್ಷಣಗಳೇ ಅವನ ಗುರಿ. ಮುಖ್ಯವಾಗಿ ರಾಜತಂತ್ರಗಳಿಗೆ ಅವನೇ ಆದರ್ಶ ರೂಪಿ. ಮಾನವಲೀಲೆಗಳನ್ನು ಬಹಳ ಚೆನ್ನಾಗಿ ಮಾಡಿ ತೋರಿಸಿದವನಾದರೂ ಮಾನವ ಸಹಜ ವಾದ ಬಯಕೆಗಳಿಗೂ, ಅನುಬಂಧಗಳಿಗೂ ಅಂಟದೆ, ರಾಗದ್ವೇಷಗಳಿಗೆ ಅತೀತನಾಗಿ ತನ್ನನ್ನು ತಾನು ತಿಳಿದುಕೊಂಡವನಾದುದರಿಂದಲೇ ಲೀಲಾಮಾನುಷ ಮೂರ್ತಿಯೆಂದು ಖ್ಯಾತನಾಗಿದ್ದಾನೆ.

ಕೃಷ್ಣಾವತಾರದ ಮಹಾ ಫಲವಾಗಿ ಭಗವದ್ಗೀತೆ ಎಲ್ಲಾ ಕಾಲಕ್ಕೂ, ಎಲ್ಲದಕ್ಕೂ ಪ್ರಮಾಣ ಗ್ರಂಥವಾಗಿ, ಚಿಕ್ಕದಾದರೂ ಪ್ರಪಂಚದಷ್ಟು ತೂಕವಾಗಿ ನಿಂತಿದೆ. ಭಾರತವು ಪಂಚಮ ವೇದವೆನಿಸಿದೆ.

ಹೀಗೆ ಸೂತಪುರಾಣಿಕನು ಕೃಷ್ಣಾವತಾರದ ಮಹಾ ಕಥೆಯನ್ನು ಹೇಳಿ ಮುಗಿಸಿದನು.





"**ಸೂ**ತ ಮುನೀಂದ್ರಾ, ಒಂದು ಸಂಗತಿ ನಮಗೆ ಸ್ಪಷ್ಟವಾಗಿ ತಿಳಿದಿಲ್ಲ. ವಿಷ್ಣು ತನ್ನ ಮತ್ತೊಂದು ರೂಪವಾದ ಕೃಷ್ಣನಾಗಿ ಗೋಲೋಕದಲ್ಲಿರುವನೆಂದು ಹೇಳಿದ್ದೀರಿ. ಆ ಕೃಷ್ಣನ ವಿಷಯವನ್ನು ಸ್ವಲ್ಪ ವಿವರವಾಗಿ ತಿಳಿಯಲು ಆಶೆಯಾಗಿದೆ. ದಯವಿಟ್ಟು ಹೇಳಬೇಕು" ಎಂದು ಶೌನಕಾದಿ ಮುನಿಗಳು ಕೇಳಿಕೊಂಡರು. ಆಗ ಸೂತ ಪುರಾಣಿಕನು ಹೀಗೆ ಹೇಳಲು ಪ್ರಾರಂಭಿಸಿದನು :

"ಗೋಲೋಕವೆಂಬುದು ಸತ್ಯಲೋಕಕ್ಕಿಂತ ಮೇಲೆ ಇರುವಂತಹ ಪುಣ್ಯ ಲೋಕ. ಅದು ಅನೇಕ ನಕ್ಷತ್ರ ಸಮುದಾಯಗಳಿಂದ ಯಾವಾಗಲೂ ಬೆಳುದಿಂಗಳಂತಹ ತಣ್ಣನೆಯ ಬೆಳಕಿನಿಂದ ತುಂಬಿಕೊಂಡಿರುತ್ತದೆ. ಅಲ್ಲಿ ವಿಷ್ಣು ಅತಿ ಗಾಢವಾದ ನೀಲರಂಗಿನಲ್ಲಿ ಕಪ್ಪಗೆ ಶೋಭಿಸುತ್ತ ಕೃಷ್ಣನೆಂಬ ಹೆಸರನ್ನು ಪಡೆದಿರುತ್ತಾನೆ. ಅಲ್ಲಿ ದಿವ್ಯವಾದ ವಿರಜಾನದಿ ಪ್ರವಹಿಸಿಕೊಂಡಿರುತ್ತದೆ. ನದಿಯ ತೀರದಲ್ಲಿರುವ ತುಲಸೀವನದೊಳಗೆ, ಕೃಷ್ಣನು ಮುರಳಿಯೊಳಗಿನಿಂದ ದಿವ್ಯನಾದವನ್ನು ಹೊರಡಿಸುತ್ತಿರುವಾಗ, ಆ ನಾದವೇ ರಾಧೆಯ ರೂಪದಲ್ಲಿ ಅಲ್ಲಿ ಪ್ರತ್ಯಕ್ಷವಾಗಿದೆ. ರಾಧೆಯೂ ಕೃಷ್ಣನೂ ಒಬ್ಬರನ್ನು ಬಿಟ್ಟು ಒಬ್ಬರಿಲ್ಲ. ಪ್ರಕೃತಿಯೇ ರಾಧೆಯೆಂದೂ, ಪುರುಷನೇ ಕೃಷ್ಣನೆಂದೂ ಹೇಳಬಹುದು. ಅವರಿಬ್ಬರೂ ಜತೆಯಾಗಿ ಎಡೆಬಿಡದೆ ಗೋಲೋಕದಲ್ಲಿ ವಿಹರಿಸಿಕೊಂಡಿರುತ್ತಾರೆ. ಸುದಾಮನು ಸದಾಕಾಲವೂ ಕೃಷ್ಣನನ್ನು ಸೇವಿಸಿಕೊಂಡಿರುತ್ತಾನೆ.

ಅಲ್ಲಿ ರಾಧಾದೇವಿಯ ಶರೀರದಿಂದ ಅನೇಕ ಮಂದಿ ಗೋಪಿಕೆಯರು ಹುಟ್ಟಿದರು. ವಿರಜಾನದಿ ಕೂಡಾ ಸ್ತ್ರೀರೂಪ ಧರಿಸಿ ವಿರಜಾದೇವಿಯೆನಿಸಿ ಕೃಷ್ಣನನ್ನು ಪ್ರೇಮದಿಂದ ಆರಾಧಿಸಿಕೊಂಡಿರುತ್ತಾಳೆ. ಒಂದು ಸಾರಿ ರಾಧಾಕೃಷ್ಣರು ಪರಸ್ಪರ ಅನುರಾಗ ಬದ್ಧರಾಗಿ ಏಕಾಂತದಲ್ಲಿರುವಾಗ ಅಲ್ಲಿಗೆ ಕೃಷ್ಣನನ್ನು ನೋಡಲು ವಿರಜಾದೇವಿ ಬಂದಳು. ರಾಧೆ ಕೋಪಗೊಂಡು ಅವಳನ್ನು ಭೂಲೋಕದಲ್ಲಿ ಹುಟ್ಟುವಂತೆ ಶಪಿಸಿದಳು. ಹಾಗೆ ಶಪಿಸಿದ್ದು ಅನುಚಿತವಾಯಿತೆಂದು

೨೦. ಕಲಿಯುಗ ದೈವ



ಸುದಾಮನು ರಾಧೆಯೊಂದಿಗೆ ಹೇಳಿದನು. ಆಗ ರಾಧೆ ಅವನ ಮೇಲೆಯೂ ಕೋಪಿಸಿ, "ನೀನು ಕೂಡಾ ಹೋಗಿ ಭೂಮಿಯಲ್ಲಿ ರಾಕ್ಷಸನಾಗಿ ಹುಟ್ಟು!" ಎಂದು ಶಾಪಕೊಟ್ಟಳು.

ವಿರಜಾದೇವಿ ರಾಜಕುಮಾರಿಯಾಗಿ ಭೂಮಿಯಲ್ಲಿ ಹುಟ್ಟಿ, ತುಲಸೀ ಎಂದೂ ಬೃಂದಾ ಎಂದೂ ಹೆಸರು ಪಡೆದಳು.

ಒಂದು ಸಾರಿ ದೇವೇಂದ್ರನು ಕೈಲಾಸಕ್ಕೆ ಹೋಗಿ ದ್ವಾರಕ್ಕೆ ಅಡ್ಡವಾಗಿ ನಿಂತಿದ್ದ ರುದ್ರಭಟನೇ ಶಿವನೆಂದು ತಿಳಿಯದೆ ಅವನ ಮೇಲೆ ತನ್ನ ವಜ್ರಾಯುಧವನ್ನು ಝುಳಪಿಸಿದನು. ಆಗ ಶಿವನು ನಿಜರೂಪದಿಂದ ಪ್ರತ್ಯಕ್ಷನಾಗಿ ಕೋಪದಿಂದ ತನ್ನ ಮೂರನೇ ಕಣ್ಣನ್ನು ತೆರೆದನು.

ಆಗ ಇಂದ್ರನು ಹೆದರಿ ಶರಣಾಗತನಾಗಿ ರಕ್ಷಿಸುವಂತೆ ಪ್ರಾರ್ಥಿಸಲು, ಶಿವನು ತನ್ನ ಕೋಪಾಗ್ನಿಯನ್ನು ಸಮುದ್ರದೊಳಗೆ ಕಳುಹಿಸಿದನು. ಅದೇ ಸಮಯದಲ್ಲಿ ರಾಧಾದೇವಿಯ ಶಾಪದಿಂದ ಸುದಾಮನು ಗೋಲೋಕದಿಂದ ಆ ಶಿವಾಗ್ನಿಗೆ ಬಿದ್ದು ಸಮುದ್ರದಲ್ಲಿ ಬಿಳಿಯ ಶಂಖವನ್ನು ತಲೆಯಲ್ಲಿ ಧರಿಸಿದ ಬಾಲಕನಾಗಿ ಹುಟ್ಟಿದನು.

ಸುದಾಮನೂ ಕೃಷ್ಣನೂ ಬೇರೆ ಬೇರೆಯಾಗಿರುವವರಲ್ಲ. ಕೃಷ್ಣನು ತನ್ನ ಸಹಚರನಾದ ಸುದಾಮನ ಮೇಲಿನ ಅಭಿಮಾನದಿಂದ ಆ ಬಾಲಕನಿಗೆ ಅಜೇಯವಾದ ಕೃಷ್ಣ ಕವಚವನ್ನು ಪ್ರಸಾದಿಸಿದನು.

ಸಮುದ್ರ ತೀರದಲ್ಲಿ ಪುತ್ರನಿಗಾಗಿ ತಪಸ್ಸು ಮಾಡಿಕೊಂಡಿದ್ದ ದಂಭನೆಂಬೊಬ್ಬ ರಾಕ್ಷಸರಾಜನು ಸಮುದ್ರದಲ್ಲಿ ತೇಲುವ ಬಾಲಕನನ್ನು ನೋಡಿ, ತನಗೆ ಸಮುದ್ರರಾಜನು ಕರುಣಿಸಿದ ಕುಮಾರನೆಂಬ ಭಾವನೆಯಿಂದ ಎತ್ತಿಕೊಂಡನು. ಆ ಬಾಲಕನಿಗೆ ಜಲಂಧರನೆಂದೂ, ಶಂಖಚೂಡನೆಂದೂ ಹೆಸರು ಬಂತು.

ತುಲಸೀದೇವಿ ವಿಷ್ಣುವನ್ನೇ ತನ್ನ ಗಂಡನೆಂದು ಭಾವಿಸುತ್ತ, ವಿಷ್ಣುವನ್ನು ಆರಾಧಿಸಿಕೊಂಡು ತಪಸ್ಸು ಮಾಡುತ್ತಿರುವಾಗ ಜಲಂಧರನು ಅವಳನ್ನೊಮ್ಮೆ ನೋಡಿದನು.

ಆಮೇಲೆ ಅವಳನ್ನೇ ಮದುವೆಯಾಗುವ ಆಶೆಯಿಂದ, ಜಲಂಧರನು ತುಲಸಿಯನ್ನು ತನಗೆ ಕೊಟ್ಟು ವಿವಾಹಮಾಡಬೇಕೆಂದು ಕೇಳಿದನು.

ಧರ್ಮಧ್ವಜನು ಒಪ್ಪಿದನು. ತುಲಸಿಯೊಂದಿಗೆ ಜಲಂಧರನಿಗೆ ವಿವಾಹವಾಯಿತು. ತುಲಸಿ ಜಲಂಧರನೇ ತನ್ನ ದೇವರೆಂದು ಎಣಿಸಿ, ವಿಷ್ಣುವೇ ಆ ರೂಪದಲ್ಲಿ ತನ್ನನ್ನು ವರಿಸಿದನೆಂದು ಭಾವಿಸಿ ಪತಿವ್ರತೆಯಾಗಿ ನಡೆದುಕೊಳ್ಳುತ್ತಿದ್ದಳು.

ಜಲಂಧರನು ಅಂತಹ ಪತ್ನಿಗೆ ತಕ್ಕ ಪತಿಯಾಗಿ ಇರಲಾಗದೆ, ರಾಕ್ಷಸ ಬಲವನ್ನು ಸೇರಿಸಿಕೊಂಡು ದೇಶ ದೇಶಗಳಲ್ಲಿ ವಿಜೃಂಭಿಸುತ್ತ, ಭಯಂಕರನಾಗಿ ಮೂರು ಲೋಕಗಳನ್ನೂ ಜಯಿಸಿದನು. ಮುಖ್ಯವಾಗಿ ತುಲಸೀದೇವಿಯ ಪಾತಿವ್ರತ್ಯ ಮಹಿಮೆಯಿಂದ

ಅವನಿಗೆ ಎಲ್ಲಿಗೆ ಹೋದರೂ ಒಂದಿಷ್ಟೂ ಹಾನಿ ಯಾಗುತ್ತಿದ್ದಿಲ್ಲ. ಜಯವೇ ಲಭಿಸುತ್ತಿದ್ದಿತು.

ತುಲಸಿಯ ಸೌಂದರ್ಯಕ್ಕೆ ಮುಗ್ಧನಾಗಿ ಜಲಂಧರನು ಅವಳನ್ನು ವಿವಾಹವಾದನೇ ಹೊರತು, ಅವನಿಗೆ ತುಲಸಿಯಲ್ಲಿ ಸ್ವಾರಸ್ಯ ತಗ್ಗಿತು. ಅವನ ರಾಕ್ಷಸತನಕ್ಕೂ ತುಲಸಿಯ ಸಾತ್ವಿಕತನಕ್ಕೂ ಮದುವೆ ಯಲ್ಲಿಯೇ ಕೂಡಿಬರಲಿಲ್ಲ. ಅವನಿಗೆ ತುಲಸಿಯಲ್ಲಿ ಯಾವ ಸ್ವಾರಸ್ಯವೂ ಕಾಣಲಿಲ್ಲ. ಹಸೆಮಣೆಯ ಮೇಲಿಂದ ಎದ್ದಮೇಲೆ ಅವನು ಅವಳನ್ನು ನೋಡುವುದನ್ನೇ ಬಿಟ್ಟನು.

ತುಲಸಿ ಸದಾ ಗಂಡನನ್ನೇ ನೆನೆದುಕೊಂಡು ಪೀಠದಲ್ಲಿ ಮೂಡಿದ್ದ ಅವನ ಅಡಿ ಜಾಡುಗಳನ್ನೇ ಆರಾಧಿಸಿಕೊಂಡಿದ್ದಳು.

ಜಲಂಧರನು ಕೃಷ್ಣ ಕವಚ ಪ್ರಭಾವದಿಂದ ಅಜೇಯನಾಗಿ ಮೂರು ಲೋಕಗಳನ್ನೂ ಜಯಿಸಿ ರಾಕ್ಷಸ ಸಾಮ್ರಾಟನಾದನು.

ಹಾಗಿರುವಾಗ ಕಲಹಭೋಜನನಾದ ನಾರದನು ಪಾರ್ವತಿ ದೇವಿಯ ಸೌಂದರ್ಯವನ್ನು ಕುರಿತು ಜಲಂಧರನ ಮುಂದೆ ಬಹಳವಾಗಿ ವರ್ಣಿಸಿದನು. ಅದರಿಂದ ಮೋಹಿತನಾದ ಜಲಂಧರನು ಕೈಲಾಸದ ಮೇಲಕ್ಕೆ ದಾಳಿಮಾಡಿ ಪಾರ್ವತಿಯನ್ನು ತನಗೆ ಕೊಡಬೇಕೆಂದೂ, ತಪ್ಪಿದರೆ ಯುದ್ಧಮಾಡಿ ಅವಳನ್ನು ಒಯ್ಯುವೆನೆಂದೂ ಶಿವನನ್ನು ಕೆಣಕಿದನು. ಶಿವನು ಅವನ ಮೇಲೆ ಬೀಸಿದ ತ್ರಿಶೂಲವು ಜಲಂಧರನ ಎದೆಗೆ ತಾಗಿ ಖಂಗನೆ ಕೆಳಗೆ ಬಿದ್ದಿತು.

ಪಾರ್ವತಿ ಹೆದರಿ ಓಡಿಹೋಗಿ ರಾಧಾದೇವಿ ಯನ್ನು ಮೊರೆಹೊಕ್ಕಳು.

ಆಗ ರಾಧೆ ಪಾರ್ವತಿಯೊಂದಿಗೆ "ಜಲಂಧರನು ಶಿವನ ನೇತ್ರಾಗ್ನಿಯಿಂದಲೇ ಹುಟ್ಟಿದ್ದಾನೆ. ಆ ಶಿವ ನಿಂದಲೇ ಅವನ ಸಂಹಾರವಾಗಬೇಕಾಗಿದೆ. ಆದರೆ ಅವನ ಶರೀರದಲ್ಲಿರುವ ಕೃಷ್ಣಕವಚದಿಂದಾಗಿ ಯಾವ




ಆಯುಧವೂ ಅವನನ್ನು ಏನೂ ಮಾಡಲಾರದು. ತುಲಸೀದೇವಿಯ ಪಾತಿವ್ರತ್ಯ ಮಹಿಮೆಯಿಂದ ಅವನಿಗೆ ಪ್ರಾಣಭಯವೂ ಇಲ್ಲ. ಆದರೆ ವಿಷ್ಣು ಮಾಯೆಗೆ ಅತೀತವಾದುದು ಯಾವುದೂ ಇಲ್ಲ. ನೀನು ವಿಷ್ಣುವನ್ನು ಪ್ರಾರ್ಥಿಸು. ಅವನೇ ಏನಾ ದರೂ ಪರಿಹಾರ ತೋರಿಸುವನು" ಎಂದು ಹೇಳಿದಳು.

ಅದರಂತೆ ಪಾರ್ವತಿ ವಿಷ್ಣುವನ್ನು ಪ್ರಾರ್ಥಿಸಿ ದಳು. ವಿಷ್ಣು ವೃದ್ಧ ಬ್ರಾಹ್ಮಣನ ರೂಪದಲ್ಲಿ ಹಿಮಾಚಲ ಪ್ರದೇಶಕ್ಕೆ ಹೋಗಿ, ಯುದ್ಧವಿಲ್ಲದ ಸಮಯ ನೋಡಿ, ಜಲಂಧರನ ಮುಂದೆ ಗಡಗಡ ನಡುಗುತ್ತ, ಅವನನ್ನು ಅನೇಕ ವಿಧದಲ್ಲಿ ಹೊಗಳುತ್ತ, "ವೀರಾಧಿವೀರನಾದ ನಿನಗೆ ಬೇರೊಂದು ಕವಚ ವೇತಕ್ಕೆ? ಚಳಿಜ್ವರದಿಂದ ಸಾಯುವ ನನಗೆ ಅದನ್ನು ಕೊಟ್ಟು ಸ್ವಲ್ಪ ಕಾಲದವರೆಗೆ ನನ್ನನ್ನು ಬದುಕಿಸಪ್ಪಾ" ಎಂದು ಪ್ರಾರ್ಥಿಸಿದನು.



ಜಲಂಧರನು ದರ್ಪದಿಂದ, " ಹೌದೌದು. ನನಗೇಕೆ ಕೃಷ್ಣಕವಚ ? ತೆಗೆದುಕೋ " ಎಂದು ತನ್ನ ಕವಚವನ್ನು ವೃದ್ಧ ಬ್ರಾಹ್ಮಣನಿಗೆ ದಾನ ಮಾಡಿದನು.

ತರುವಾಯ ವಿಷ್ಣು ಜಲಂಧರನ ರೂಪವನ್ನು ತಾಳಿ ತುಲಸೀದೇವಿಯ ಮಂದಿರದೊಳಗೆ ಹೋದನು. ಆ ಸಮಯದಲ್ಲಿ ಕೈಲಾಸದ ಹಿಮಾಚಲ ಪ್ರದೇಶದಲ್ಲಿ ಶಿವನಿಗೂ ಜಲಂಧರನಿಗೂ ಯುದ್ಧವು ನಡೆಯುತ್ತಾ ಇದ್ದಿತು.

ಹಿಂದೆ ಒಂದಾನೊಂದು ಕಾಲದಲ್ಲಿ ಗಂಡಕಿ ಎಂಬ ದೇವಕನ್ಯೆ ಭೂಲೋಕಕ್ಕೆ ಬಂದು ವಿಷ್ಣುವನ್ನು ಕುರಿತು ದೊಡ್ಡ ತಪಸ್ಸನ್ನು ಮಾಡಿದಳು. ವಿಷ್ಣು ಅವಳಿಗೆ ಮೆಚ್ಚಿ ಏನು ವರ ಬೇಕೆಂದು ಕೇಳಿದನು. " ದೇವಾ ! ನಿನ್ನನ್ನು ನನ್ನೊಳಗೇ ತುಂಬಿಕೊಂಡು ರತ್ನನಿಧಿಯನ್ನು ಕಾಪಾಡಿಕೊಳ್ಳುವ ಹಾಗೆ ಮಾಡಿಕೊಳ್ಳಬೇಕೆಂದಿದ್ದೇನೆ. ಬೇರೆ ಯಾವ ಕೋರಿಕೆಯೂ ನನಗಿಲ್ಲ " ಎಂದಳು ಗಂಡಕಿ.

" ಸರಿ. ನೀನು ಗಂಡಕಿ ನದಿಯಾಗಿ ಪ್ರವಹಿಸಿಕೊಂಡಿರು. ನಿನ್ನ ನೀರಿನೊಳಗೆ ನಾನು ಸಾಲಗ್ರಾಮವಾಗಿ ಇರುತ್ತೇನೆ " ಎಂದು ಹೇಳಿದನು. ಅದರಂತೆ ಗಂಡಕೀದೇವಿ ನದಿಯಾಗಿ ಬದಲಾಯಿಸಿದಳು.

ತುಲಸೀದೇವಿ ವಿಷ್ಣುವಿನ ಮಾಯಾ ಪ್ರಭಾವಕ್ಕೆ ಒಳಗಾಗಿ ತನ್ನ ಗಂಡನು ಇಷ್ಟು ಕಾಲದ ಮೇಲೆ ತನ್ನ ಬಳಿಗೆ ಬಂದುದನ್ನು ನೋಡಿ ಭ್ರಮೆಗೆ ಬಿದ್ದು ಅತ್ಯಾನಂದದಿಂದ ಪತಿಯ ರೂಪದಲ್ಲಿದ್ದ ವಿಷ್ಣುವಿನ ಪಾದಗಳಿಗೆ ನಮಸ್ಕಾರ ಮಾಡಿದಳು. ಅದೇ ಸಮಯದಲ್ಲಿ ಶಿವನು ಜಲಂಧರನ ಕಂಠವನ್ನು ತ್ರಿಶೂಲದಿಂದ ಛೇದಿಸಿಬಿಟ್ಟನು. ಆ ಶಿರಸ್ಸು ಹಾರಿ ಬಂದು ತುಲಸೀದೇವಿಯ ಕೈಗಳಿಗೆ ತಾಗಿ ನೆಲಕ್ಕೆ ಹೊರಳಿ ಬಿದ್ದಿತು.

ತುಲಸಿ ಗಾಬರಿಯಾಗಿ ಗಂಡನ ತಲೆಯನ್ನು ನೋಡಿ, ಭ್ರಮೆಯಿಂದ ಬಿಡುಗಡೆ ಹೊಂದಿ, " ಓ ಕಳ್ಳ ವಿಷ್ಣೂ ! ನನ್ನನ್ನು ಮೋಸಪಡಿಸಿದ ನೀನು ಕಲ್ಲಾಗಿ ಹೋಗು ! " ಎಂದು ಶಪಿಸಿದಳು.

ವಿಷ್ಣು ಮುಗುಳುನಗು ಮಿನುಗಿಸುತ್ತ, " ತುಲಸೀ ಸತೀ ! ಸಂತೋಷದಿಂದ ನಿನ್ನ ಶಾಪವನ್ನು ಶಿರಸಾ ವಹಿಸಿಕೊಳ್ಳುತ್ತೇನೆ. ನಿನ್ನ ಗಂಡನಾದ ಜಲಂಧರನನ್ನು ಯಾರೆಂದು ತಿಳಿದೆ ? ಸುದಾಮನೇ ! ನಾನೇ ಕೃಷ್ಣ ಸುದಾಮರ ರೂಪಗಳಲ್ಲಿ ಗೋಲೋಕದಲ್ಲಿರುವವನು ! ನಾನು ಬೇರೆ ನಿನ್ನ ಗಂಡ ಬೇರೆ ಎಂದು ತಿಳಿಯಬೇಡ ! " ಎಂದನು.

ತುಲಸಿ ಆಶ್ಚರ್ಯದಿಂದ ನೋಡುತ್ತಿರಲು, " ಹೌದು ತುಲಸೀ ! ಮದುವೆಗೆ ಮೊದಲು ನೀನು ನನ್ನನ್ನು ಪತಿಯಾಗಬೇಕೆಂದು ಕೋರಿ ಆರಾಧಿಸಿದವಳು ತಾನೇ ? ವಿವಾಹ ನಡೆದ ಮೇಲೆ ವ್ಯವಹಾರ ಧರ್ಮವನ್ನನುಸರಿಸಿ, ಸತೀಲೋಕಕ್ಕೆ ಆದರ್ಶಪ್ರಾಯಳಾಗಿ ಪರಮ ಸಾಧ್ವಿಯಾದ ಸತೀ ತುಲಸೀ ದೇವಿಯಾಗಿದ್ದವಳು ನೀನು. ನೀನು ಪತಿವ್ರತೆಯ ಚಿಹ್ನೆ

ಯಾಗಿ ತುಲಸಿ ಗಿಡದ ರೂಪದಲ್ಲಿ ಭೂಮಿಯಲ್ಲಿರು. ತುಲಸಿ ನನಗೆ ಅತ್ಯಂತ ಪ್ರೀತಿಪಾತ್ರವಾಗಿರುತ್ತದೆ. ತುಲಸಿಯ ಸನ್ನಿಧಿಯಲ್ಲಿ ನಾನು ಯಾವಾಗಲೂ ಶಿಲಾ ರೂಪದಲ್ಲಿರುತ್ತೇನೆ" ಎಂದು ಹೇಳಿದನು.

ವಿಷ್ಣು ಗಂಡಕೀ ನದಿಯಲ್ಲಿ ಸಾಲಗ್ರಾಮ ಶಿಲೆಗಳ ರೂಪದಲ್ಲಿ ಅವತರಿಸಿ ಮುಳುಗಿರತೊಡಗಿದನು. ತುಲಸೀದೇವಿ ಪತಿಯ ಶಿರಸ್ಸಿನ ಜೊತೆ ಸಹಗಮನ ಮಾಡಿದ ಮೇಲೆ ತುಲಸೀ ಗಿಡವಾಗಿ ಮೊಳೆತಳು.

ಗಂಡಕೀ ನದಿಯಲ್ಲಿ ಅಪರೂಪವಾಗಿ ದೊರಕುವ ಸಾಲಗ್ರಾಮ ಶಿಲೆಗಳನ್ನು ತುಲಸೀ ಗಿಡದ ಬುಡದಲ್ಲಿಟ್ಟು ಪೂಜೆ ಮಾಡುವ ಪದ್ಧತಿ ಏರ್ಪಟ್ಟಿತು. ತುಲಸಿ ದಳಗಳು ಸಾಲಗ್ರಾಮ ಶಿಲೆಗಳ ಮೇಲೆ ಬಿದ್ದು ಅಲಂಕರಿಸುತ್ತಿದ್ದುವು. ವಿಷ್ಣುವಿಗೆ ತುಲಸೀ ಮಣಿಯ ಮಾಲೆಗಳೆಂದರೆ ಬಹಳ ಪ್ರೀತಿ.



ಹೀಗಿರುವಾಗ ಒಮ್ಮೆ ಮಹರ್ಷಿಗಳೆಲ್ಲಾ ಸಭೆ ಸೇರಿ, "ತ್ರಿಮೂರ್ತಿಗಳಲ್ಲಿ ಯಾರು ಹೆಚ್ಚಿನವರು?" ಎಂಬ ಪ್ರಶ್ನೆಯನ್ನು ತಮ್ಮೊಳಗೆ ನಿರ್ಣಯಿಸಲು ಸಾಧ್ಯವಾಗದೆ, ಅದನ್ನು ಪರೀಕ್ಷಿಸಲು ಭೃಗು ಮಹರ್ಷಿಯನ್ನು ಕಳುಹಿಸಿದರು.

ಭೃಗು ಮೊದಲು ಸತ್ಯಲೋಕದಲ್ಲಿರುವ ಬ್ರಹ್ಮನ ಬಳಿಗೆ ಹೋದನು. ಅಲ್ಲಿ ಬ್ರಹ್ಮನು ಸರಸ್ವತಿಯ ವೀಣಾಗಾನದಲ್ಲಿ ಮೈಮರೆತು ಮುಳುಗಿ ತೇಲಾಡುತ್ತಿದ್ದನೇ ಹೊರತು, ಭೃಗು ಮಹರ್ಷಿಯನ್ನು ನೋಡಲೇ ಇಲ್ಲ.

ಅಲ್ಲಿಂದ ಭೃಗು ಕೈಲಾಸಕ್ಕೆ ಹೋಗಿ ಪಾರ್ವತಿಯೊಂದಿಗೆ ಸದಾ ನೃತ್ಯದಲ್ಲೇ ಮಗ್ನನಾಗಿದ್ದ ಶಿವನನ್ನು ನೋಡಿ, ಶಿವನ ಅನಾದರಣೆಯಿಂದ ಕೋಪಿಸಿಕೊಂಡು ಹಿಂದಿರುಗಿ, ವೈಕುಂಠಕ್ಕೆ ಹೋದನು.

ತ್ರಿಮೂರ್ತಿಗಳಲ್ಲಿ ಇಬ್ಬರ ಅನಾದರಣೆಯಿಂದ ಕೋಪದಲ್ಲಿದ್ದ ಭೃಗುವಿನ ಪಾದದಲ್ಲಿ ಅಹಂಕಾರದ ಕಣ್ಣು ಮೂಡಿದ್ದಿತು. ವೈಕುಂಠದಲ್ಲಿ ಲಕ್ಷ್ಮೀ ಸಮೇತವಾಗಿ ಶೇಷತಲ್ಪದಲ್ಲಿ ಮಲಗಿದ್ದ ವಿಷ್ಣುವಿನ ವಕ್ಷಸ್ಥಲದ ಮೇಲೆ ಭೃಗು ಪಾದದಿಂದ ಒದ್ದು ಎಬ್ಬಿಸಿದನು.

ವಿಷ್ಣುಮೂರ್ತಿ ಧಿಗ್ಗನೆದ್ದು ಭೃಗುವಿನ ಪಾದವನ್ನು ತನ್ನ ತಲೆಯ ಮೇಲೆ ಇಟ್ಟುಕೊಂಡು, "ಮಹರ್ಷಿ ಪ್ರವರನೇ! ನಿನ್ನ ಮೃದು ಪಾದಾರವಿಂದವು ನನ್ನ ಕಠಿಣವಾದ ವಕ್ಷವನ್ನು ತಾಗಿ ಎಷ್ಟು ನೊಂದಿತೋ!" ಎಂದು ಪಾದವನ್ನು ಒತ್ತುತ್ತ, ಪಾದದಡಿಯಲ್ಲಿದ್ದ ಗರ್ವದ ಕಣ್ಣನ್ನು ಹೊಸಕಿ ಹಾಕಿದನು. ಆದರಿಂದ ಭೃಗುವಿನ ಗರ್ವವು ಪೂರ್ತಿ ಹೋಯಿತು.

ಭೃಗು ವಿಷ್ಣುವನ್ನು ಸ್ತೋತ್ರ ಮಾಡುತ್ತಾ ಋಷಿಗಳ ಮುಂದೆ ಹೋಗಿ ವಿಷ್ಣುವಿನ ದೊಡ್ಡತನವನ್ನು ವಿವರಿಸಿ ಹೇಳಿದನು.

ಆದರೆ ವೈಕುಂಠದಲ್ಲಿ ಲಕ್ಷ್ಮಿಗೆ ಬಹಳ ಕೋಪ ಬಂದಿತ್ತು. ವಿಷ್ಣುವಿನ ವಕ್ಷಸ್ಥಲದ ಮೇಲೆ ತಾನು



ಒರಗಿಕೊಂಡಿರುವಾಗ ಭೃಗುಮುನಿ ಬಂದು ಒದ್ದುದರಿಂದ ಲಕ್ಷ್ಮೀದೇವಿಗೆ ದೊಡ್ಡ ಅವಮಾನವಾಗಿ ಹೋಯಿತು. ಪವಿತ್ರವಾದ ವಿಷ್ಣು ವಕ್ಷಸ್ಥಲವು ಮುನಿಯ ಪಾದಸ್ಪರ್ಶದಿಂದ ಅಪವಿತ್ರವಾಯಿತೆಂದು ಅವಳಿಗೆ ತೋರಿತು. ಇನ್ನು ತಾನು ವಿಷ್ಣುವಿನೊಂದಿಗೆ ಇರಲಾರೆನೆಂದು ಹೇಳಿ, ಭೂಲೋಕಕ್ಕೆ ಇಳಿದು ತಪಸ್ವಿನಿಯಾಗಿ ಇರತೊಡಗಿದಳು ಲಕ್ಷ್ಮಿ.

ವಿಷ್ಣು ಲಕ್ಷ್ಮಿಯನ್ನು ಹುಡುಕುತ್ತಾ, ಮಾನವ ರೂಪ ತಾಳಿ ಭೂಮಿಯ ಅರಣ್ಯಗಳಲ್ಲಿ ಹುಡುಕುತ್ತ ವಕುಳಾವತಿಯ ಆಶ್ರಮವನ್ನು ಸೇರಿಕೊಂಡನು. ಆ ವಕುಳಾವತಿ ಕೃಷ್ಣಾವತಾರದ ಕಾಲದಲ್ಲಿ ಯಶೋದೆಯಾಗಿದ್ದವಳೇ.

ಗೋಕುಲದಲ್ಲಿರುವಾಗ ಯಶೋದೆ ಒಮ್ಮೆ ಕೃಷ್ಣನೊಂದಿಗೆ, "ಕೃಷ್ಣಾ, ತಾಯಿಯಾದವಳಿಗೆ ಕುಮಾರನ ಮದುವೆ ನೋಡಬೇಕೆಂಬ ಆಸೆ ಎಷ್ಟರಮಟ್ಟಿಗಿದೆಯೆಂದು ಊಹಿಸಲೂ ಸಾಧ್ಯವಿಲ್ಲ. ಆ ಕೋರಿಕೆ ನನಗೆ ತೀರಲೇ ಇಲ್ಲ" ಎಂದಿದ್ದಳು. ಅದಕ್ಕೆ ಕೃಷ್ಣನು, "ಅಮ್ಮಾ, ಮುಂದಿನ ಜನ್ಮದಲ್ಲಿ ನಿನ್ನ ಕೋರಿಕೆ ಖಂಡಿತವಾಗಿಯೂ ತೀರುತ್ತದೆ" ಎಂದು ಮಾತು ಕೊಟ್ಟಿದ್ದನು.

ಹಾಗಿರುವಾಗ ಒಂದು ದಿನ ಆಕಾಶ ರಾಜನ ಮಗಳು ಪದ್ಮಾವತೀ ದೇವಿ ವನವಿಹಾರ ಮಾಡುತ್ತಾ ವಕುಳಾಶ್ರಮದ ಹತ್ತಿರ ಬಂದಳು. ಆಗ ಒಂದು ಮದ್ದಾನೆ ಘೀಂಕರಿಸಿಕೊಂಡು ಅವಳ ಕಡೆಗೆ ಬಂದಿತು. ಅವಳ ಗೆಳತಿಯರೆಲ್ಲಾ ಹೆದರಿ ಚೆಲ್ಲಾಚೆದರಾಗಿ ಓಡಿದರು. ಹೆದರಿ ನಡುಗುತ್ತಿದ್ದ ಪದ್ಮಾವತಿಯು ಶ್ರೀನಿವಾಸನ ಹತ್ತಿರವೇ ಬಿದ್ದು ಮೂರ್ಛೆ ಹೋದಳು.

ಶ್ರೀನಿವಾಸನು ಮದ್ದಾನೆಯ ಮುಂದೆ ಅಡ್ಡನಿಂತು ಕೈಎತ್ತಿದ ಕೂಡಲೇ ಮದ್ದಾನೆ ಮದವಿಳಿದು ತಟಸ್ಥವಾಗಿ ಸೊಂಡಿಲೆತ್ತಿ ಶ್ರೀನಿವಾಸನಿಗೆ ನಮಸ್ಕಾರ ಮಾಡಿತು. ಶ್ರೀನಿವಾಸನು ಪದ್ಮಾವತಿಯ ಕೈಹಿಡಿದು ಎಬ್ಬಿಸಿ ನಿಲ್ಲಿಸಿದನು. ಗೆಳತಿಯರು ಬಂದ ಮೇಲೆ ಪದ್ಮಾವತಿ ಹೊರಟುಹೋದಳು.

ಆಗ ಪದ್ಮಾವತೀ ಶ್ರೀನಿವಾಸರಿಗೆ, ಒಬ್ಬರ ಮೇಲೊಬ್ಬರಿಗೆ ಅನುರಾಗವೇರ್ಪಟ್ಟಿತು. ಪೂರ್ವ ಜನ್ಮದಲ್ಲಿ ಪದ್ಮಾವತಿ ವಿಷ್ಣುವೇ ತನ್ನ ಪತಿಯಾಗಬೇಕೆಂದು ತಪಸ್ಸು ಮಾಡಿಕೊಂಡಿದ್ದ ವೇದವತಿಯಾಗಿದ್ದವಳು. ರಾವಣನು ಅವಳನ್ನು ಮುಟ್ಟಿದ ಕಾರಣದಿಂದ ಯೋಗಾಗ್ನಿಯನ್ನು ಹುಟ್ಟಿಸಿ ದಹಿಸಿಕೊಂಡವಳು. ಈಗ ಆಕಾಶ ರಾಜಕುಮಾರಿಯಾಗಿ ಹುಟ್ಟಿದ್ದಳು.

ಶ್ರೀನಿವಾಸನು ಪದ್ಮಾವತಿಯ ಮೇಲೆ ಅನುರಾಗ ತಾಳಿರುವನೆಂದು ತಿಳಿದು ಮದುವೆ ನಿಶ್ಚಯ ಮಾಡಲು ವಕುಳಾದೇವಿ ಸಪ್ತರ್ಷಿಗಳನ್ನು ತನ್ನೊಂದಿಗೆ ಕರೆದುಕೊಂಡು ಆಕಾಶರಾಜನ ಭವನಕ್ಕೆ ಹೋದಳು. ಅದಕ್ಕಿಂತ ಮೊದಲು ಶ್ರೀನಿವಾಸನು ಕೊರ

ವಂಜಿಯ ವೇಷದಲ್ಲಿ ಅಲ್ಲಿಗೆ ಹೋಗಿ, ಪದ್ಮಾವತಿ ಬಯಸಿದವನೇ ಅವಳನ್ನು ಕೇಳಲು ತಾಯಿಯನ್ನು ಕಳುಹಿಸುವನೆಂದು ಭವಿಷ್ಯ ಹೇಳಿದನು.

ಆಮೇಲೆ ವಕುಳಾ ದೇವಿಯ ಮೂಲಕ ಮದುವೆ ನಿಶ್ಚಯವಾಯಿತು. ಕುಬೇರನು ಶ್ರೀನಿವಾಸನಿಗೆ ಬೇಕಾದ ಧನವನ್ನು ಕೊಟ್ಟನು. ಬಹು ವೈಭವ ದಿಂದ ಮದುವೆಯಾಯಿತು. ಶ್ರೀನಿವಾಸನು ಪದ್ಮಾ ವತಿಯನ್ನು ಕರೆದುಕೊಂಡು ತನ್ನ ಆಶ್ರಮಕ್ಕೆ ಹಿಂದಿರುಗಿದನು.

ನಾರದನು ಈ ಶುಭ ವಾರ್ತೆಯನ್ನು ತಪಸ್ಸಿನಲ್ಲಿ ರುವ ಲಕ್ಷ್ಮಿಯೊಂದಿಗೆ ಹೇಳಿದನು. ಅದನ್ನು ಕೇಳಿ ಲಕ್ಷ್ಮೀದೇವಿ ಕೋಪಾವೇಶದಿಂದ ಶ್ರೀನಿವಾಸನಿರು ವಲ್ಲಿಗೆ ಹೊರಟುಬಂದಳು.

ಅಷ್ಟು ದೂರದಲ್ಲಿ ಬರುವ ಲಕ್ಷ್ಮಿಯನ್ನು ನೋಡಿ, ಶ್ರೀನಿವಾಸನು ಪದ್ಮಾವತಿಯನ್ನು ಹಿಂದೆ ಬಿಟ್ಟು ಬೇಗಬೇಗನೇ ಏಳು ಶಿಖರಗಳಾಗಿದ್ದ ಶೇಷಾ ಚಲವನ್ನು ಅಧಿಗಮಿಸಿ ಶಿಖರಾಗ್ರದ ಮೇಲೆ ನಿಂತು ಲಕ್ಷ್ಮಿಯನ್ನು ಸ್ವಾಗತಿಸಿದನು.

ಲಕ್ಷ್ಮಿ ಬಂದ ಕೂಡಲೇ ಶ್ರೀನಿವಾಸನು ಅವಳ ಸುಡುನೋಟಕ್ಕೆ ಬದಲಾಗಿ ಮಂದಹಾಸ ಬೀರುತ್ತ ಕಗ್ಗಿನ ಶಿಲಾ ವಿಗ್ರಹವಾಗಿ ಬದಲಾವಣೆ ಹೊಂದಿ ದನು. ಆ ವಿಗ್ರಹ ತುಂಬಾ ತುಲಸೀ ಮಾಲೆ ಗಳಿಂದ ದಿವ್ಯ ಕಳೆಗಳಿಂದ ಬೆಳಗಿ ಶೋಭಿಸುತ್ತಿದ್ದಿತು. ಆ ವಿಗ್ರಹದಲ್ಲಿ ವಿಷ್ಣು ಶಿವಶಕ್ತಿಗಳು ಮೂರೂ ಏಕೀಭವಿಸಿಕೊಂಡಿದ್ದುವು. ಲಕ್ಷ್ಮಿ ಅದರ ವಕ್ಷ ಪ್ರದೇಶದಲ್ಲಿ ಅಂತರ್ಹಿತಳಾದಳು. ಆ ವಿಗ್ರಹವನ್ನು ನೋಡುತ್ತಿದ್ದಂತೆ ಇನ್ನೂ ಅನೇಕ ದಿವ್ಯ ರೂಪಗಳು ಗೋಚರಿಸುತ್ತಿದ್ದುವು.

ಯಾರು ಯಾವ ವಿಧವಾಗಿ ನೆನೆಯುವರೋ ಹಾಗೆಯೇ ಕಾಣಿಸುತ್ತ ಶ್ರೀನಿವಾಸನೆಂದೂ, ವೆಂಕಟ ರಮಣನೆಂದೂ, ವೇಂಕಟೇಶ್ವರನೆಂದೂ ಕರೆಯ ಲ್ಪಡುತ್ತ ಅಲ್ಲಿ ವಿಷ್ಣು ಕಲಿಯುಗ ದೈವವೆನಿಸಿ, ಸಪ್ತಗಿರಿಯನ್ನು ಬೆಳಗಿಸಿಕೊಂಡಿದ್ದನು.

ಆ ಶೇಷಾದ್ರಿಯ ಹತ್ತಿರದಲ್ಲೇ ಪದ್ಮಾವತಿ ಅಲಮೇಲು ಮಂಗಮ್ಮ ಎಂಬ ಹೆಸರಿನಿಂದ ಬೆಳಗಿ ಕೊಂಡಿರುವಳು. ಲಕ್ಷ್ಮಿ ತಪಸ್ಸು ಮಾಡಿದ ಸ್ಥಳ ದಲ್ಲಿ ಕೋಲಾಪುರ ಮಹಾ ಲಕ್ಷ್ಮಿಯಾಗಿ ನೆಲೆಸಿರುವು ದರಿಂದ ಅದು ಲಕ್ಷ್ಮೀ ನಿಲಯವಾಯಿತು.

ನಂಬಿದವರನ್ನು ಆಪದಗಳಿಂದ ಸಂರಕ್ಷಿಸುತ್ತ, ಕರೆದರೆ ಓಗೊಡುವ ದೇವನೆಂದು ಪ್ರಸಿದ್ಧನಾಗಿ, ಕಲಿಯುಗದ ದೇವನೆಂದು ಸಪ್ತಗಿರಿಯಲ್ಲಿ ಮಹಾ ವಿಷ್ಣು ಬೆಳಗುತ್ತಿದ್ದಾನೆ. ಈ ಬಗೆಯ ವಿಷ್ಣುಲೀಲೆ ಯನ್ನು ಕೇಳಿದ ಶೌನಕಾದಿ ಮುನಿಗಳಿಗೆ ಬಹಳ ಸಂತೋಷವಾಯಿತು.








ಮಹಾ ಪೌರಾಣಿಕನಾದ ಸೂತನು ಶೌನಕಾದಿ ಮುನಿಗಳಿಗೆ ದಶಾವತಾರಗಳಲ್ಲಿ ಒಂಬತ್ತನೆಯದಾದ ಬುದ್ಧಾವತಾರದ ಕಥಾನಕವನ್ನು ವಿವರಿಸಿ ಹೇಳಲು ಉಪಕ್ರಮಿಸಿದನು.

ಕಲಿಯುಗವು ಪ್ರವೇಶಿಸಿ ದಿನಗಳು ಸಾಗುತ್ತಾ ಇದ್ದುವು. ಸೃಷ್ಟಿಯಲ್ಲಿ ಮಾನವತೆಯ ಗುಣಮಟ್ಟ ಗಳು ಕೆಳಗಿಳಿಯುತ್ತ, ಕ್ರೂರಮೃಗತ್ವವನ್ನು ಅವ ಲಂಬಿಸತೊಡಗಿತು. ಮಾನವರಿಗೆ ಬುದ್ಧಿಶಕ್ತಿ ಕಲ್ಪನಾ ಶಕ್ತಿಗಳಿರುವುದರಿಂದ ಮೃಗಜಾತಿಗಳಿಗಿಂತಲೂ ಕ್ರೂರರಾಗುತ್ತಿದ್ದರು.

ಮಾನವನು ಬುದ್ಧಿಯನ್ನು ತೂಕ ತಪ್ಪದಂತೆ ಕ್ರಮದಲ್ಲಿರಿಸಿಕೊಂಡು, ತನ್ನನ್ನು ತಾನೇ ಉದ್ಧರಿಸಿ ಕೊಳ್ಳಬೇಕಾದ ಕಾಲವು ಬಂದುಬಿಟ್ಟಿತು.

ಅದಕ್ಕೆ ಮೊದಲಿನ ಯುಗಗಳಲ್ಲಿ ಯಾವನೋ ದುಷ್ಟ ದಾನವನನ್ನು ಸಂಹಾರ ಮಾಡಲಿಕ್ಕಾಗಿ ವಿಷ್ಣು ಅವತಾರವೆತ್ತಿ, ಆ ಕೆಲಸ ಮುಗಿಸುವಂತಹ ಕಾಲವು ದಾಟಿಹೋಯಿತು.

ಕಲಿಯುಗದಲ್ಲಿ ಅಂತಹ ಅಸಲು ದಾನವರಾರೂ ಇರಲಿಲ್ಲ. ಮಾನವರೆಲ್ಲರೂ ರಾಕ್ಷಸರಾಗಿಬಿಟ್ಟರು. ಒಬ್ಬರನ್ನೊಬ್ಬರು ದೋಚಿಕೊಳ್ಳುತ್ತಿದ್ದರು ; ಹಿಂಸಿಸು ತ್ತಿದ್ದರು. ಯಜ್ಞಯಾಗಗಳೆಂಬ ಹೆಸರುಗಳನ್ನು ಹೇಳಿ ಕೊಂಡು, ದಯೆಗೆ ಸ್ಥಾನವೀಯದೆ, ಜೀವಹಿಂಸೆ ಯನ್ನೇ ಪರಮಾವಧಿಯಾಗಿರಿಸಿ, .ಮದ್ಯಮಾಂಸ ಗಳನ್ನು ಸೇವಿಸುತ್ತ, ಭೋಗಪಾರಾಯಣರಾದರು. ಮಾನವನು ಬುದ್ಧಿಜೀವಿ ಎಂಬ ಸತ್ಯವನ್ನು ತಿಳಿದು ಕೊಳ್ಳಲಾಗದಂತಹ ಪಾಮರತೆ ಎಲ್ಲಾ ಕಡೆಯೂ ವ್ಯಾಪಿಸಿಕೊಂಡಿತು. ಅದರ ಫಲಿತವಾಗಿ ಮಾನವ ರಿಗೇ ಬಾಧೆಗಳೂ, ಯಾತನೆಗಳೂ, ದೀನತನಗಳೂ ಮೇಲಿಂದ ಮೇಲೆ ಹೆಚ್ಚಾಗುತ್ತಿದ್ದುವು.

ಮನುಷ್ಯನಾಗಿ ಹುಟ್ಟಿ, ಪರಿಪೂರ್ಣ ಮಾನವ ನಾಗಿ, ಯಾವ ದೈವಿಕ ಸ್ಪರ್ಶವೂ ಇಲ್ಲದ ಬುದ್ಧ ಮೂರ್ತಿಯಾಗಿ ಸಹ ಮಾನವ ಕೋಟಿಯನ್ನು ಉದ್ಧರಿಸಬಲ್ಲ, ಕಾಲಾನುಗುಣವಾದ ಧರ್ಮವನ್ನು ಸಂಸ್ಥಾಪಿಸಬೇಕಾದ ಆಗತ್ಯವು ವಿಷ್ಣುವಿಗೆ ಬಂದಿತು.



ನೇಪಾಳ ದೇಶದೊಳಗಿನ ಕಪಿಲವಸ್ತು ನಗರವನ್ನು, ಶಾಕ್ಯವಂಶಕ್ಕೆ ಸೇರಿದ ಶುದ್ಧೋದನ ಮಹಾರಾಜನು ಪಾಲಿಸಿಕೊಂಡಿದ್ದನು. ಅವನ ರಾಣಿಯಾದ ಮಾಯಾ ದೇವಿ, ಪೂರ್ಣಿಮೆಯ ಚಂದ್ರಬಿಂಬದಂತಹ ಪ್ರಕಾಶ ಮಾನವಾದ ಬೆಳ್ಳಗಿನ ಆನೆಯೊಂದು ಆಕಾಶದಿಂದಿಳಿ ಯುವುದನ್ನು ಕನಸಿನಲ್ಲಿ ನೋಡಿದಳು. ಅದು ತನ್ನ ಶರೀರದೊಳಗೆ ಪ್ರವೇಶಿಸಿದಂತೆ ಅವಳಿಗೆ ತೋರಿತು. ಅಂದಿನಿಂದ ಅವಳು ಗರ್ಭಿಣಿಯಾದ ಲಕ್ಷಣ ಪ್ರಾರಂಭ ವಾಯಿತು.

ಒಬ್ಬ ಮಹಾ ಪುರುಷನು ಮಹಾರಾಣಿಯಿಂದ ಉದಯವಾಗಲಿರುವನೆಂದು ಜ್ಯೋತಿಷ ಪಂಡಿತರು, ಆ ಕನಸಿನ ಫಲಿತವನ್ನು ಪರೀಕ್ಷಿಸಿ ಮಹಾರಾಜ ನೊಂದಿಗೆ ಹೇಳಿದರು.

ತಿಂಗಳು ತುಂಬುತ್ತಿರಲು ಮಾಯಾದೇವಿ ಪಲ್ಲಕ್ಕಿ ಯಲ್ಲಿ ಕುಳಿತು ತೌರುಮನೆಗೆ ಹೊರಟಳು. ದಾರಿ ಯಲ್ಲಿ ಹತ್ತಿರದ ಒಂದು ವನದಲ್ಲಿ ಅವಳು ಒಂದು ಗಂಡು ಮಗುವನ್ನು ಪ್ರಸವಿಸಿದಳು. ಅದು ವೈಶಾಖ ಮಾಸದ ಪ್ರಕಾಶಮಾನವಾದ ಪೂರ್ಣಿಮೆಯ ದಿನ. ಆದರೆ ಕುಮಾರನನ್ನು ನೋಡುವ ಆನಂದವು ಮಹಾ ರಾಣಿಗೆ ಬಹಳ ಕಾಲ ಉಳಿಯಲಿಲ್ಲ. ಬಾಣಂತಿ ಯಾಗಿರುವಾಗಲೇ ಮಾಯಾದೇವಿ, ಶುದ್ಧೋದನ ನನ್ನು ದುಃಖಸಾಗರದಲ್ಲಿ ತೇಲಬಿಟ್ಟು ತೀರಿ ಹೋದಳು.

ಮಾತೃವಿಹೀನನಾದ ಕುಮಾರನನ್ನು ಮಹಾ ರಾಜನು ಕಣ್ಣಿನ ರೆಪ್ಪೆಯ ಹಾಗೆ ಕಾಪಾಡುತ್ತ, ನಾಮಕರಣ ಮಹೋತ್ಸವವನ್ನು ಜರುಗಿಸಿದನು. ಗೌತಮ ಸಿದ್ಧಾರ್ಥನೆಂದು ಮಗನಿಗೆ ನಾಮಕರಣ ವಾಯಿತು. ಸಿದ್ಧಾರ್ಥನು ಶುದ್ಧೋದನನ ಕಣ್ಮಣಿ ಯಾಗಿ, ಶುಕ್ಲಪಕ್ಷದ ಚಂದ್ರನಂತೆ ಬೆಳೆಯುತ್ತಾ ಬಂದನು.

ತರುವಾಯ ಜ್ಯೋತಿಷಿಗಳು ಸಿದ್ಧಾರ್ಥ ರಾಜ ಕುಮಾರನ ಜಾತಕವನ್ನು ಪರಿಶೀಲನೆ ಮಾಡಿದರು. ಕಡೆಗೆ ಅವರು ಮಹಾರಾಜನನ್ನು ನೋಡಿ, "ಈ ಕುಮಾರನು ಚಕ್ರವರ್ತಿಯಾಗುತ್ತಾನೆ. ಈ ವಿಶಾಲ ಪ್ರಪಂಚದೊಳಗಿನ ರಾಜಾಧಿರಾಜರೂ, ಪ್ರಜೆಗಳೂ ಇವನಿಗೆ ತಲೆಬಾಗಿ ಅಂಜಲೀಬದ್ಧರಾಗಿರುತ್ತಾರೆ..." ಎಂದು ಹೇಳುತ್ತಾ ಹೋದರು. ತಲೆದೂಗುತ್ತಾ ಕೇಳುತ್ತಿರುವ ಶುದ್ಧೋದನನ ಆನಂದಕ್ಕೆ ಮೇರೆ ಯಿಲ್ಲದೆ ಹೋಗುತ್ತಿತ್ತು.

"...ಆದರೆ...ಮಹಾರಾಜಾ ! ರಾಜಕುಮಾರನಿಗೆ ಸನ್ಯಾಸ ಯೋಗವಿದೆ" ಎಂದರು ಜ್ಯೋತಿಷ ಪಂಡಿತರು.

ಈ ಮಾತು ಶುದ್ಧೋದನನ ಎದೆಯೊಳಗೆ ಕಲ್ಲು ಬಿದ್ದ ಹಾಗಾಯಿತು, ಏನೂ ಅರ್ಥವಾಗದೆ ಮಿಕಿ ಮಿಕಿ ನೋಡಿದನು. "ಚಕ್ರವರ್ತಿಯಾಗುತ್ತಾನೆಂದು ಹೇಳುತ್ತ, ಸನ್ಯಾಸ ಯೋಗವಿದೆಯೆಂತಲೂ ಹೇಳುವಿರೇನಿದು ? ಒಂದಕ್ಕೊಂದು ಹೊಂದುವು




ಮಹಾ ಪೌರಾಣಿಕನಾದ ಸೂತನು ಶೌನಕಾದಿ ಮುನಿಗಳಿಗೆ ದಶಾವತಾರಗಳಲ್ಲಿ ಒಂಬತ್ತನೆಯದಾದ ಬುದ್ಧಾವತಾರದ ಕಥಾನಕವನ್ನು ವಿವರಿಸಿ ಹೇಳಲು ಉಪಕ್ರಮಿಸಿದನು.

ಕಲಿಯುಗವು ಪ್ರವೇಶಿಸಿ ದಿನಗಳು ಸಾಗುತ್ತಾ ಇದ್ದುವು. ಸೃಷ್ಟಿಯಲ್ಲಿ ಮಾನವತೆಯ ಗುಣಮಟ್ಟ ಗಳು ಕೆಳಗಿಳಿಯುತ್ತ, ಕ್ರೂರಮೃಗತ್ವವನ್ನು ಅವ ಲಂಬಿಸತೊಡಗಿತು. ಮಾನವರಿಗೆ ಬುದ್ಧಿಶಕ್ತಿ ಕಲ್ಪನಾ ಶಕ್ತಿಗಳಿರುವುದರಿಂದ ಮೃಗಜಾತಿಗಳಿಗಿಂತಲೂ ಕ್ರೂರರಾಗುತ್ತಿದ್ದರು.

ಮಾನವನು ಬುದ್ಧಿಯನ್ನು ತೂಕ ತಪ್ಪದಂತೆ ಕ್ರಮದಲ್ಲಿರಿಸಿಕೊಂಡು, ತನ್ನನ್ನು ತಾನೇ ಉದ್ಧರಿಸಿ ಕೊಳ್ಳಬೇಕಾದ ಕಾಲವು ಬಂದುಬಿಟ್ಟಿತು.

ಅದಕ್ಕೆ ಮೊದಲಿನ ಯುಗಗಳಲ್ಲಿ ಯಾವನೋ ದುಷ್ಟ ದಾನವನನ್ನು ಸಂಹಾರ ಮಾಡಲಿಕ್ಕಾಗಿ ವಿಷ್ಣು ಅವತಾರವೆತ್ತಿ, ಆ ಕೆಲಸ ಮುಗಿಸುವಂತಹ ಕಾಲವು ದಾಟಿಹೋಯಿತು.

ಕಲಿಯುಗದಲ್ಲಿ ಅಂತಹ ಅಸಲು ದಾನವರಾರೂ ಇರಲಿಲ್ಲ. ಮಾನವರೆಲ್ಲರೂ ರಾಕ್ಷಸರಾಗಿಬಿಟ್ಟರು. ಒಬ್ಬರನ್ನೊಬ್ಬರು ದೋಚಿಕೊಳ್ಳುತ್ತಿದ್ದರು ; ಹಿಂಸಿಸು ತ್ತಿದ್ದರು. ಯಜ್ಞಯಾಗಗಳೆಂಬ ಹೆಸರುಗಳನ್ನು ಹೇಳಿ ಕೊಂಡು, ದಯೆಗೆ ಸ್ಥಾನವೀಯದೆ, ಜೀವಹಿಂಸೆ ಯನ್ನೇ ಪರಮಾವಧಿಯಾಗಿರಿಸಿ, ಮದ್ಯಮಾಂಸ ಗಳನ್ನು ಸೇವಿಸುತ್ತ, ಭೋಗಪಾರಾಯಣರಾದರು. ಮಾನವನು ಬುದ್ಧಿಜೀವಿ ಎಂಬ ಸತ್ಯವನ್ನು ತಿಳಿದು ಕೊಳ್ಳಲಾಗದಂತಹ ಪಾಮರತೆ ಎಲ್ಲಾ ಕಡೆಯೂ ವ್ಯಾಪಿಸಿಕೊಂಡಿತು. ಅದರ ಫಲಿತವಾಗಿ ಮಾನವ ರಿಗೇ ಬಾಧೆಗಳೂ, ಯಾತನೆಗಳೂ, ದೀನತನಗಳೂ ಮೇಲಿಂದ ಮೇಲೆ ಹೆಚ್ಚಾಗುತ್ತಿದ್ದುವು.

ಮನುಷ್ಯನಾಗಿ ಹುಟ್ಟಿ, ಪರಿಪೂರ್ಣ ಮಾನವ ನಾಗಿ, ಯಾವ ದೈವಿಕ ಸ್ಪರ್ಶವೂ ಇಲ್ಲದ ಬುದ್ಧ ಮೂರ್ತಿಯಾಗಿ ಸಹ ಮಾನವ ಕೋಟಿಯನ್ನು ಉದ್ಧರಿಸಬಲ್ಲ, ಕಾಲಾನುಗುಣವಾದ ಧರ್ಮವನ್ನು ಸಂಸ್ಥಾಪಿಸಬೇಕಾದ ಆಗತ್ಯವು ವಿಷ್ಣುವಿಗೆ ಬಂದಿತು.



ನೇಪಾಳ ದೇಶದೊಳಗಿನ ಕಪಿಲವಸ್ತು ನಗರವನ್ನು, ಶಾಕ್ಯವಂಶಕ್ಕೆ ಸೇರಿದ ಶುದ್ಧೋದನ ಮಹಾರಾಜನು ಪಾಲಿಸಿಕೊಂಡಿದ್ದನು. ಅವನ ರಾಣಿಯಾದ ಮಾಯಾ ದೇವಿ, ಪೂರ್ಣಿಮೆಯ ಚಂದ್ರಬಿಂಬದಂತಹ ಪ್ರಕಾಶ ಮಾನವಾದ ಬೆಳ್ಳಗಿನ ಆನೆಯೊಂದು ಆಕಾಶದಿಂದಿಳಿ ಯುವುದನ್ನು ಕನಸಿನಲ್ಲಿ ನೋಡಿದಳು. ಅದು ತನ್ನ ಶರೀರದೊಳಗೆ ಪ್ರವೇಶಿಸಿದಂತೆ ಅವಳಿಗೆ ತೋರಿತು. ಅಂದಿನಿಂದ ಅವಳು ಗರ್ಭಿಣಿಯಾದ ಲಕ್ಷಣ ಪ್ರಾರಂಭ ವಾಯಿತು.

ಒಬ್ಬ ಮಹಾ ಪುರುಷನು ಮಹಾರಾಣಿಯಿಂದ ಉದಯವಾಗಲಿರುವನೆಂದು ಜ್ಯೋತಿಷ ಪಂಡಿತರು, ಆ ಕನಸಿನ ಫಲಿತವನ್ನು ಪರೀಕ್ಷಿಸಿ ಮಹಾರಾಜ ನೊಂದಿಗೆ ಹೇಳಿದರು.

ತಿಂಗಳು ತುಂಬುತ್ತಿರಲು ಮಾಯಾದೇವಿ ಪಲ್ಲಕ್ಕಿ ಯಲ್ಲಿ ಕುಳಿತು ತೌರುಮನೆಗೆ ಹೊರಟಳು. ದಾರಿ ಯಲ್ಲಿ ಹತ್ತಿರದ ಒಂದು ವನದಲ್ಲಿ ಅವಳು ಒಂದು ಗಂಡು ಮಗುವನ್ನು ಪ್ರಸವಿಸಿದಳು. ಅದು ವೈಶಾಖ ಮಾಸದ ಪ್ರಕಾಶಮಾನವಾದ ಪೂರ್ಣಿಮೆಯ ದಿನ. ಆದರೆ ಕುಮಾರನನ್ನು ನೋಡುವ ಆನಂದವು ಮಹಾ ರಾಣಿಗೆ ಬಹಳ ಕಾಲ ಉಳಿಯಲಿಲ್ಲ. ಬಾಣಂತಿ ಯಾಗಿರುವಾಗಲೇ ಮಾಯಾದೇವಿ, ಶುದ್ಧೋದನ ನನ್ನು ದುಃಖಸಾಗರದಲ್ಲಿ ತೇಲಬಿಟ್ಟು ತೀರಿ ಹೋದಳು.

ಮಾತೃವಿಹೀನನಾದ ಕುಮಾರನನ್ನು ಮಹಾ ರಾಜನು ಕಣ್ಣಿನ ರೆಪ್ಪೆಯ ಹಾಗೆ ಕಾಪಾಡುತ್ತ, ನಾಮಕರಣ ಮಹೋತ್ಸವವನ್ನು ಜರುಗಿಸಿದನು. ಗೌತಮ ಸಿದ್ಧಾರ್ಥನೆಂದು ಮಗನಿಗೆ ನಾಮಕರಣ ವಾಯಿತು. ಸಿದ್ಧಾರ್ಥನು ಶುದ್ಧೋದನನ ಕಣ್ಮಣಿ ಯಾಗಿ, ಶುಕ್ಲಪಕ್ಷದ ಚಂದ್ರನಂತೆ ಬೆಳೆಯುತ್ತಾ ಬಂದನು.

ತರುವಾಯ ಜ್ಯೋತಿಷಿಗಳು ಸಿದ್ಧಾರ್ಥ ರಾಜ ಕುಮಾರನ ಜಾತಕವನ್ನು ಪರಿಶೀಲನೆ ಮಾಡಿದರು. ಕಡೆಗೆ ಅವರು ಮಹಾರಾಜನನ್ನು ನೋಡಿ, "ಈ ಕುಮಾರನು ಚಕ್ರವರ್ತಿಯಾಗುತ್ತಾನೆ. ಈ ವಿಶಾಲ ಪ್ರಪಂಚದೊಳಗಿನ ರಾಜಾಧಿರಾಜರೂ, ಪ್ರಜೆಗಳೂ ಇವನಿಗೆ ತಲೆಬಾಗಿ ಅಂಜಲೀಬದ್ಧರಾಗಿರುತ್ತಾರೆ..." ಎಂದು ಹೇಳುತ್ತಾ ಹೋದರು. ತಲೆದೂಗುತ್ತಾ ಕೇಳುತ್ತಿರುವ ಶುದ್ಧೋದನನ ಆನಂದಕ್ಕೆ ಮೇರೆ ಯಿಲ್ಲದೆ ಹೋಗುತ್ತಿತ್ತು.

"...ಆದರೆ...ಮಹಾರಾಜಾ ! ರಾಜಕುಮಾರನಿಗೆ ಸನ್ಯಾಸ ಯೋಗವಿದೆ" ಎಂದರು ಜ್ಯೋತಿಷ ಪಂಡಿತರು.

ಈ ಮಾತು ಶುದ್ಧೋದನನ ಎದೆಯೊಳಗೆ ಕಲ್ಲು ಬಿದ್ದ ಹಾಗಾಯಿತು, ಏನೂ ಅರ್ಥವಾಗದೆ ಮಿಕಿ ಮಿಕಿ ನೋಡಿದನು. "ಚಕ್ರವರ್ತಿಯಾಗುತ್ತಾನೆಂದು ಹೇಳುತ್ತ, ಸನ್ಯಾಸ ಯೋಗವಿದೆಯೆಂತಲೂ ಹೇಳುವಿರೇನಿದು ? ಒಂದಕ್ಕೊಂದು ಹೊಂದುವು

ದಿಲ್ಲವಲ್ಲಾ ಸ್ವಾಮಿ! ದಯವಿಟ್ಟು ವಿವರಿಸಿ ಹೇಳಿರಿ" ಎಂದನು ಶುದ್ಧೋದನ ಮಹಾರಾಜ.

ಪಂಡಿತರು ರಾಜಕುಮಾರನ ಜಾತಕ ಚಕ್ರದೊಳಗಿನ ಗ್ರಹಗತಿಗಳನ್ನೆಲ್ಲ ಸೂಕ್ಷ್ಮವಾಗಿ ಪರಿಶೀಲನೆ ಮಾಡಿ, "ಮಹಾರಾಜಾ, ನಿಮ್ಮ ಈ ಕುಮಾರನದು ಅತಿ ಸುಕುಮಾರವಾದ ಮನಸ್ಸು. ಇವನು ನಾಲ್ಕು ದೃಶ್ಯಗಳನ್ನು ನೋಡಲೇ ಕೂಡದು. ಒಂದು ರೋಗ, ಎರಡನೆಯದು ವೃದ್ಧಾಪ್ಯ, ಮೂರನೆಯದು ಮೃತ್ಯು, ನಾಲ್ಕನೆಯದು ಸನ್ಯಾಸ. ಈ ನಾಲ್ಕು ದೃಶ್ಯಗಳನ್ನು ನೋಡಿದ ಮರುಕ್ಷಣದಲ್ಲಿ ಸಿದ್ಧಾರ್ಥ ಕುಮಾರನ ಮನಸ್ಸು ಒಡೆದುಹೋಗುತ್ತದೆ. ಆದುದರಿಂದ ತಕ್ಕ ಜಾಗರೂಕತೆಯಿಂದ ಇವನನ್ನು ಬೆಳೆಸಬೇಕು" ಎಂದು ಹೇಳಿದರು.

ಸಿದ್ಧಾರ್ಥನಿಗೆ ಚಿಕ್ಕತನದಿಂದಲೂ ಯಾವ ಬಗೆಯ ಚಿಂತೆಯೂ ಉಂಟಾಗದಂತೆ, ಯಾವಾಗಲೂ ಆಹ್ಲಾದಕರವಾಗಿಯೇ ಇರುವಂತೆ ಒಂದಲ್ಲೊಂದು ಆಟ ಪಾಟ ವಿನೋದ ವೈಭವಗಳೇ ನಡೆಯುವಂತೆ ಏರ್ಪಾಡಿಸಲಾಯಿತು. ತೆಗೆದುಕೊಳ್ಳಬೇಕಾದ ಎಲ್ಲಾ ಬಗೆಯ ಎಚ್ಚರಿಕೆಗಳನ್ನೂ ತೆಗೆದುಕೊಂಡನು ಶುದ್ಧೋದನ ರಾಜ.

ಒಂದು ದಿನ ಸಿದ್ಧಾರ್ಥನು ಉದ್ಯಾನವನದ ವೇದಿಕೆಯ ಮೇಲೆ ಸುಖಾಸೀನನಾಗಿದ್ದಾಗ, ಒಂದು ಹಂಸವು ಚಟಪಟನೆ ಒದರಾಡಿಕೊಳ್ಳುತ್ತಾ ಅವನ ಮಡಿಲ ಮೇಲೆ ಬಿತ್ತು. ರಾಜಕುಮಾರನು ಅದಕ್ಕೆ ಚುಚ್ಚಿಕೊಂಡಿದ್ದ ಬಾಣವನ್ನು ಜಾಗರೂಕತೆಯಿಂದ ಕಿತ್ತು, ಗಾಯಕ್ಕೆ ಮೂಲಿಕೆಯ ರಸಹಚ್ಚಿ ಅದರ ಪ್ರಾಣವನ್ನು ಕಾಪಾಡಿದನು.

"ಆ ಹಂಸ ನನ್ನದು. ಅದನ್ನು ಹೊಡೆದವನು ನಾನು" ಎಂದು ಗಟ್ಟಿಯಾಗಿ ಹೇಳುತ್ತ ದೇವದತ್ತನು ಅಲ್ಲಿಗೆ ಬಂದನು. ದೇವದತ್ತನು ಸಿದ್ಧಾರ್ಥನಿಗೆ ಜ್ಞಾತಿ ಸಹೋದರನಾಗಬೇಕು.



"ಈ ಹಂಸದ ಪ್ರಾಣವನ್ನು ನಾನು ಕಾಪಾಡಿದ್ದೇನೆ. ಆದುದರಿಂದ ಇದೀಗ ನನ್ನದೇ!" ಎಂದನು ಸಿದ್ಧಾರ್ಥ.

ದೇವದತ್ತನು ಬಿಡದೆ ತಗಾದೆ ಮಾಡಿದನು. ಇಬ್ಬರೂ ರಾಜಸಭೆಗೆ ಹೋಗಿ ತಮ್ಮ ವಿವಾದವನ್ನು ಮಂಡಿಸಿದರು. ಅಲ್ಲಿದ್ದ ಶಾಸ್ತ್ರವೇತ್ತರು, "ಪ್ರಾಣರಕ್ಷಕನಾದ ರಾಜಕುಮಾರನದೇ ಹಂಸ" ಎಂದು ಏಕಗ್ರೀವರಾಗಿ ತೀರ್ಪು ಹೇಳಿದರು.

ಈ ಕಾರಣದಿಂದಾಗಿ ಬಾಲ್ಯದಿಂದಲೇ ದೇವದತ್ತನಿಗೆ ರಾಜಕುಮಾರ ಸಿದ್ಧಾರ್ಥನ ಮೇಲೆ ಅಸೂಯೆಯೂ, ಸ್ಪರ್ಧೆಯೂ ಉಂಟಾಯಿತು.

ಸಾಧಾರಣವಾಗಿ ಶಾಕ್ಯರು ಸುಕ್ಷತ್ರಿಯರ ಹಾಗೆಯೇ ಆಯುಧೋಪಜೀವಿಗಳೇ, ಅವರಿಗೆ ಬೇಟೆಯ ಮೇಲೆ ಅತ್ಯಂತ ಪ್ರೀತಿ. ಬೇಟೆಯಾಟದಲ್ಲಿ ಬಹಳ ಪ್ರಸಿದ್ಧರೂ ಆಗುತ್ತಾರೆ. ಆದರೆ ರಾಜಕುಮಾರನಿಗೆ ಬೇಟೆಯ ಮೇಲೆ ಸ್ವಲ್ಪವೂ



ಇಷ್ಟವಿರಲಿಲ್ಲ. ಬಿಲ್ಲು ವಿದ್ಯೆಯನ್ನು, ಅದರಲ್ಲಿಯ ಲಕ್ಷ್ಯಸಿದ್ಧಿಯನ್ನು ಕಲಿತು ಚೆನ್ನಾಗಿ ಸಾಧಿಸಿದ್ದರೂ ಕೂಡ, ಸಹ ವಿದ್ಯಾರ್ಥಿಗಳಿಗಿಂತ ಹೆಚ್ಚಿನವನೆನಿಸಿದ್ದರೂ ಸಹ ಪ್ರಾಣಿಗಳನ್ನು ಕೊಲ್ಲುವುದೆಂದರೆ ರಾಜಕುಮಾರನಿಗಾಗದು. ಅದು ಒಳ್ಳೆಯ ಕೆಲಸವಲ್ಲವೆಂಬುದೇ ಅವನ ನಿರ್ಧಾರ.

ಸಿದ್ಧಾರ್ಥನು ಬೇಟೆಗೆ ಹೋಗಲಾರನು. ವಿನೋದಗಳ ಮೇಲೆ ಆಸಕ್ತಿ ತೋರಿಸುವುದಿಲ್ಲ, ಹಿಂಸೆಯನ್ನು ನೋಡಿ ತಳಮಳಿಸುತ್ತಾನೆ. ಕುಮಾರನ ಶರೀರದಲ್ಲಿ ರಕ್ತಕ್ಕೆ ಬದಲು ಕರುಣಾರಸವೇ ಪ್ರವಹಿಸುವುದೇನೋ ಎಂದು ಶುದ್ಧೋದನನು ಅಂದುಕೊಳ್ಳುತ್ತ, ರಾಜಕುಮಾರನ ಹಾಗೆ, ಯುವರಾಜನ ಹಾಗೆ ಸಿದ್ಧಾರ್ಥನು ತಯಾರಾಗಲು, ಎಷ್ಟು ಪ್ರಯತ್ನ ಮಾಡಬೇಕೋ ಅಷ್ಟೂ ಮಾಡಿಕೊಂಡೇ ಇದ್ದನು.

ರಾಜಕುಮಾರನು ನಗರದೊಳಗೆ ಹೊರಡುವನೆಂದಾದರೆ ಅವನು ಹೋಗುವ ದಾರಿಯಲ್ಲೆಲ್ಲಿಯೂ, ರೋಗಪೀಡಿತರು, ಮುದಿಗೊಡ್ಡುಗಳು, ಮೃತರಾದವರು, ಪರಿವ್ರಾಜಕರು, ಸನ್ಯಾಸಿಗಳು ಭಿಕ್ಷುಕರು ಕಣ್ಣಿಗೆ ಬೀಳದಂತೆ ಮುಂಜಾಗ್ರತೆ ತೆಗೆದುಕೊಂಡ ನಂತರವೇ ರಥದ ಸಾರಥಿಯಾದ ಚೆನ್ನನು ರಾಜಕುಮಾರನನ್ನು ರಥದ ಮೇಲೆ ಕೂರಿಸಿಕೊಂಡು ನಗರದೊಳಗೆ ಒಯ್ಯುತ್ತಿದ್ದನು.

ಹೀಗಿರಲು ಸಿದ್ಧಾರ್ಥನಿಗೆ ತಾರುಣ್ಯವು ಬಂದಿತು. ಅವನಲ್ಲಿ ಸತ್ಯಪ್ರಿಯತೆಯೂ, ತಾರ್ಕಿಕ ಬುದ್ಧಿಯೂ, ಹೇತುಬದ್ಧವಾದ ಜ್ಞಾನವೂ ತುಂಬಿದುವು. ಆಗಲೇ ಭೂಮಿಗೆ ಇಳಿದು ಬಂದ ಯಾವ ದೇವಸುಂದರನೋ ಎಂಬ ಹಾಗೆ ಕಾಣಿಸತೊಡಗಿದನು. ಆದರೆ ವಿನೋದ, ವಿಲಾಸಗಳಂತಹ ರಾಜಭೋಗಗಳ ಮೇಲೆ ಅವನ ಮನಸ್ಸು ಹೋಗುತ್ತಿರಲಿಲ್ಲ. ನಸುನಗುವಿನ ಗಂಭೀರ ಭಾವನೆಯಲ್ಲಿಯೇ ಇರುತ್ತಿದ್ದನು. ಯಾರ ಮೇಲೆಯೂ ಕೋಪತಾಪಗಳು ಅವನಿಗಿರಲಿಲ್ಲ.

ಈ ಬಗೆಯ ಕುಮಾರನ ಧೋರಣೆಯನ್ನು ನೋಡಿ ಶುದ್ಧೋದನ ರಾಜನು ವ್ಯಾಕುಲಪಡತೊಡಗಿದನು. ಕುಮಾರನಿಗೆ ಮದುವೆ ಮಾಡಬೇಕಾದ ತರುಣವು ಪ್ರಾಪ್ತವಾಗಿದೆ. ವಿವಾಹ ಮಾಡಿದರೆ ಅವನು ಬದಲಾವಣೆ ಹೊಂದುವನೆಂದುಕೊಂಡು, ಶುದ್ಧೋದನನು ರಾಜ್ಯದೊಳಗಿನ ಕ್ಷತ್ರಿಯ ವಂಶಕ್ಕೆ ಸೇರಿದ ಸುಂದರಿಯರಾದ ಕನ್ಯೆಯರೆಲ್ಲರನ್ನೂ ರಾಜಮಂದಿರಕ್ಕೆ ಆಹ್ವಾನಿಸಿ ಬರಮಾಡಿಸಿಕೊಂಡನು.

ರಾಜಕುಮಾರನ ದೃಷ್ಟಿ ಅವರ ಮೇಲೆ ಬೀಳುವಂತೆ ಏರ್ಪಡಿಸಿದಂತಹ ಅಂತಃಪುರ ಮಂದಿರದಲ್ಲಿ ಕೆಲವು ಕನ್ಯೆಯರು ತಮ್ಮ ನೃತ್ಯಗಾನಗಳನ್ನು ಪ್ರದರ್ಶನ ಮಾಡಿದರು. ಯುವರಾಜನ ಮನಸ್ಸನ್ನು ದೋಚಿಕೊಳ್ಳಲು ಒಬ್ಬರನ್ನು ಮೀರಿಸಿ ಒಬ್ಬರು ಒಯ್ಯಾರಗಳನ್ನು ತೋರಿಸುತ್ತ, ರಾಜಕುಮಾರನ ದೃಷ್ಟಿ ಯಾವಳ ಮೇಲೆ ನಿಲ್ಲುವುದೋ ಆ ಭಾಗ್ಯಕ್ಕೆ ಕನ್ಯಾಮಣಿಯರೆಲ್ಲ ತಹತಹಿಸಿಕೊಂಡಿದ್ದರು.



ಹೀಗೆ ಪ್ರದರ್ಶನವಿತ್ತ ಕನ್ಯೆಯರಿಗೆಲ್ಲ ಕಾಣಿಕೆಗಳನ್ನು ಕೊಟ್ಟು ಸತ್ಕರಿಸಲು, ಹರಿವಾಣಗಳ ತುಂಬಾ ಮಣಿಹಾರಗಳು, ಮುತ್ತಿನ ಗೊಂಚಲುಗಳು, ಸ್ವರ್ಣಭೂಷಣಗಳು ಸಾಲಾಗಿ ಇಡಲ್ಪಟ್ಟುವು. ಸುಂದರೀಮಣಿಯರು ಒಬ್ಬೊಬ್ಬರೇ ಓರೆನೋಟ ಬೀರುತ್ತ ಬಂದು, ಸಿದ್ಧಾರ್ಥನು ಎತ್ತಿಕೊಡುವ ಬಹುಮಾನಗಳನ್ನು ಪಡೆದುಕೊಂಡು ವಂದಿಸಿ ಹೋಗುತ್ತಿದ್ದರು.

ಬಂದವರೆಲ್ಲಾ ಕಾಣಿಕೆಗಳನ್ನು ತೆಗೆದುಕೊಂಡು ಹೋದ ಮೇಲೆ ಸಿದ್ಧಾರ್ಥನು ಆಸನದಿಂದ ಎದ್ದು ಅಲ್ಲಿಂದ ಹೋಗತೊಡಗಿದನು. ಆಗ ಜವ್ವನೆಯೊಬ್ಬಳು ಸ್ತಂಭದ ಮರೆಯಲ್ಲಿ ನಿಂತಿರುವುದನ್ನು ನೋಡಿದನು. ಸ್ತಂಭಕ್ಕೆ ಒರಗಿ ತಲೆ ತಗ್ಗಿಸಿಕೊಂಡು ನಿಂತಿದ್ದ ಅವಳಲ್ಲಿ ಸೌಂದರ್ಯಕ್ಕೆ ಮೀರಿದ ಯಾವುದೋ ಒಂದು ಸೌಂದರ್ಯವು ಸಿದ್ಧಾರ್ಥನಿಗೆ ತೋರಿತು. ಅವಳ ಪ್ರಶಾಂತ ವದನದಲ್ಲಿ ತುಂಬಿದ ಸೌಜನ್ಯವು ಹೊರಹೊಮ್ಮುತಿದ್ದಿತು. ಅವಳ ಹೆಸರು ಯಶೋಧರೆ. ಅವಳು ಸಾಮಂತನೊಬ್ಬನ ಕುಮಾರಿ.

ಅವಳಿಗೆ ಕೊಡಲು ಯಾವುದೊಂದು ಕಾಣಿಕೆಯೂ ಉಳಿದಿರಲಿಲ್ಲ. ಲಜ್ಜೆಯಿಂದಲೋ ದಾಕ್ಷಿಣ್ಯದಿಂದಲೋ ಅವಳು ಯಾವ ಶೃಂಗಾರ ಪ್ರದರ್ಶನವನ್ನೂ ತೋರಿಸಿರಲಿಲ್ಲ. ಬಹುಮಾನ ಪಡೆಯಲೂ ಬಂದಿಲ್ಲ. ಸಿದ್ಧಾರ್ಥನು ತನ್ನ ಕೊರಳಲ್ಲಿದ್ದ ಮರಕತ ಹಾರವನ್ನು ತೆಗೆದು ಅವಳ ಸೊಂಟದ ಸುತ್ತಲೂ ಸುತ್ತಿದನು. ಅವನ ಕೊರಳಿಗೆ ಸರಿಹೊಂದಿದ ಆ ಹಾರವು ಅವಳ ನಡುವಿಗೆ ಸಡಿಲಾಗಿ ಹೊಂದಿಕೊಂಡಿತು.

ಅದೇ ಕ್ಷಣದಲ್ಲಿ ಸಿದ್ಧಾರ್ಥನಿಗೆ ಯಶೋಧರೆಯ ಮೇಲೆ ಅನುರಾಗವು ಅಂಕುರಿಸಿತು. ಅವನ ಮನಸ್ಸು ಅವಳಲ್ಲಿ ಲಗ್ನವಾಗಿದೆ ಎಂದು ಮಹಾರಾಜನಿಗೆ ಗೊತ್ತಾಯಿತು.

ಸಿದ್ಧಾರ್ಥನ ರಾಗೋದಯವನ್ನು ನೋಡಿ ಶುದ್ಧೋದನ ಮಹಾರಾಜನಿಗೆ ಬಹಳ ಸಂತೋಷವಾಯಿತು. ಅವಳ ತಂದೆ ಸಾಮಂತನಿಗೆ ತಾನು ಬೀಗತನ ಹೊಂದುವ ಶುಭ ಸಮಾಚಾರವನ್ನು ಕೂಡಲೇ ಕಳುಹಿಸಿದನು.

ಈ ಸಮಯದಲ್ಲಿ ದೇವದತ್ತನು, ಈ ಮದುವೆ ಹೀಗೆ ನಡೆಯಬಾರದೆಂದೂ, ಸ್ವಯಂವರವನ್ನು ಪ್ರಕಟಿಸಿ, ಸ್ಪರ್ಧೆ ಪರೀಕ್ಷೆಗಳನ್ನು ಇಡಬೇಕೆಂದೂ ಹಟ ಹಿಡಿದನು. ಅದರಂತೆ ಯಶೋಧರೆಯ ತಂದೆ, ಸ್ವಯಂವರದ ಸ್ಪರ್ಧೆಗೆ ಬರುವಂತೆ ಎಲ್ಲರಿಗೂ ಆಹ್ವಾನಗಳನ್ನು ಕಳುಹಿಸಿದನು.

ಆದರೆ ಹಿಂಸೆಗೆ ತಾವಿಲ್ಲದಂತಹ ಅನೇಕ ವಿದ್ಯೆಗಳ ಮೇಲೆ ಸ್ಪರ್ಧೆಯ ಪ್ರದರ್ಶನಗಳು ಏರ್ಪಡಿಸಲ್ಪಟ್ಟುವು. ಅನೇಕ ಮಂದಿ ಯುವಕರು ಅದರಲ್ಲಿ ಭಾಗವಹಿಸಿದರು. ಆ ಎಲ್ಲಾ ಪರೀಕ್ಷೆಗಳಲ್ಲಿಯೂ ರಾಜಕುಮಾರ ಸಿದ್ಧಾರ್ಥನೇ ಗೆದ್ದು ಗೆದ್ದು ನಿಂತನು.



ಸಿದ್ಧಾರ್ಥನೊಂದಿಗೆ ಸರಿಸಮವಾಗಿ ಪ್ರತಿದ್ವಂದಿಯಾದವನು ದೇವದತ್ತನೇ. ಕಡೆಗೆ ದೇವದತ್ತನು ಕೂಡಾ ಸಿದ್ಧಾರ್ಥನ ದೇಹ ಶಕ್ತಿಯ ಮುಂದೆ ಸೋತುಹೋದನು. ಸಿದ್ಧಾರ್ಥನು ಬಿಲ್ಲು ವಿದ್ಯೆಯ ಗುರಿಯಲ್ಲಿ, ಅಶ್ವಾರೋಹಣದಲ್ಲಿ ಅಪೂರ್ವ ಸಾಮರ್ಥ್ಯವನ್ನು ತೋರಿಸಿ, ಯಶೋಧರೆಯ ಪಾಣಿ ಕಮಲವನ್ನು ಗೆದ್ದುಕೊಂಡನು.

ಸಿದ್ಧಾರ್ಥ ಯಶೋಧರೆಯರ ವಿವಾಹವು ಅತ್ಯಂತ ವೈಭವದಲ್ಲಿ ನೆರವೇರಿತು.

ಶುದ್ಧೋದನ ಮಹಾರಾಜನಿಗೆ ಈಗ ಸ್ವಲ್ಪ ಮನಃಶಾಂತಿ ಲಭಿಸಿತು. "ಕುಮಾರನು ಗೃಹಸ್ಥನಾದನು. ಇನ್ನು ಸಂಸಾರ ಚಕ್ರದಲ್ಲಿ ಸಿಕ್ಕಿ, ಸರಾಗವಾಗಿ ಪ್ರತಿಭೆಗಳನ್ನು ಹೊರಡಿಸಿ ಚಕ್ರವರ್ತಿಯಾಗಿಯೇ ಆಗುತ್ತಾನೆ" ಎಂದುಕೊಳ್ಳುತ್ತ ಸಂತೋಷಪಟ್ಟನು. ಅವನ ಸಂತೋಷವು ಹುಸಿ ಹೋಗಲಿಲ್ಲ. ನಿಜಕ್ಕೂ ಯಶೋಧರೆ ಸಿದ್ಧಾರ್ಥನಿಗೆ ಎಲ್ಲಾ ವಿಧದಲ್ಲಿಯೂ ತಕ್ಕ ಭಾಗ ಸ್ವಾಮಿನಿಯಾಗಿದ್ದಳು. ಅದರ ಮೇಲೆ ತನ್ನ ಗಂಡನಲ್ಲಿ ಅಸಾಧಾರಣವಾದ ಬೆಲೆಬಾಳುವ ಮಾನವತ್ವವಿದೆಯೆಂದೂ ಅವಳು ತಿಳಿದುಕೊಂಡಳು. ಅದಕ್ಕೆ ಅನುಕೂಲವಾಗಿ ಬಹಳ ಜಾಗರೂಕತೆಯಿಂದ ನಡೆದುಕೊಳ್ಳುತ್ತಿದ್ದಳು. ಅವರಿಬ್ಬರ ದಾಂಪತ್ಯವು ಆನಂದಪ್ರದವಾಗಿ ಸಾಗಿಕೊಂಡಿದ್ದಿತು.

ವಿವಾಹವಾದ ಮೇಲೆ ಸಿದ್ಧಾರ್ಥನು ಅಂತಃಪುರವನ್ನು ಬಿಟ್ಟು ಎಲ್ಲಿಗೂ ಹೋಗಲಿಲ್ಲ. ಹೋಗುವ ವಿಚಾರವನ್ನೇ ಬಿಟ್ಟುಬಿಟ್ಟನು.

ಕೆಲವು ದಿನಗಳ ಮೇಲೆ ಆ ದಂಪತಿಗಳಿಗೆ ಒಬ್ಬ ಮಗನು ಹುಟ್ಟಿದನು. ಆ ಮಗುವಿಗೆ ರಾಹುಲನೆಂದು ನಾಮಕರಣವೂ ಆಯಿತು. ತಂದೆತಾಯಿಯರಿಗೂ, ತಾತ ಶುದ್ಧೋದನ ಮಹಾರಾಜನಿಗೂ ಮುದ್ದಿನ ಮೂಟೆಯಾಗಿ ರಾಹುಲನಿದ್ದನು.

ಒಂದು ದಿನ ಸಿದ್ಧಾರ್ಥನು ರಥವನ್ನು ನೋಡಿ, ಅದರ ಮೇಲೆ ಏರಿ ಕುಳಿತು, ಚೆನ್ನನನ್ನು ಕರೆದು ರಥವನ್ನು ಸಾಗಿಸಲು ಹೇಳಿದನು. ಅಂದುಕೊಳ್ಳದ ಈ ಘಟನೆಯಿಂದ ಚೆನ್ನನು ಹಿಂದೆ ಮುಂದೆ ನೋಡಿದನು. ಆದರೆ ರಾಜಕುಮಾರನ ದೃಢ ಸಂಕಲ್ಪವನ್ನು ತಿಳಿದವನಾದುದರಿಂದ, ತನ್ನಿಂದಾಗದೆನ್ನದೆ, ರಥವನ್ನು ಸಾಗಿಸಿಕೊಂಡು ಹೋದನು.

ಆಗ ದಾರಿಯಲ್ಲಿ ಜರಾಭಾರದಿಂದ ಬೀಳುತ್ತ ಏಳುತ್ತ, ನಡುಗುತ್ತ ಮುದುಕನೊಬ್ಬನು ಇದಿರಾಗಿ ಬರುವುದನ್ನು ಸಿದ್ಧಾರ್ಥನು ನೋಡಿದನು. ಆ ವೃದ್ಧನ ಸ್ಥಿತಿ ತುಂಬಾ ದಯನೀಯವಾಗಿತ್ತು. ಯಾರೂ ಆ ವೃದ್ಧನನ್ನು ನೋಡುವುದೋ, ಕನಿಕರಿಸುವುದೋ, ಕೈಹಿಡಿದು ನಡೆಸುವುದೋ ಮಾಡದೆ ಅವರವರ ಪಾಡಿಗೆ ಅವರವರು ಹೋಗುತ್ತಿದ್ದನು.

ಸ್ವಲ್ಪ ದೂರ ಹೋದ ಮೇಲೆ ಒಬ್ಬ ರೋಗ ಪೀಡಿತನು ಇದಿರಾದನು. ಅವನು ದಟ್ಟದರಿದ್ರನೆಂದು ಎದ್ದು ಕಾಣುತ್ತಿತ್ತು. ಅದರ ಮೇಲೆ

ದುಷ್ಟಟದವನೆಂದು ಹೆಜ್ಜೆ ಹೆಜ್ಜೆಗೂ ಕುಡಿಕೆಯನ್ನೆತ್ತಿ ಕುಡಿಯುವ ಸುರಾಪಾನವು ಹೇಳುತ್ತಿದ್ದಿತು.

ಆದಾದ ಮೇಲೆ ಸ್ಮಶಾನಕ್ಕೆ ಶವವಾಹಕರಿಂದ ಸಾಗಿಸಲ್ಪಡುತ್ತಿದ್ದ ಒಂದು ಶವದ ದೃಶ್ಯ ಇದಿರಾಗಿ ಮುಂದೆ ಹೋಯಿತು.

ಕಡೆಗೆ ಸರ್ವಸಂಗ ಪರಿತ್ಯಾಗ ಮಾಡಿದ ಒಬ್ಬ ಸನ್ಯಾಸಿ ಇದಿರಾದನು.

ಆಗಲೇ ಗೌತಮ ಸಿದ್ಧಾರ್ಥನು ಬುದ್ಧನಾಗಲು ಅಂಕುರಾರ್ಪಣೆಯಾಯಿತು.

ರಾಜಕುಮಾರನು ತಾನು ನೋಡಿದ ಆ ದೃಶ್ಯಗಳನ್ನು ಕುರಿತು ಸಾರಥಿ ಚೆನ್ನನನ್ನು ಚುಚ್ಚಿ ಚುಚ್ಚಿ ಕೇಳಿದನು. ಸಂಧಿಗ್ಧದಲ್ಲಿ ಸಿಕ್ಕಿಬಿದ್ದ ಚೆನ್ನನಿಗೆ ನಿಜ ಹೇಳದೆ ಗತ್ಯಂತರವಿಲ್ಲದೆ ಹೋಯಿತು.

ಸಿದ್ಧಾರ್ಥನು ರಥವನ್ನು ಹಿಂದಕ್ಕೆ ಮರಳಿಸುವಂತೆ ಹೇಳಿದನು. ಚೆನ್ನನು ರಥವನ್ನು ರಾಜಮಂದಿರಕ್ಕೆ ಹಿಂದಿರುಗಿಸಿ ತಂದನು.

ಆ ರಾತ್ರಿ ಸಿದ್ಧಾರ್ಥನಿಗೆ ನಿದ್ದೆಯೇ ಬರಲಿಲ್ಲ. ಹೊರಗೆ ಮಂದವಾಗಿ ಬೆಳುದಿಂಗಳು ಪಸರಿಸಿಕೊಂಡಿತ್ತು.

ಯಶೋಧರೆ ನಿದ್ದೆಯಲ್ಲಿ ಮುಳುಗಿದ್ದಾಳೆ. ರಾಹುಲನು ತಾಯಿಯ ಎದೆಗೆ ಅಂಟಿಕೊಂಡು ನಿದ್ರಿಸುತ್ತಿದ್ದಾನೆ. ತಾಯಿ ಮಗಂದಿರ ಮುಖಗಳಲ್ಲಿ ಮುಗ್ಧಭಾವವು ತೇಲಿಕೊಂಡಿದೆ. ಆದನ್ನೆಲ್ಲವನ್ನು ನೋಡುತ್ತಾ ಇದ್ದ, ಸಿದ್ಧಾರ್ಥನು ಅವರನ್ನು ಬಿಟ್ಟು ಕೆಲವು ಅಡಿಗಳನ್ನು ನಡೆದು, ತಿರುಗಿ ಅವರ ಬಳಿಗೆ ಬಂದನು. ಹೀಗೆ ಎರಡು ಸಾರಿ ನಡೆಯಿತು.

ಮೂರನೇ ಸಾರಿ ಸಿದ್ಧಾರ್ಥನು ಮನಸ್ಸನ್ನು ದೃಢಪಡಿಸಿಕೊಂಡು, ಯಶೋಧರೆಯ ಪಾದಗಳ ಮೇಲೆ ಒಂದು ಕೋಳೆಯ ಹೂವನ್ನಿಟ್ಟು, ಪಾದಗಳನ್ನು ಮುಟ್ಟಿ ನಮಸ್ಕಾರ ಮಾಡಿ, ಅಲ್ಲಿಂದ ಹೊರಟುಬಿಟ್ಟನು.

ಅವನು ನೆಟ್ಟಗೆ ಅಂತಃಪುರದಿಂದ ಅಶ್ವಶಾಲೆಗೆ ಹೋದನು. ಚೆನ್ನನನ್ನು ಎಬ್ಬಿಸಿ ಕುದುರೆಯನ್ನು ಸಿದ್ಧಪಡಿಸಲು ಹೇಳಿದನು.

ರಾಜಕುಮಾರನಿಗೆ ಅರ್ಧರಾತ್ರಿಯ ಬೆಳುದಿಂಗಳಿನಲ್ಲಿ ಕುದುರೆಯ ಮೇಲೆ ವಿಹರಿಸಬೇಕೆಂದು ತೋರಿತೇನೋ ಎಂದುಕೊಂಡು ಕುದುರೆಯನ್ನು ಸಿದ್ಧಪಡಿಸಿದನು ಚೆನ್ನ. ಸ್ವಲ್ಪ ಮುಂಚೆ ಹನಿ ಹನಿ ಮಳೆ ಬಂದುದರಿಂದ ನೆಲವು ನೆನೆದು ಮೆತ್ತಗಿದ್ದಿತು.

ಸಿದ್ಧಾರ್ಥನು ಕುದುರೆಯ ಮೇಲೇರಿ ಕುಳಿತನು.

ಚೆನ್ನನು ಕಡಿವಾಣವನ್ನು ಹಿಡಿದುಕೊಂಡು ನಡೆಯತೊಡಗಿದನು. ಎಲ್ಲೆಲ್ಲಿಯೂ ನಿಃಶಬ್ದವಾಗಿದ್ದಿತು. ಕುದುರೆಯ ಗೊರಸಿನ ಶಬ್ದವು ಮೆತ್ತಗಿನ ನೆಲದಲ್ಲಿ ಯಾರಿಗೂ ಕೇಳಿಸಲಿಲ್ಲ.





ಅರಮನೆಯಿಂದ ಹೊರಟ ಸಿದ್ಧಾರ್ಥನು ಕಪಿಲವಸ್ತು ನಗರವನ್ನು ದಾಟಿ ಬಹಳ ದೂರ ಹೋದ ಮೇಲೆ ತನ್ನ ಕುದುರೆಯನ್ನು ನಿಲ್ಲಿಸಿ ಕೆಳಗಿಳಿದನು. ಆಮೇಲೆ ಕತ್ತಿಯನ್ನೂ, ಉತ್ತರೀಯವನ್ನೂ ಶರೀರದ ಮೇಲಿರುವ ಎಲ್ಲಾ ಆಭರಣಗಳನ್ನೂ ತೆಗೆದನು. ಆಶ್ಚರ್ಯದಿಂದ ನೋಡುತ್ತಿದ್ದ ಚೆನ್ನನ ಕೈಗೆ ಅವುಗಳನ್ನೆಲ್ಲಾ ಕೊಟ್ಟು, "ಚೆನ್ನಾ, ಇವುಗಳನ್ನೆಲ್ಲಾ ತೆಗೆದುಕೊಂಡು ಕುದುರೆಯೊಂದಿಗೆ ಹಿಂದಿರುಗಿ ಹೋಗು. ತಂದೆಯವರಿಗೆ ನನ್ನ ಪ್ರಣಾಮಗಳನ್ನು ಹೇಳು. ಸಿದ್ಧಾರ್ಥನು ವಿಶಾಲ ಪ್ರಪಂಚದೊಳಗೆ ಪ್ರವೇಶಿಸಿದ್ದಾನೆ. ಸಕಲ ಜೀವಿಗಳ ಜನರ ಬಾಧೆಗಳನ್ನು ತೊಲಗಿಸುವಂತಹ ಧರ್ಮಚಕ್ರ ಸಂಚಾಲಕನಾದ ಚಕ್ರವರ್ತಿಯಾಗಿ ಕಪಿಲವಸ್ತು ನಗರಕ್ಕೆ ಬರುತ್ತಾನೆಂದು ಹೇಳು. ನಿಮ್ಮ ಕುಮಾರನ ಸಿದ್ಧಾರ್ಥನೆಂಬ ನಾಮಧೇಯವು ಸಾರ್ಥಕವಾಗುವಂತೆ ಆಶಯಗಳು ಬೇಗನೇ ಸಿದ್ಧಿಸುವಂತೆ ಆಶಿಸುತ್ತೇನೆಂತಲೂ ಹೇಳು" ಎಂದನು

ಚೆನ್ನನು ಏನೂ ತೋರದೆ ಬಾಯಿಬಿದ್ದು ಹೋದವನಾಗಿ ಕಣ್ಣೀರು ಸುರಿಸುತ್ತಾ ನಿಂತಿರುವುದನ್ನು ನೋಡಿ ಸಿದ್ಧಾರ್ಥನು, "ಚೆನ್ನಾ, ತಾಯಿ ಇಲ್ಲದ ನನ್ನನ್ನು ಚಿಕ್ಕಂದಿನಿಂದಲೂ ಎತ್ತಿ ತಿರುಗಿಸಿ ಆಡಿಸಿ ತಲೆಯ ಮೇಲೆ ಹೊತ್ತು, ನಾನೇನು ಕೇಳಿದರೂ ಹೇಳಿದರೂ ನೀಡುತ್ತ ಮಾಡುತ್ತ ತಾಯಿಯ ಅನಂತರ ನೀನೇ ತಾಯಿಯಾಗಿ ಪೋಷಿಸಿದವನು. ನಿನ್ನ ವಾತ್ಸಲ್ಯದ ಋಣವು ಎಂದಿಗೂ ತೀರುವಂತಹುದಲ್ಲ. ಮನುಷ್ಯನಾಗಿ ಹುಟ್ಟಿದುದರ ಸಾರ್ಥಕತೆಗಾಗಿ ಹಂಬಲಿಸಿಕೊಂಡಿರುವ ನನ್ನನ್ನು ಈ ರಾತ್ರಿಯ ಹೊತ್ತಿನಲ್ಲಿ ನಗರವನ್ನು ದಾಟಿಸಿರುತ್ತಿ. ನಿನ್ನ ಉಪಕಾರವನ್ನು ಎಂದಿಗೂ ಮರೆಯಲಾರೆ. ನನ್ನ ಉದ್ದೇಶವು ಈಡೇರಿಬಿಟ್ಟರೆ ವಿಶ್ವಶಾಂತಿಗೆ ಕಾರಣನಾದ ಮೊತ್ತಮೊದಲನೆಯವನು ನೀನೇ ಆಗುವಿ. ಹೋಗಪ್ಪಾ, ಹೋಗು!" ಎಂದು ಚೆನ್ನನ ಭುಜವನ್ನು ತಟ್ಟಿದನು. ಬಾಷ್ಪಪೂರಿತ ಕಣ್ಣುಗಳಿಂದ ಚೆನ್ನನು ಕದಲಲೊಲ್ಲದ ಕಾಲುಗಳನ್ನು ಎತ್ತಿ



ಎತ್ತಿ ಕದಲಿಸುತ್ತ, ಕುದುರೆಯೊಂದಿಗೆ ಸಿದ್ಧಾರ್ಥನು ವಿಸರ್ಜಿಸಿ ಕೊಟ್ಟ ವಸ್ತುಗಳನ್ನೆಲ್ಲಾ ತೆಗೆದುಕೊಂಡು ನಗರಾಭಿಮುಖವಾಗಿ ಅಡಿದೆಗೆದನು.

ಸಿದ್ಧಾರ್ಥನು ತನ್ನ ಪ್ರಯಾಣವನ್ನು ಮುಂದು ವರಿಸಿ ನಡೆಯತೊಡಗಿದನು. ಶುಕ್ರೋದಯ ವಾಯಿತು, ಉಷಃಕಾಲವು ಪ್ರವೇಶಿಸಿತು. ಅದನ್ನನು ಸರಿಸಿ ಸೂರ್ಯೋದಯವೂ ಆಯಿತು.

ಅತ್ತ ಅರಮನೆಯಲ್ಲಿ ಚೆನ್ನನು ಬಿಕ್ಕುತ್ತ ಕಣ್ಣೀರು ಸುರಿಸುತ್ತ ಹೇಳಿದ ಮಾತುಗಳನ್ನೆಲ್ಲಾ ಕೇಳಿ, ಶುದ್ಧೋದನ ಮಹಾರಾಜನು ತೀರಾ ಹತಾಶನಾಗಿ ಮೂರ್ಛೆಹೋಗಿ ಬಿದ್ದನು.

ಯಶೋಧರೆ ಹಸುಕಂದ ರಾಹುಲನನ್ನು ಅಪ್ಪಿ ಕೊಳ್ಳುತ್ತ, "ಕಂದಾ, ನೀನು ಕೂಡಾ ನಿನ್ನ ಅಪ್ಪ ನನ್ನು ನಿಲ್ಲಿಸಲಾರದೆ ಹೋದೆಯಲ್ಲೋ !" ಎಂದು ಧಾರೆಧಾರೆಯಾಗಿ ಕಣ್ಣೀರು ಸುರಿಸಿ ಶೋಕಿಸಿದಳು. ಆಮೇಲೆ ಎದೆಯನ್ನು ದೃಢಪಡಿಸಿಕೊಂಡು, ತನ್ನ ಪತಿದೇವನ ಮುಖದಲ್ಲಿರುವ ಮಹಾ ಪುರುಷ ಲಕ್ಷಣಗಳನ್ನು ನೆನೆದುಕೊಳ್ಳುತ್ತ, ಗಂಭೀರಳಾಗಿ ಎದ್ದು ಹೋಗಿ ಮೂರ್ಛೆಬಿದ್ದ ಮಾವಯ್ಯನಿಗೆ ಪರಿ ಚರ್ಯೆಗಳನ್ನು ಮಾಡಿ, ಮೂರ್ಛೆಯಿಂದ ಎಚ್ಚರ ಗೊಳಿಸಿದಳು.

"ಮಹಾರಾಜರಾಗಿರುವ ಮಾವಯ್ಯಾ ! ನಿಮ್ಮ ಕುಮಾರನು ಸಾಧಾರಣ ಮಾನವನೆಂಬ ಆಲೋಚನೆ ಬಿಟ್ಟು, ಶಾಕ್ಯವಂಶವನ್ನು ಪುನೀತ ಮಾಡಲು ಜನಿಸಿದ ಅವತಾರ ಪುರುಷನೆಂದು ತಿಳಿಯಬೇಕು. ನೀವು ಕಪಿಲವಸ್ತು ರಾಜ್ಯದ ಪೌರರ ಪ್ರಜೆಗಳ ಕ್ಷೇಮ ಶ್ರೇಯಸ್ಸುಗಳನ್ನು ಹೇಗೆ ಕೋರಿಕೊಳ್ಳು ವಿರೋ, ಹಾಗೆಯೇ ಈ ವಿಶಾಲ ಜಗತ್ತಿನ ಜನ ರೆಲ್ಲರೂ ನಿಮ್ಮ ಕುಮಾರನ ಪ್ರಜೆಗಳೇ ಆದರು ! ಅವರಿಗಾಗಿಯೇ ಗೌತಮ ಸಿದ್ಧಾರ್ಥನು ಜನಿಸಿದ್ದಾನೆ. ಅವರಿಗಾಗಿಯೇ ಹೊರಟು ಹೋಗಿದ್ದಾನೆ !" ಎಂದು ಸಿದ್ಧಾರ್ಥನಿಗೆ ತಕ್ಕ ಪತ್ನಿಯಂತೆ ಹೇಳಿದಳು.

ಶುದ್ಧೋದನನು ಅವಳ ಮಾತುಗಳನ್ನು ಕೇಳಿ ಪರವಶನಾಗಿ ದುಃಖವನ್ನು ತಡೆದುಕೊಳ್ಳಲು ಶಕ್ತ ನಾದನು. ಯಶೋಧರೆ ರಾಹುಲನನ್ನು ತಾತನಿಗೆ ಒಪ್ಪಿಸುತ್ತ, "ತಗೊಳ್ಳಿ ಮಾವಯ್ಯಾ, ಆತನ ಪ್ರತಿ ಬಿಂಬ" ಎಂದಳು.

ಶುದ್ಧೋದನನು ಮೊಮ್ಮಗನನ್ನು ನೋಡುತ್ತ ಕುಮಾರನನ್ನು ನೆನೆದುಕೊಂಡನು. "ಇದೇ ಹಸುಕಂದ ಸಿದ್ಧಾರ್ಥನನ್ನಲ್ಲವೇ ಮಾಯಾದೇವಿ ತನ್ನ ಕೈಗೆ ಕೊಟ್ಟು ಮಾಯವಾಗಿ ಹೋದಳು !

"ಸಿದ್ಧಾರ್ಥನು ಹೇಳಿದಂತೆ ಬೇಗದಲ್ಲೇ ಕಪಿಲ ವಸ್ತುವಿಗೆ ಬರುತ್ತಾನೆ, ಬಾರದೆಹೋಗನು. ಹೇಳಿದ ಮಾತು ಎಂದಿಗೂ ತಪ್ಪುವವನಲ್ಲ. ಬರಲೇಬೇಕು, ಬಂದೇ ಬರುತ್ತಾನೆ" ಎಂಬ ಆಶೆಯಿಂದಲೇ ರಾಜ್ಯ ಪಾಲನೆ ಮಾಡತೊಡಗಿದನು ಶುದ್ಧೋದನ ಮಹಾ ರಾಜ. ಯಶೋಧರೆ ರಾಹುಲನನ್ನು ಆ ತಂದೆಗೆ ತಕ್ಕ

ಮಗನೆನಿಸುವಂತೆ ಆಗಬೇಕೆಂದು ಬಯಸುತ್ತ, ಚಿಕ್ಕಂದಿನಿಂದಲೇ ಅವನಿಗೆ ಒಳ್ಳೆಯ ಶಿಕ್ಷಣ ಕೊಡಿಸಿ ತಿದ್ದಿ ತೀಡಿ ಬೆಳೆಸುತ್ತಿದ್ದಳು.

ಜೀವಜಗತ್ತನ್ನು ಉದ್ಧರಿಸಬಲ್ಲಂತಹ ಸತ್ಯಾನ್ವೇಷಣೆಯಲ್ಲಿ ಸಿದ್ಧಾರ್ಥನು ಅನೇಕ ಕಷ್ಟಗಳಿಗೆ ಈಡುಗೊಟ್ಟು, ಎದೆಗೊಟ್ಟು ಇದಿರಿಸುತ್ತ, ಶಮದಮಾದಿಗಳನ್ನು ಸಹಿಸಿ ಪಳಗುತ್ತ ಅನೇಕ ಪ್ರಾಂತಗಳಲ್ಲಿ ತಿರುಗಾಡಿದನು. ಹಸಿವೆ ಬಾಯಾರಿಕೆಗಳಿಂದ ಬಸವಳಿದು ಎಚ್ಚರತಪ್ಪಿ ಒಂದೆಡೆಯಲ್ಲಿ ಬಿದ್ದನು.

ಆಗ ಒಬ್ಬ ಗೋಪಾಲಕನು ಅವನಿಗೆ ಶುಶ್ರೂಷೆ ಮಾಡಿ, ಹಾಲುಕೊಟ್ಟು ಕಾಪಾಡಿದನು. ಆಗಲೇ ಸಿದ್ಧಾರ್ಥನಿಗೆ ಪ್ರಾಣರಕ್ಷಣೆ ಎಷ್ಟು ದೊಡ್ಡದೆಂಬುದು ತಿಳಿಯಿತು. ಪರರಿಗೆ ಸೇವೆ ಮಾಡುವುದೂ ಮಾನವ ಧರ್ಮವೆಂಬುದನ್ನು ಮನಗಂಡನು.

ಸಿದ್ಧಾರ್ಥನು ಭಿಕ್ಷುವಾಗಿ ದೇಶಸಂಚಾರ ಮಾಡುತ್ತ, ಸನ್ಯಾಸಿಗಳನ್ನೂ, ಭಿನ್ನ ಭಿನ್ನ ಮಾರ್ಗಗಳನ್ನು ಅನುಸರಿಸುವ ಎಷ್ಟೋ ಮಂದಿಯನ್ನೂ ಕಲೆತುಕೊಂಡು ಅವರಿಂದ ಎಷ್ಟೋ ವಿಷಯಗಳನ್ನು ತಿಳಿದುಕೊಂಡನು. ತಪಸ್ಸು ಮಾಡಿದರೆ ಎಲ್ಲವೂ ಸಿದ್ಧಿಸುವುದೆಂದು ಅವರೆಲ್ಲರ ಒಟ್ಟು ಅಭಿಪ್ರಾಯದ ಸಾರವಾಗಿತ್ತು.

ಅದರಂತೆ ಸಿದ್ಧಾರ್ಥನು ತಪಸ್ಸಿಗೂ ಪ್ರಾರಂಭಿಸಿದನು. ಅವನು ಕಠೋರ ದೀಕ್ಷೆಯಲ್ಲಿ ತಪಸ್ಸು ಮಾಡಿಕೊಂಡಿರುವಾಗ, ಸುಜಾತೆ ಎಂಬ ತುಂಬಿದ ಬಸುರಿಯಾದ ಗೋಪಕಾಂತೆಯೊಬ್ಬಳು ತನಗೆ ಕುಮಾರನು ಹುಟ್ಟಿದರೆ, ತಾನು ಮತ್ತೆ ಬಂದು ಈ ತಪಸ್ವಿಯ ದರ್ಶನ ಮಾಡುತ್ತೇನೆಂದು ಹರಕೆ ಹೇಳಿಕೊಂಡಳು. ಆದರಂತೆ ಅವಳಿಗೆ ಕುಮಾರನೇ ಜನಿಸಿದನು. ಅವಳು ಹರಕೆ ಸಲ್ಲಿಸಲಿಕ್ಕಾಗಿ ಪಾಯಸವನ್ನೂ, ಹಣ್ಣುಗಳನ್ನೂ ತೆಗೆದುಕೊಂಡು, ಹಸುಮಗುವಿನೊಂದಿಗೆ ಸಿದ್ಧಾರ್ಥನ ಬಳಿಗೆ ಬಂದು,



ಅವನ ಪಾದಪ್ರದೇಶದಲ್ಲಿ ಅವುಗಳನ್ನೆಲ್ಲ ಅಣಿಗೊಳಿಸಿಟ್ಟು, ನಮಸ್ಕಾರವನ್ನು ಮಾಡಿದಳು.

ಆಗ ಸಿದ್ಧಾರ್ಥನು ತುಂಬಾ ಸೊರಗಿ ಎಲುವು ಗೂಡಿನಂತಾಗಿ ದೇಹಶಕ್ತಿ ಪೂರಾ ಕಳೆದುಕೊಂಡಿದ್ದನು. ಹಸಿವೆಯ ಕಾಟ ವಿಪರೀತವಾಗಿದ್ದುದರಿಂದ ಅವಳು ತಂದ ಪಾಯಸವನ್ನೂ, ಹಣ್ಣುಗಳನ್ನೂ ಸ್ವೀಕರಿಸಿ, ಪ್ರಾಣ ಉಳಿಸಿಕೊಂಡನು.

ಆಮೇಲೆ ಸುಜಾತೆ ಅವನಿಗೆ ಕೈಮುಗಿದು ತನ್ನ ಹರಕೆಯ ಸಂಗತಿಯನ್ನು ಹೇಳಿ, "ಸ್ವಾಮಿಾ, ತಮ್ಮ ದಯದಿಂದ ನನಗೆ ಕುಮಾರನೇ ಹುಟ್ಟಿದನು!" ಎನ್ನುತ್ತ, ಸಿದ್ಧಾರ್ಥನು ಬೇಡವೆಂದರೂ ಕೇಳದೆ ಮಗನನ್ನು ಅವನ ಪಾದಗಳಿಗೆ ತಾಗಿಸಿದಳು.

ಆಗ ಸಿದ್ಧಾರ್ಥನು "ಅಮ್ಮಾ, ನೀನು ಭಾವಿಸಿದ ಹಾಗೆ ನಾನು ಮಹಿಮಾನ್ವಿತನೇನೂ ಅಲ್ಲ. ನೀನು ಯಾವ ಭಾವನೆಯಿಂದ ನನಗೆ ಆಹಾರ ತಂದು ಕೊಟ್ಟರೂ ನಾನು ನಿನ್ನನ್ನು ದಯಾಸ್ವರೂಪಿಣಿ



ಯೆಂತಲೇ ತಿಳಿಯುತ್ತೇನೆ, ನೀನು ನನಗೆ ಪ್ರಾಣ ಭಿಕ್ಷೆ ನೀಡಿದ ಹಾಗೆಯೇ ಆಗಿದೆ. ನಿನ್ನಿಂದ ಭೂತ ದಯೆ ಎಂದರೇನೆಂಬುದನ್ನು ನಾನು ತಿಳಿದು ಕೊಂಡೆನು. ನಿನ್ನ ಹಾಗೆಯೇ ಪ್ರಕೃತಿ ಸಕಲ ಜೀವ ರಾಶಿಗಳನ್ನೂ ತಣ್ಣಗಿನ ದಯಾದೃಷ್ಟಿಯಿಂದ ನೋಡುತ್ತ ಕಾಪಾಡಿಕೊಂಡಿದೆ, ನೀನು ಆ ಪ್ರಕೃತಿಗೆ ಸಮಾನಳಾದ ತಾಯಿ !" ಎಂದನು.

"ಸ್ವಾಮಿ, ನಿಮ್ಮ ದೊಡ್ಡತನವನ್ನು ಹೇಳಿ ಕೊಳ್ಳಲು ಇಷ್ಟವಿಲ್ಲದೆ, ಹೀಗೆ ಹೇಳುವಿರೇ ಹೊರತು, ನಿಜವಾಗಿಯೂ ನೀವು ಮಹಾ ಮಹಿಮಾನ್ವಿತರೇ ಹೌದು, ನನಗೆ ಗೊತ್ತಿದೆ. ನನ್ನದು ಗೋಪಕುಲ ಸ್ವಾಮಿ. ದೊಡ್ಡವರಾದ ನೀವು ನನ್ನ ಮನೆಗೆ ಬಂದು, ನಮ್ಮೆಲ್ಲರ ಆತಿಥ್ಯವನ್ನು ಸ್ವೀಕರಿಸಿ ಮಗು ವನ್ನು ಆಶೀರ್ವದಿಸಬೇಕೆಂದು ನನಗೆ ಆಸೆ. ಆದರೆ ನಿಮ್ಮನ್ನು ಕರೆಯಲು ನಾನೆಷ್ಟರವಳು ! ತೀರಾ ಅಲ್ಪಳಾಗಿದ್ದೇನೆ !" ಎಂದಳು ಸುಜಾತೆ.

"ಅಮ್ಮಾ, ನಾನು ಸತ್ಯವನ್ನೇ ಹೇಳುತ್ತೇನೆ. ನಿನ್ನನ್ನು ಅಲ್ಪಳೆಂದು ತಿಳಿಯಬೇಡ. ನಾನೂ ನಿನ್ನಂಥವನೇ. ಈಗ ನನ್ನ ತಪಸ್ಸು ಫಲಿಸಲಿಲ್ಲ. ನಿನಗೂ ನನಗೂ ಇದೇ ವ್ಯತ್ಯಾಸ. ಮಾನವರೊಳಗೆ ಹೆಚ್ಚು ಕಡಿಮೆ ಎಂಬ ಭೇದಗಳನ್ನಿಟ್ಟುಕೊಳ್ಳುವುದು ಒಳ್ಳೆಯದಲ್ಲ. ಒಬ್ಬರು ಹೆಚ್ಚು ಒಬ್ಬರು ಕಡಿಮೆ ಎಂದುಕೊಳ್ಳಬೇಕಾದ ಅಗತ್ಯವೇ ಇಲ್ಲಮ್ಮಾ. ಜೀವಿ ಗಳೊಳಗೆಲ್ಲಾ ಪ್ರಾಣವು ಒಂದೇ ಬಗೆಯಾಗಿರುವ ಹಾಗೆಯೇ ಮಾನವತ್ವವೂ ಸಹ ಒಂದೇ ಬಗೆ. ನಾನು ಕೃತಾರ್ಥನಾಗಿ ನಿನ್ನ ಕುಮಾರನನ್ನು ಆಶೀರ್ವದಿಸ ತಕ್ಕ ಅರ್ಹತೆ ಪಡೆದ ಮೇಲೆ, ತಪ್ಪದೆ ನಿನ್ನ ಮನೆಗೆ ಅತಿಥಿಯಾಗಿ ಬರುತ್ತೇನೆ" ಎಂದನು ಸಿದ್ಧಾರ್ಥ.

"ತಪ್ಪದೆ ಬರಬೇಕು ಸ್ವಾಮಿ !" ಎಂದು ಹೇಳಿ ಸುಜಾತೆ ಮಗುವನ್ನು ಮತ್ತೊಮ್ಮೆ ಅವನ ಪಾದ ಗಳಿಗೆ ತಾಗಿಸಿ, ನಮಸ್ಕಾರಮಾಡಿ ಅಪ್ಪಣೆ ಪಡೆದು ಹೊರಟುಹೋದಳು.

ಮುಂದೆ ಕೆಲವು ದಿನಗಳಲ್ಲಿ ಸಿದ್ಧಾರ್ಥನಿಗೆ ತಪಸ್ಸಿ ನಲ್ಲಿಯೂ ಕಠೋರ ದೀಕ್ಷೆಯಲ್ಲಿಯೂ ಇರುವ ನಂಬುಗೆ ಹೋಯಿತು. ತಪಸ್ಸು ಮಾಡುವವರೆಲ್ಲ ರಲ್ಲಿಯೂ ಸ್ವಂತ ಪ್ರಯೋಜನವೂ ಸ್ವಾರ್ಥವೂ ಕಾಣುತ್ತಿತ್ತೇ ಹೊರತು, ಜೀವಕೋಟಿಗಳ ಮೇಲೆ ಪ್ರೇಮವಾಗಲೀ ಸಹಕಾರ ಮಾಡುವ ಗುಣವಾಗಲೀ ಕಂಡು ಬರಲಿಲ್ಲ. ಅವು ಶರೀರವನ್ನು ಹಿಂಸೆಪಡಿಸುವ ಆತ್ಮಹತ್ಯಕ್ಕೆ ಸಮಾನವಾಗಿಯೇ ತೋರಿದುವು. ಆದುದರಿಂದ ಗೌತಮ ಸಿದ್ಧಾರ್ಥನಿಗೆ ತಪಸ್ಸಿ ನಿಂದೇನೂ ಉಪಯೋಗವಿಲ್ಲವೆನಿಸಿತು.

ಹೀಗೆ ತಪಸ್ಸಿನ ಮೇಲೆ ಅವನಿಗೆ ಬಂದ ವಿಮುಖತೆಯನ್ನು ನೋಡಿ, ಅವನ ಸಮೀಪದಲ್ಲಿ ತಪಸ್ಸು ಮಾಡಿಕೊಂಡಿದ್ದವರು, ಗೌತಮನು ತಪೋ ಭ್ರಷ್ಟನಾದನೆಂದು ತಮ್ಮೊಳಗೆ ಗೇಲಿ ಮಾಡಿದರು. ಕೆಲಮಂದಿ ತಪಃಶಾಲಿಗಳೂ, ಸಾಧಕರೂ ಅದ್ಭುತ

ಶಕ್ತಿಗಳನ್ನೂ, ಮಹಿಮೆಗಳನ್ನೂ ಸಂಪಾದಿಸಿ ಇಂದ್ರ ಜಾಲ ವಿದ್ಯೆಗೆ ಸಮಾನವಾಗಿ, ಅವುಗಳಿಂದ ಇತರ ರನ್ನು ಆಕರ್ಷಿಸಿ ತಮ್ಮ ಸುತ್ತಲೂ ಸೇರಿಸಿಕೊಳ್ಳುತ್ತ ಅದು ದೊಡ್ಡ ಘನ ಕಾರ್ಯವೆಂದು ಉಬ್ಬಿಕೊಳ್ಳು ತ್ತಾರೆಯೇ ಹೊರತು, ವಿಶ್ವಮಾನವ ಶ್ರೇಯಸ್ಸಿಗೆ ಅವುಗಳಿಂದ ಎಷ್ಟು ಮಾತ್ರವೂ ಪ್ರಯೋಜನವಾಗು ವುದಿಲ್ಲ. ಪ್ರಕೃತಿ ಧರ್ಮವನ್ನು ಮಾರ್ಪಡಿಸಲು ಅವುಗಳಿಂದಾಗದೇ ಆಗದು. ಮಹಾ ಮಹಿಮ ರೆಲ್ಲರೂ ಕಾಲಧರ್ಮ ಹೊಂದಿಕೊಂಡೇ ಇದ್ದಾರೆ.

ಅಜ್ಞಾನದಿಂದ, ಮೂಢ ನಂಬಿಗೆಗಳಿಂದ ನರಳಾಡಿ ಕೊಂಡಿರುವ ಜನರು ಹೇಗೆತಾನೇ ಮಾರ್ಪಡು ತ್ತಾರೆ? ಯಜ್ಞಯಾಗಗಳ ಹೆಸರಿನಲ್ಲಿ ಮಾರಣ ಹೋಮಗಳು ಮಿತಿಮೀರಿ ಹೋಗುತ್ತಲೇ ಇವೆ.

ಈ ಯಜ್ಞಯಾಗಗಳು ರಾಜರುಗಳನ್ನು ಉದ್ರೇಕಿಸಿ ವಿಪರೀತ ಮಾಂಸಭಕ್ಷಕರಾಗುವಂತೆ ಮಾಡುತ್ತವೆ. ಈ ಬಗೆಯ ಅಗ್ರಶ್ರೇಣಿಯವರು ಜನಸಮುದಾಯವನ್ನು ಇನ್ನಿಷ್ಟು ತಳಕ್ಕಿಳಿಯುವಂತೆ ತುಳಿಯುತ್ತಿದ್ದಾರೆ.

ಇಂತಹ ಆಲೋಚನೆಗಳಿಂದ ಆಂದೋಳಿತ ನಾದ ಸಿದ್ಧಾರ್ಥನು, ತರ್ಕವಿತರ್ಕಗಳ ಗೊಡವೆ ಯಿಲ್ಲದ, ಕರ್ತವ್ಯ ಧರ್ಮವನ್ನು ಕುರಿತು ಚಿಂತಿಸುತ್ತ, ಆ ಗಯಾಕ್ಷೇತ್ರದಲ್ಲಿದ್ದ ಒಂದು ದೊಡ್ಡ ಅರಳಿ ಮರದ ಕೆಳಗೆ ಕುಳಿತುಕೊಂಡು ಅಂತರ್ಮುಖನಾಗಿ ದ್ದಾಗ, ಅವನಿಗೆ ಜ್ಞಾನೋದಯವಾಯಿತು.

ಆ ದಿನ ಪೂರ್ಣಿಮಾ. ಚಂದ್ರಬಿಂಬವು ಪರಿ ಪೂರ್ಣವಾಗಿ ಪ್ರಕಾಶಿಸುವ ಹಾಗೆಯೇ ಗೌತಮನಿಗೆ ಬುದ್ಧತ್ವವು ಸಿದ್ಧಿಸಿತು. ಅವನು ಪರಿಪೂರ್ಣ ಬುದ್ಧ ಮೂರ್ತಿಯಾಗಿ ವಿಕಸಿತನಾದನು. ತಾನು ಕೃತಾರ್ಥ ನಾದೆನೆಂಬ ದೊಡ್ಡ ಸಂತೃಪ್ತಿ ಅವನಿಗಾಯಿತು.

ವೈಶಾಖ ಮಾಸದ ಪೂರ್ಣಿಮಾ ದಿನವು "ಬುದ್ಧ ಪೂರ್ಣಿಮೆ" ಎಂದು ಹೆಸರು ಪಡೆಯಿತು. ಅಶ್ವತ್ಥ




ವೃಕ್ಷವು ಬೋಧಿವೃಕ್ಷವೆಂದು ಪೂಜಿಸಲ್ಪಟ್ಟಿತು. ಬುದ್ಧನು ಬೋಧಿಸತ್ವನೆಂದು ಹೆಸರು ಪಡೆದನು.

ಪ್ರಾಣಿಕೋಟಿಗಳಲ್ಲಿ ಮನುಷ್ಯನು ಬುದ್ಧಿ ವಿಶೇಷತೆ ಯಿಂದಲೇ ಉನ್ನತನೆನಿಸಿಕೊಂಡಿದ್ದಾನೆ. ಬುದ್ಧಿ ಯನ್ನು ವಿಕಸನಗೊಳಿಸಿಕೊಳ್ಳುವುದರ ಮೂಲಕ ವಾಗಿ ತನ್ನನ್ನು ತಾನೇ ಉದ್ಧರಿಸಿಕೊಳ್ಳಲು ಅವನಿಗೆ ಸಾಧ್ಯ. ಅಹಿಂಸೆಯಿಂದಲೇ ಮಾನವನು ನಿಜವಾದ ಮಾನವನಾಗಿ ಬುದ್ಧನಾಗುತ್ತಾನೆ. ಬಯಕೆಗಳನ್ನು ಬಂಧಿಸಿ, ಆಶೆಗಳ ಗೊಡವೆಗಳನ್ನು ಮೂಲೆಗೊತ್ತಿ, ರಾಗದ್ವೇಷಗಳನ್ನು ವರ್ಜಿಸಿ, ಸುಖದುಃಖಗಳನ್ನು ಸಮಾನತೆಯಿಂದ ನೋಡಿ, ಅತೀವವಾದ ನಿರ್ವಾಣ ವನ್ನು ಮುಟ್ಟಿ ಬುದ್ಧತ್ವ ಪಡೆದ ಮಾನವನು ಬುದ್ಧನಾಗಿ, ಒಂದು ಜ್ಯೋತಿಯಿಂದ ಅನೇಕ ಜ್ಯೋತಿ ಗಳನ್ನು ಬೆಳಗಿಸುವಂತೆ, ಅನೇಕರಲ್ಲಿ ಬುದ್ಧತ್ವವನ್ನು ಉಂಟುಮಾಡಿದರೆ, ಈ ಜಗತ್ತು ಕತ್ತಲೆಯಿಂದ ಬೆಳಕಿಗೆ ಬರುತ್ತದೆ. ಬುದ್ಧನೇ ಜಗತ್ತಿಗೆ ಜ್ಯೋತಿ.



ಗೌತಮ ಬುದ್ಧನು ತಾನು ತಿಳಿದುಕೊಂಡ ಸತ್ಯಗಳನ್ನು ಎಲ್ಲರಿಗೂ ಹೇಳತೊಡಗಿದನು. ಕೇಳ ಕೇಳುತ್ತ, ಮೊದಲು ಅವನನ್ನು ಎಗತಾಳೆ ಮಾಡಿದವರೆಲ್ಲಾ ಅವನ ಶಿಷ್ಯರಾಗಿ ಅನುಯಾಯಿಗಳಾಗಿ ಸೇರಿಕೊಂಡರು.

ಬುದ್ಧನು ಪ್ರಬೋಧನೆ ಮಾಡದ ಧರ್ಮವು ಪ್ರಪಂಚದಲ್ಲಿಲ್ಲ. ಸಾಮಾನ್ಯ ಜನರಿಗೆ ಕೂಡಾ ಅರ್ಥವಾಗುವ ಹಾಗೆ ಎಲ್ಲರಿಗೂ ಆಚರಿಸಲು ಸೂತ್ರಗಳನ್ನು ಬುದ್ಧನು ಪ್ರಚಾರ ಮಾಡಿದನು.

ಬುದ್ಧನ ಬೋಧನೆಯೊಳಗಿರುವ ಸತ್ಯವನ್ನು ಗುರುತಿಸಿ ಬಹು ಬೇಗದಲ್ಲೇ ಸಾವಿರಾರು ಜನರು ಬುದ್ಧನ ಶಿಷ್ಯರಾದರು. ಅವನು ಹೇಳಿದ ದಾರಿಯನ್ನೇ ಹಿಡಿದರು. ಅಹಿಂಸೆಯನ್ನು ಪರಮ ಧರ್ಮವಾಗಿ ಬೋಧಿಸುತ್ತ ಬುದ್ಧನು ದೇಶಸಂಚಾರ ಮಾಡಿಕೊಂಡಿರುವಾಗ, ಮಗಧ ದೇಶದ ಚಕ್ರವರ್ತಿ ಬಿಂಬಿಸಾರನು, ಬುದ್ಧನ ಉದ್ಬೋಧನೆಗಳಿಂದ ಉತ್ತೇಜಿತನಾಗಿ, ಸಾವಿರಾರು ಜೀವಿಗಳು ಬಲಿಯಾಗಲಿದ್ದ, ತನ್ನ ಯಜ್ಞಕಾರ್ಯಗಳನ್ನು ಪೂರ್ತಿ ನಿಲ್ಲಿಸಿದನು. ತನ್ನ ಕಿರೀಟವನ್ನು ಬುದ್ಧನ ಪಾದಗಳ ಮುಂದೆ ಇಟ್ಟು, ತನ್ನ ಪ್ರಜೆಗಳೆಲ್ಲರಿಗೂ ಬುದ್ಧಧರ್ಮವು ಶಿರೋಧಾರ್ಯವಾಗುವಂತೆ ಮಾಡಿದನು.

ಬುದ್ಧನ ಬೋಧನೆಗಳು, ಸಿದ್ಧಾಂತಗಳು, ಸೂತ್ರಗಳು ಮೊದಲಾದುವೆಲ್ಲಾ ಬೌದ್ಧಧರ್ಮವಾಗಿ ನೆಲೆನಿಂತಿತು. ಬೌದ್ಧ ಧರ್ಮಾವಲಂಬಿಗಳೆಲ್ಲರೂ ಬೌದ್ಧರೆಂದು ಹೆಸರು ಪಡೆದರು. ಬೌದ್ಧ ಧರ್ಮವು ಹರಡಿಕೊಂಡು ಹೋಯಿತು.

ಅಜ್ಞಾನಾಂಧಕಾರದಲ್ಲಿ ಮುಳುಗಿರುವ ಜಗತ್ತಿಗೆ ದಾರಿ ತೋರಿಸುವ ಜ್ಯೋತಿಯಾಗಿ ಬುದ್ಧನು ನಿಂತನು. ಅಹಿಂಸಾಜ್ಯೋತಿಯಾದನು. ಧರ್ಮಚಕ್ರವೇ ಅವನ ದಿವ್ಯಾಯುಧವಾಗಿ ಅದರ ಚಾಲನೆಯಿಂದ ಧರ್ಮಚಕ್ರದ ಶಾಂತತೆಯ ಶಕ್ತಿ ಪ್ರಭಾವಗಳು ಲೋಕಕ್ಕೆ ತಿಳಿಯುತ್ತ, ಅವನು ಚಕ್ರವರ್ತಿಯಾದನು.

ಬುದ್ಧನು ದೇಶ ದೇಶಗಳನ್ನು ತಿರುಗಿ, ಅಲ್ಲಲ್ಲಿ ಬೌದ್ಧ ಸಂಘಗಳ ಏರ್ಪಾಡು ಮಾಡಿ, ಜನತೆಯಲ್ಲಿ ಸೇವಾ ಧರ್ಮವನ್ನು ನೆಲೆಗೊಳಿಸಿದನು. ಬೌದ್ಧ ಸನ್ಯಾಸಿಗಳೆಲ್ಲರೂ ಸಮಾಜ ಸೇವಕರಾಗಿ, ಜನಸಾಮಾನ್ಯರಿಗೆ ಒಳ್ಳೆಯ ಸಂಸ್ಕಾರಗಳನ್ನು ಕಲಿಸುತ್ತ ಬರತೊಡಗಿದರು.

ಬುದ್ಧನು ಸಂಚಾರ ಕಾರ್ಯಕ್ರಮಗಳನ್ನು ನಡೆಸಿಕೊಂಡಿದ್ದಾಗ ದೊಡ್ಡ ದೊಡ್ಡ ರಾಜರು ಅವನಿಗೆ ಕೊಡೆ ಹಿಡಿದರು. ಚಕ್ರವರ್ತಿಗಳು ತಮ್ಮ ಕಿರೀಟಗಳನ್ನು ಅವನ ಪಾದಗಳ ಮುಂದೆ ಇಟ್ಟರು. ಬುದ್ಧನನ್ನು ಚಕ್ರವರ್ತಿಗಳಿಗೆ ಚಕ್ರವರ್ತಿಯಾಗಿ ಕೀರ್ತಿಸುತ್ತ, ಬುದ್ಧನ ಆದೇಶಾನುಸಾರವಾಗಿ ಪ್ರಜೆಗಳನ್ನು ಪಾಲಿಸುತ್ತ, ಮುಖ್ಯವಾಗಿ ದಯೆಯೂ ಅಹಿಂಸೆಯೂ ಎಲ್ಲಾ ಪ್ರಜೆಗಳಲ್ಲಿಯೂ ಕೂಡಿ

ಹರಿಯುವಂತೆ ಮಾಡಿದರು. ಕುಲಪ್ರಭೇದಗಳಿಗೆ ತಾವಿಲ್ಲದ ಬೌದ್ಧ ಧರ್ಮವನ್ನು ಎಲ್ಲಾ ದೇಶಗಳ ಜನಬಾಹುಲ್ಯತೆಯೂ ಅವಲಂಬಿಸಿತು.

ಆಗ ಪಂಡಿತರು, ಪಾಮರರು, ಜ್ಞಾನಿಗಳು, ರಾಜರು, ಚಕ್ರವರ್ತಿಗಳು ಬುದ್ಧನನ್ನು ದೇವರೆಂದು ಭಾವಿಸಿದರು. ಅವನನ್ನು ಬುದ್ಧ ಭಗವಾನ್ ಎನ್ನುತ್ತಿದ್ದರು. ಆದರೆ ಬುದ್ಧನು ಯಾವ ವಿಧವಾದ ಆರಾಧನೆಯನ್ನೂ ಒಪ್ಪಿಕೊಳ್ಳಲಿಲ್ಲ. ಭಕ್ತಿ ಆರಾಧನೆ ಮುಖ್ಯವಲ್ಲವೆಂದೂ, ಸತ್ಕರ್ಮ ಸದ್ವರ್ತನೆಗಳಿಂದಲೇ ಮಾನವರು ನಿರ್ವಾಣ ಸ್ಥಿತಿಯನ್ನು ಹೊಂದುವರೆಂದೂ ಬುದ್ಧನು ಒತ್ತಿಯೊತ್ತಿ ಹೇಳುತ್ತಿದ್ದನು.

ಆರು ವರ್ಷಗಳ ತರುವಾಯ ಬುದ್ಧನು ಕಪಿಲವಸ್ತು ನಗರಕ್ಕೆ ಹೊರಟನು.

ಬುದ್ಧ ದೇವನು ಬರುವನೆಂಬ ವಾರ್ತೆ ಕಪಿಲವಸ್ತು ನಗರಕ್ಕೆ ಹೋಯಿತು. ಅದನ್ನು ಕೇಳಿ ಪ್ರಜೆಗಳು ಆನಂದೋತ್ಸಾಹಗಳಿಂದ ಉಕ್ಕಿದರು. ಸ್ವಾಗತ ಸನ್ಮಾಹಗಳನ್ನು ಮಾಡತೊಡಗಿದರು. ಅವನಿಗೆ ನೀರಾಜನವೆತ್ತಲು ನಗರವಾಸಿಗಳೆಲ್ಲಾ ತವಕಿಸಿಕೊಂಡಿದ್ದರು.

ರಾಜಾ ಶುದ್ಧೋದನನು ತನ್ನ ಮಗ ಸಿದ್ಧಾರ್ಥ ಕುಮಾರನೇ ಬರುವನೆಂದು ತಿಳಿದು ಆನಂದಡೋಲಿಕೆಯಲ್ಲಿ ಓಲಾಡಿಕೊಂಡಿದ್ದನು.

"ಅಮ್ಮಾ, ನನ್ನ ಅಪ್ಪನವರು ಬರುತ್ತಿದ್ದಾರಂತೆ!" ಎಂದು ಕುಮಾರ ರಾಹುಲನು ಅತ್ಯಾನಂದದಿಂದ ಯಶೋಧರೆಯೊಂದಿಗೆ ಹೇಳಿದನು.

ಆಗ ಆರು ವರ್ಷದ ತನ್ನ ಮಗನನ್ನು ನೋಡಿ ಯಶೋಧರೆ "ಹೌದು ಕಂದಾ! ನಿನ್ನ ತಂದೆ ಈಗ ಭಿಕ್ಷುವಾಗಿ ಬರುತ್ತಿದ್ದಾರೆ. ಆ ಪ್ರಪಂಚ ಚಕ್ರವರ್ತಿಗೆ ನಾವು ಭಿಕ್ಷೆ ಹಾಕಬೇಕು" ಎಂದಳು.

"ಏನಂದಿ ಅಮ್ಮಾ? ಅವರು ಚಕ್ರವರ್ತಿಯೇ?" ಎಂದನು ಕುಮಾರ ರಾಹುಲ.

"ಹೌದು. ವಿಶ್ವಕ್ಕೇ ಚಕ್ರವರ್ತಿಯಾಗಿದ್ದಾರೆ ನಿನ್ನ ಅಪ್ಪ" ಎಂದಳು ತಾಯಿ.

"ನಮ್ಮದೆಲ್ಲವೂ ಅವರದೇ ತಾನೇ ಅಮ್ಮಾ?" ಎಂದನು ರಾಹುಲ.

"ಇವಾವುದೂ ಈಗ ಅವರಿಗೆ ಅಗತ್ಯವಿಲ್ಲ ಕಂದಾ, ಅದಕ್ಕೇ ಎಲ್ಲವನ್ನೂ ಬಿಟ್ಟು ಹೋದರು. ಅವರು ಹೇಳಿದ ಹಾಗೆ ನಡೆದುಕೊಳ್ಳುವುದೇ ಅವರಿಗೆ ಬೇಕಾದ ಭಿಕ್ಷೆ" ಎಂದಳು ಯಶೋಧರೆ.

"ಹಾಗೆಯೇ ಮಾಡೋಣ ಅಮ್ಮಾ. ಅಪ್ಪ ಏನು ಹೇಳುವರೋ ಅದನ್ನೇ ನಾನು ಮಾಡುತ್ತೇನೆ. ಅಪ್ಪನ ಹಿಂದೆಯೇ ನಡೆಯುತ್ತೇನೆ" ಎಂದು ರಾಹುಲನು ಹೇಳಲು ಯಶೋಧರೆ ಆನಂದದಿಂದ ಮಗನನ್ನು ಗಾಢಾಲಿಂಗನ ಮಾಡಿಕೊಂಡಳು.






ಬುದ್ಧನ ಆಗಮನವನ್ನು ತಿಳಿದ ಕ್ಷಣದಿಂದಲೂ ನಗರವಾಸಿಗಳಲ್ಲಿ ಒಂದು ನೂತನ ಚೈತನ್ಯವೆದ್ದಿತು. ಕಪಿಲವಸ್ತು ನಗರದ ಜನರೆಲ್ಲ ಬುದ್ಧನನ್ನು ಸ್ವಾಗತಿಸಿಕೊಳ್ಳಲು ತೊಡಗಿದರು. ಹಾಹಾ ಅನ್ನುವಷ್ಟರಲ್ಲಿ ಸ್ವಾಗತಾಲಂಕಾರಗಳ ಶೋಭೆಯಿಂದ ಎಲ್ಲಿ ನೋಡಿದರೂ ಹೊಸ ಪ್ರಕಾಶ ಹರಡಿತು. ಪ್ರಪಂಚಕ್ಕೆ ಜ್ಯೋತಿಯಾಗಿ ನಿಂತ ಬುದ್ಧದೇವನು ತಮ್ಮ ನಗರಕ್ಕೆ ಸೇರಿದವನೆಂದುಕೊಂಡು ಪೌರರು ಅನುಭವಿಸುವ ಆನಂದಕ್ಕೆ ಮೇರೆಯಿರಲಿಲ್ಲ. ತಮ್ಮನ್ನು ಆಳುವವನಾಗಿ ಬರಬೇಕಾದ ಸಿದ್ಧಾರ್ಥ ರಾಜಕುಮಾರನು ಪ್ರಪಂಚದ ಸರ್ವ ಮಾನವಾಳಿಯ ಮಾನವತ್ವಕ್ಕೆ ಚಕ್ರವರ್ತಿಯಾಗಿ ಬರುವನೆಂದು ಜನರೆಲ್ಲ ಆನಂದದಿಂದ ಉಕ್ಕುವ ಹೃದಯಗಳಿಂದ ದಾರಿಯುದ್ದಕ್ಕೂ ಹೂವಿನ ಹಾಸಿಗೆ ಹಾಸಿದರು.

ಕುಮಾರನನ್ನು ಆಲಿಂಗಿಸಿಕೊಳ್ಳುವ ಭಾಗ್ಯ ಬಂದಿತೆಂದುಕೊಂಡು ವೃದ್ಧನಾದ ಶುದ್ಧೋದನ ಮಹಾರಾಜನ ಚಿತ್ತ ಹೃದಯವು ತವಕಿಸಿಕೊಂಡಿದ್ದಿತು.

ಬುದ್ಧನು ಅಲ್ಲಿಗೆ ಬರುತ್ತಿದ್ದನು. ತಲೆ ಎತ್ತಿಕೊಂಡು, ಅರ್ಧನಿಮೀಲಿತ ನೇತ್ರಗಳಿಂದ, ಶಾಂತ ಗಂಭೀರ ಕ್ರಮದ ನಡಿಗೆಯಲ್ಲಿ, ನಿಶ್ಚಲ ಭಾವದ ವದನಮಂಡಲದಿಂದೊಪ್ಪುವ ಕರುಣಾಮೂರ್ತಿಯಾಗಿ ಬುದ್ಧನು ಬರುತ್ತಿದ್ದನು. ಅವನ ಹಿಂದೆ "ಬುದ್ಧಂ ಶರಣಂ ಗಚ್ಛಾಮಿ, ಧರ್ಮಂ ಶರಣಂ ಗಚ್ಛಾಮಿ, ಸಂಘಂ ಶರಣಂ ಗಚ್ಛಾಮಿ" ಎಂಬ ದಿವ್ಯ ವಾಕ್ಯಗಳನ್ನುಚ್ಚರಿಸುತ್ತ ಅಸಂಖ್ಯ ಜನ ಸಂದೋಹವು ಮಾಡುವ ಧ್ಯಾನವು ಗಂಭೀರವಾದ ಸಮುದ್ರ ಘೋಷದಂತೆ ಕೇಳಿ ಬರತೊಡಗಿತು. ಭೂಮಿಯೇ ಜನಸಮುದ್ರವಾಗಿ ಬರುತ್ತಿದ್ದಿತು.

ರಾಜಾ ಶುದ್ಧೋದನನೂ, ಯಶೋಧರೆ, ರಾಹುಲರೂ ರಾಜಪ್ರಾಸಾದದ ಸೋಪಾನಗಳನ್ನು ಇಳಿದು ಇದಿರು ನೋಡಿಕೊಂಡು ನಿಂತರು. ಚೆನ್ನನು ಪ್ರಾಂಗಣದ ಮುಂದೆ ಬಂದು ನಿಂತುಕೊಂಡು ಆನಂದಾಶ್ರುಗಳನ್ನು ಸುರಿಸುತ್ತ ಇದಿರು ನೋಡಿಕೊಂಡಿದ್ದನು.



ಬುದ್ಧನು ಭಿಕ್ಷಾ ಪಾತ್ರೆಯನ್ನು ಹಿಡಿದುಕೊಂಡು ರಾಜಪ್ರಾಸಾದದ ಹತ್ತಿರ ಬಂದನು. ರಾಹುಲನು ಓಡುತ್ತ ಬಂದು ತಂದೆಯ ಪಾದಗಳ ಮೇಲೆ ಅಡ್ಡ ಬಿದ್ದನು. ಯಶೋಧರೆ ಚಿರಕಾಲದ ಮೇಲೆ ಕಾಣಿಸುವ ತನ್ನ ಗಂಡನ ಪ್ರಸನ್ನ ವದನವನ್ನು ತದೇಕ ದೃಷ್ಟಿಯಿಂದ ನೋಡುತ್ತಾ ಹಾಗೆಯೇ ಅವನ ಮುಂದೆ ಮುಂಡುಗಾಲೂರಿದಳು. ಅವನ ಪಾದಗಳ ಮೇಲೆ ತಲೆಯನ್ನು ಅಂಟಿಸಿ ಕಣ್ಣಿಗೆ ತಾಗಿಸಿಕೊಂಡಳು. ಅವಳು ಕಣ್ಣುಗಳಿಂದ ಉದುರಿದ ಆನಂದಬಾಷ್ಪ ಜಲದಿಂದ ಬುದ್ಧನ ಪಾದಗಳನ್ನು ತೊಳೆದಳು.

ಬುದ್ಧನನ್ನು ಆಲಿಂಗನ ಮಾಡಿಕೊಳ್ಳಲಿಕ್ಕಾಗಿ ಕೈಗಳನ್ನು ಚಾಚಿದ ಶುದ್ಧೋದನನು, ಅವನ ಪರಿವ್ರಾಜಕ ರೂಪವನ್ನೂ, ಭಿಕ್ಷಾ ಪಾತ್ರವನ್ನೂ ನೋಡಿ ಹಾಗೆಯೇ ಬುದ್ಧಿ ಮಂಕಾದವನಂತೆ ನಿಶ್ಚೇಷ್ಟಿತನಾದನು. ಆ ವೃದ್ಧ ರಾಜನ ಮನಸ್ಸು ಭಿಕ್ಷುವಾಗಿ ಬಂದು ನಿಂತ ಕುಮಾರನನ್ನು ನೋಡಿ ವಿಲವಿಲನೆ ಒದರಿಕೊಂಡಿತು. ದಳದಳ ಕಣ್ಣೀರಿಳಿಯಿತು. ಆನಂದಬಾಷ್ಪವು ತಳಮಳದಿಂದ ಮಸಕಾಯಿತು. ಆಲಿಂಗಿಸಲು ಚಾಚಿದ ಕೈಗಳು ಚಲನವಿಲ್ಲದೆ ಹಾಗೆಯೇ ಉಳಿದುವು.

"ಅಪ್ಪಾ! ಕಂದಾ! ಕುಮಾರಾ! ಸಿದ್ಧಾರ್ಥಾ! ಗೌತಮಾ!" ಎನ್ನುತ್ತ ಶುದ್ಧೋದನನು ಹುಚ್ಚನ ಹಾಗೆ ಕೊರಳೆತ್ತಿ ಕರೆಯುತ್ತ ಹಾಗೆಯೇ ಕುಸಿದು ಮೂರ್ಛೆ ಹೋದನು.

ಬುದ್ಧನು ಕುಳಿತು, ತಂದೆಯ ತಲೆಯನ್ನು ತನ್ನ ಮಡಿಲಲ್ಲಿಟ್ಟುಕೊಂಡು ತನ್ನ ಕಾಷಾಯ ಉತ್ತರೀಯದಿಂದ ಗಾಳಿ ಬೀಸಿದನು. ಕುಮಾರನ ಅಮೃತ ಸ್ಪರ್ಶದಿಂದ ಶುದ್ಧೋದನನು ಎಚ್ಚರಕ್ಕೆ ಬಂದನು. "ಅಪ್ಪಾ, ನನ್ನ ಪ್ರಣಾಮವನ್ನು ಸ್ವೀಕರಿಸಿರಿ. ನಾನು ಸಿದ್ಧಿಸಿದ ಅರ್ಥದೊಂದಿಗೆ ಸಿದ್ಧಾರ್ಥನಾಗಿ ಬಂದಿದ್ದೇನೆ" ಎಂದು ಹೇಳುವ ಬುದ್ಧನ ಮಾತುಗಳು ಅಮೃತ ಸಿಂಚನಗಳಾಗಿ ಶುದ್ಧೋದನನ ಕಿವಿಗಳಿಗೆ ಬಿದ್ದುವು. ಬುದ್ಧನ ಅರ್ಧನಿಮೀಲಿತ ಕಣ್ಣುಗಳಿಂದ ಚಂದ್ರಕಿರಣಗಳು ಹೊರಡುತ್ತಿದ್ದುವು. ಮುಖದಲ್ಲಿ ಅಪೂರ್ವವಾದ ತೇಜಸ್ಸು ಕಾಣತೊಡಗಿತು. ಯಾವುದೋ ಅನಿರ್ವಚನೀಯವಾದ ಪ್ರಭಾವವು ಶುದ್ಧೋದನನನ್ನು ಉತ್ತೇಜಿತನನ್ನಾಗಿ ಮಾಡಿತು. ಅಶಾಂತಿಯಿಂದ ಶಾಂತಿಗೆ, ಕತ್ತಲೆಯಿಂದ ಬೆಳಕಿಗೆ, ಭ್ರಮೆಯಿಂದ ಸತ್ಯದೆಡೆಗೆ ಅವನನ್ನು ಒಯ್ಯುತ್ತಿದ್ದಿತು. "ಬುದ್ಧಂ ಶರಣಂ ಗಚ್ಛಾಮಿ...." ಎಂಬ ಮಾತುಗಳು ಅವನ ಕಿವಿಯಲ್ಲಿ ಮಾರ್ದೊಳಗುತ್ತಿದ್ದುವು. ಶುದ್ಧೋದನನ ನಾಲಗೆಯೂ ಅಲುಗುತ್ತ ಅದನ್ನೇ ಹೇಳತೊಡಗಿತು. ರಾಹುಲನು ಕೂಡಾ ಅದನ್ನೇ ಉಚ್ಚರಿಸುತ್ತಿದ್ದನು. ಪ್ರಜಾನೀಕವು ಕೂಡಾ ಹಾಗೆಯೇ ಘೋಷಿಸಿಕೊಂಡಿದೆ. ಯಶೋಧರೆ ಕಣ್ಣುಗಳನ್ನು ಮುಚ್ಚಿಕೊಂಡು ಎದೆಯ ಮೇಲೆ ಕೈಗಳನ್ನಿಟ್ಟು,

ಧ್ಯಾನಮುದ್ರೆಯಲ್ಲಿ "ಬುದ್ಧಂ ಶರಣಂ ಗಚ್ಛಾಮಿ" ಎಂದು ಜಪಿಸುತ್ತಿದ್ದಳು.

ಆಗ ಬುದ್ಧನು ರಾಹುಲನ ತಲೆಯನ್ನು ನೀವುತ್ತ, "ಕುಮಾರಾ! ನೀನು ಕೂಡಾ ಬುದ್ಧನಾಗಿ ಧರ್ಮವನ್ನೂ, ಸಂಘವನ್ನೂ ಅನುಸರಿಸುತ್ತ ಮಾನವತೆಗೆ ಸಾರ್ಥಕತ್ವ ತರಬೇಕೆಂದು ಆಶೀರ್ವಾದ ಮಾಡುತ್ತೇನೆ, ಬುದ್ಧನೆಂದರೆ ಯಾರು ಗೊತ್ತೇ? ನೀನು ಅಂದುಕೊಳ್ಳುವ ಹಾಗೆ ನಾನು ಮಾತ್ರವೇ ಬುದ್ಧನಲ್ಲ. ಉತ್ತಮ ಧರ್ಮಗಳನ್ನು, ಅಹಿಂಸೆಯನ್ನು ಆದರಿಸುವವರೆಲ್ಲರೂ ಬುದ್ಧರೇ, ಬುದ್ಧತ್ವವೇ ಮಾನವತ್ವ. ಬುದ್ಧತ್ವಗೊಂಡ ಮಾನವನೇ ಬುದ್ಧನು. ಅಂತಹ ಮಾನವ ಜನ್ಮವನ್ನು ಸಾರ್ಥಕಪಡಿಸಿಕೊಳ್ಳುವ ಬುದ್ಧನೇ ಈ ಲೋಕಕ್ಕೆ ಈಗ ಬೇಕಾದವನು. ಜೀವಕೋಟಿಗೆ ಅಂತಹ ಬುದ್ಧನೇ ಶರಣ್ಯನು. ಬುದ್ಧರು ಉಪದೇಶಿಸಿದ ಧರ್ಮಗಳೇ ಮಾನವಾಳಿಗೆ ನಿಜವಾದ ಶಾಂತಿಯನ್ನು ಕೊಡುತ್ತವೆ. ಧರ್ಮವೇ ಲೋಕಕ್ಕೆ ಶರಣ್ಯವು. ಬುದ್ಧರೊಂದಿಗೆ ಕೂಡಿದ ಸಂಘವೇ ಈ ಜಗತ್ತಿಗೆ ಶರಣ್ಯವು. ಬುದ್ಧ ಸಂಘ ಸಮುದಾಯಗಳೇ ಯುಗಧರ್ಮವನ್ನು ಉದ್ಧರಿಸಿಕೊಂಡು ಹೋಗುವಂಥವು" ಎಂದು ಹೇಳಿದನು.

ಈಗ ಯಶೋಧರೆ ಕಣ್ಣುಗಳನ್ನು ಅರಳಿದ ಕಮಲದಂತೆ ಅಗಲವಾಗಿ ಬಿಡಿಸಿ ಬುದ್ಧನ ಮುಖವನ್ನು ನಿಶ್ಚಲವಾಗಿ ನೋಡುತ್ತ, "ಸ್ವಾಮಿ, ನನ್ನನ್ನು ನಿಮಗೆ ಭಿಕ್ಷೆಯಾಗಿ ಸಮರ್ಪಿಸಿಕೊಳ್ಳುತ್ತೇನೆ. ಇದುವರೆಗೆ ನಾನು ಗೃಹಿಣಿಯಾಗಿದ್ದೆನು. ಈಗ ನಾನು ಮಾನವ ಸೇವಾ ಧರ್ಮಕ್ಕೆ ಅಂಕಿತಳಾಗುವ ಪರಿವ್ರಾಜಿಕೆಯಾಗುವೆನು. ನಿಮ್ಮ ಅಡಿಗಳ ಜಾಡಿನಲ್ಲಿ ಜೀವಿಸುವುದೇ ನನ್ನ ಧರ್ಮ. ಮಾನವರ ಒಂದು ಭಾಗವಾದ ಸ್ತ್ರೀಯರನ್ನು ಕೂಡಾ ಬೌದ್ಧರು ಆದರಿಸಬೇಕಲ್ಲವೆ? ಸ್ತ್ರೀಯರಿಗೆ ಬೌದ್ಧ ಸಂಘದಲ್ಲಿ ಅರ್ಹತೆಯನ್ನೂ, ಸ್ಥಾನವನ್ನೂ ಪ್ರಸಾದಿಸಬೇಕು



ಸ್ವಾಮಿ" ಎಂದು ಪ್ರಾರ್ಥಿಸುತ್ತಾ ಭಕ್ತಿಯಿಂದ ಪ್ರಣಾಮ ಮಾಡಿದಳು.

ಆ ವಿಧವಾಗಿ ಯಶೋಧರೆ ಬೌದ್ಧ ಧರ್ಮವನ್ನು ಸ್ವೀಕರಿಸಿದ ಪ್ರಥಮ ಮಹಿಳೆಯಾದಳು.

ಚೆನ್ನನು ಇದನ್ನೆಲ್ಲ ಆನಂದಬಾಷ್ಪಗಳುದುರುವ ನೆನೆಗಣ್ಣುಗಳಿಂದ ನೋಡುತ್ತ ನಿಂತಿರುವುದನ್ನು ಬುದ್ಧನು ನೋಡಿದನು. ತನ್ನನ್ನು ದೇವರಂತೆ ಆರಾಧನಾಭಾವದಿಂದ ನೋಡುವ ಚೆನ್ನನನ್ನು ಬುದ್ಧನು ತನ್ನ ಬಳಿಗೆ ಕರೆದಾಗ, ಚೆನ್ನನು ಅವನ ಮುಂದೆ ಅಡ್ಡ ಬೀಳಲು ನೋಡಿದನು. ಆಗ ಬುದ್ಧನು ಅವನನ್ನು ತಡೆದು, "ಚೆನ್ನಾ, ಎಷ್ಟು ದೊಡ್ಡವನಾಗಿ ಹೋದರೂ ಚಿಕ್ಕವರೇ ದೊಡ್ಡವರನ್ನು ಗೌರವಿಸಬೇಕು, ಪೂಜಿಸಬೇಕು. ನೀನು ನನಗೆ ಈಗಲೂ ಪೂಜನೀಯನು. ನನ್ನನ್ನು ಈ ಕಪಿಲವಸ್ತುವಿಂದ ವಿಶಾಲ ವಿಶ್ವದೊಳಗೆ ದಾಟಿಸಿದ ಪುಣ್ಯಮೂರ್ತಿಯಲ್ಲವೇ ನೀನು? ನಾನು ತಿಳಿದುಕೊಂಡ



ಸತ್ಯಗಳನ್ನು ಧರ್ಮಗಳನ್ನು ಹೇಳಿದ ಮಾತ್ರಕ್ಕೆ ನನ್ನನ್ನು ಭಗವಾನನೆನ್ನುವುದಾಗಲಿ, ಹಾಗೆ ಸ್ತುತಿಸಿ ಕೊಳ್ಳುವುದನ್ನಾಗಲಿ ನಾನು ಇಷ್ಟಪಡಲಾರೆನು. ವ್ಯಕ್ತಿಯ ಆರಾಧನೆ ಅಗತ್ಯವಿಲ್ಲದ ಕೆಲಸ. ಭಗವಾನನೆಂಬ ಭಾವನೆಯೂ ಅಷ್ಟೇ. ಎಲ್ಲರೂ ಸಮಾನರೆಂಬ ಮಾನವ ಧರ್ಮವನ್ನು ಆಚರಿಸುವುದೇ ಬೇಕಾದುದು" ಎಂದನು.

ಬುದ್ಧನ ಮಾತುಗಳನ್ನು ಕೇಳಿ ಚೆನ್ನನು ಬೇಡಿಕೊಳ್ಳುವವನಂತೆ, "ಬುದ್ಧ ಭಗವಾನನೆಂದು ಅಂದುಕೊಳ್ಳುವುದರಲ್ಲಿಯೇ ನಮಗೆ ಬಹಳ ತೃಪ್ತಿ. ಆದರಿಂದ ಧರ್ಮಾಚರಣೆಯ ಮೇಲೂ, ಸಂಘಸೇವೆಯ ಮೇಲೂ ಅಕುಂಠಿತವಾದ ಭಕ್ತಿ ವಿಶ್ವಾಸಗಳು ಉಂಟಾಗುತ್ತವೆ. ಅನುಬಂಧವನ್ನು ಬಲಗೊಳಿಸುತ್ತದೆ. ಆದುದರಿಂದ ನಿನ್ನನ್ನು ಭಗವಾನನೆಂದು ಆರಾಧನಾಭಾವದಿಂದ ನೋಡಲಿಕ್ಕೂ ಕರೆಯಲಿಕ್ಕೂ ನಮಗಿರುವ ಸ್ವೇಚ್ಛೆಯನ್ನು ನಿರಾಕರಿಸಬೇಡ. ಬುದ್ಧತ್ವಕ್ಕೆ ಪ್ರಾರಂಭದವನಾದ ನೀನು ದೇವರಾಗಿಯೇ ಇರಬೇಕು. ಆದರಿಂದ ಯಾವ ಅಪಚಾರವೂ ಆಗದು. ತಪ್ಪೂ ಅಲ್ಲ" ಎಂದನು.

ಬುದ್ಧನು ಮೌನವಾಗಿ ತಲೆದೂಗಿದನು. ಆಗಿನಿಂದ ಬುದ್ಧನು ಬುದ್ಧ ಭಗವಾನನೆಂದೇ ಕರೆಯಲ್ಪಟ್ಟನು. ಎಲ್ಲರ ಬಾಯಿಯಲ್ಲಿಯೂ ಬುದ್ಧದೇವನಾದನು. ಉತ್ತಮ ಮಾನವನೇ ದೇವರೆಂಬ ಅರ್ಥದಲ್ಲಿ ಬುದ್ಧನು ಅದಕ್ಕೆ ತಟಸ್ಥನಾಗಿ ಸುಮ್ಮನಿರಬೇಕಾಯಿತು.

ಶಾಕ್ಯ ವಂಶದಲ್ಲಿ ಕೆಲವು ಮಂದಿಯ ಹೊರತು ಉಳಿದವರೆಲ್ಲರೂ ಬುದ್ಧ ಧರ್ಮವನ್ನು ಸ್ವೀಕರಿಸಿದರು. ಬುದ್ಧನ ಆದೇಶಗಳನ್ನು, ಉಪದೇಶಗಳನ್ನು ಪ್ರಚಾರ ಮಾಡಿದರು. ಅವರೆಲ್ಲ ಭಿಕ್ಷುಗಳಾಗಿ ಮಾರ್ಪಟ್ಟರು. ತಮ್ಮ ಸಂಪತ್ತುಗಳನ್ನು ಸಂಘಕ್ಕೆ ಸಮರ್ಪಣೆ ಮಾಡಿದರು. ತಮ್ಮನ್ನು ಜನಸೇವೆಗೆ ಅಂಕಿತಪಡಿಸಿಕೊಂಡರು.

ಮೊದಲಿನಿಂದಲೂ ವಿರೋಧಿಯಾಗಿದ್ದ ದೇವದತ್ತನು ಮಾತ್ರ ಸ್ಪರ್ಧೆಯಿಂದ ಬೌದ್ಧ ಧರ್ಮವನ್ನು ನಿರಸನ ಮಾಡುತ್ತ, ಬುದ್ಧನ ಮಾರ್ಗಕ್ಕೆ ವ್ಯತಿರೇಕಿಗಳಾದ ಕೆಲವರನ್ನು ಗುಂಪುಗೂಡಿಸಿಕೊಂಡು ತಿರುಗುತ್ತಿದ್ದನು. ರಾಜ ಕುಟುಂಬದವನಾದುದರಿಂದ ಅವನಿಗೂ ಹಲವರು ಕೂಡಾಳುಗಳಿದ್ದರು.

ಬುದ್ಧನು ಕಪಿಲವಸ್ತು ನಗರದಿಂದ ಹಿಂದಿರುಗಿ ಪ್ರಯಾಣ ಹೊರಟನು. ಅವನ ಅನುಯಾಯಿಗಳೊಂದಿಗೆ, ಶಿಷ್ಯರೊಂದಿಗೆ ಯಶೋಧರೆಯೂ, ರಾಹುಲನೂ ಸಹ ಹೊರಟರು.

ಹೀಗೆ ಹಿಂದಿರುಗುವ ದಾರಿಯಲ್ಲಿ ಬುದ್ಧನು ಸುಜಾತಳ ಮನೆಗೆ ಭಿಕ್ಷುವಾಗಿ ಹೋದನು. ಹೇಳಿದ ಮಾತನ್ನು ಮರೆಯದೆ ಬಂದವನನ್ನು ನೋಡಿ ಸುಜಾತಳಿಗಾದ ಆನಂದ ಅಷ್ಟಿಷ್ಟಲ್ಲ. ಬುದ್ಧನು ಸುಜಾತಳ ಕುಮಾರನಿಗೆ ಆಶೀರ್ವಾದ ಮಾಡಿ,

ರಾಹುಲನೊಂದಿಗೆ, "ರಾಹುಲಾ, ಈ ಹುಡುಗನು ನಿನಗೆ ತಮ್ಮನು. ನೀವಿಬ್ಬರೂ ಸ್ನೇಹಿತರಾಗಿ ಆಪ್ತರಾಗಿ, ಸೋದರರಾಗಿ, ವರ್ಣ ವಿಭೇದಗಳಿಗೆ ಅತೀತರಾಗಿ ಮಾನವತ್ವವನ್ನೂ, ವಸುಧೈವ ಕುಟುಂಬವೆಂಬ ನೀತಿಯನ್ನೂ ಪ್ರಪಂಚಕ್ಕೆ ಪ್ರಬೋಧಿಸಬೇಕು" ಎಂದು ಹೇಳಿದನು.

ಸುಜಾತೆ ಬುದ್ಧನ ಶಿಷ್ಯಳಾಗಿ ಯಶೋಧರೆಯೊಂದಿಗೆ ಜತೆಗೂಡಿದಳು, ಗೃಹಿಣಿಯರಾಗಿದ್ದುಕೊಂಡೇ ಸ್ತ್ರೀಯರು ಬೌದ್ಧ ಧರ್ಮವನ್ನು ಅವಲಂಬಿಸಿ, ಮಕ್ಕಳನ್ನು ಉತ್ತಮ ಮಾನವರಾಗಿ ತಿದ್ದಿ ಬೆಳೆಸುವ ಮಾತೃಮೂರ್ತಿಗಳಾಗಿರಬೇಕೆಂದು ನಾರೀ ಲೋಕಕ್ಕೆ ಬೋಧಿಸಿ, ಧರ್ಮ ಸಂಚಾಲನೆ ಮಾಡಬೇಕಾಗಿರುವುದೆಂದು. ಯಶೋಧರೆ ಸುಜಾತೆಯರಿಗೆ ಬುದ್ಧನು ಆದೇಶ ಮಾಡಿದನು.



ಬುದ್ಧನು ತನ್ನ ಅನುಚರರಾದ ಶಿಷ್ಯರೆಲ್ಲರನ್ನೂ, ಧರ್ಮಚಕ್ರ ಸಂಚಾಲನೆಗೆ ನಾಲ್ಕು ದಿಕ್ಕುಗಳಿಗೂ ಕಳುಹಿಸಿದನು. ಯಶೋಧರೆಯನ್ನೂ, ರಾಹುಲನನ್ನೂ ಕಪಿಲವಸ್ತು ನಗರಕ್ಕೆ ಹೋಗಿ, ವೃದ್ಧನಾದ ಶುದ್ಧೋದನನನ್ನು ನೋಡಿಕೊಳ್ಳುತ್ತ, ರಾಜವಂಶವನ್ನು ಧರ್ಮ ಮಾರ್ಗದಲ್ಲಿ ನಡೆಯಿಸಬೇಕೆಂದು ಹೇಳಿ ಕಳುಹಿಸಿಕೊಟ್ಟನು.

ಹೀಗೆ ಎಲ್ಲರನ್ನೂ ಕಳುಹಿಸಿಕೊಟ್ಟ ಮೇಲೆ ಬುದ್ಧನು ಒಬ್ಬನೇ ಅರಣ್ಯ ಮಾರ್ಗವನ್ನು ಹಿಡಿದು ಹೋಗತೊಡಗಿದನು. ಅವನ ದಾರಿ ಘೋರಾರಣ್ಯದೊಳಗೆ ಹೋಯಿತು. ಆ ಅರಣ್ಯದೊಳಗೆ ಘೋರಾತಿ ಘೋರನಾದ, ಕ್ರೂರತ್ವವೇ ಮೂರ್ತಿವಂತನಾಗಿದ್ದ "ಅಂಗುಲಿಮಾಲಿ" ಎಂಬೊಬ್ಬ ದಾರಿ ದೋಚುವ ಕೊಳ್ಳೆಗಾರನಿದ್ದನು. ಮನುಷ್ಯರ ಹೆಬ್ಬೆರಳುಗಳನ್ನು ಮಾಲೆಯಾಗಿ ಸುರಿದುಕೊಂಡು ತನ್ನ ಕೊರಳಿಗೆ ಹಾಕಿಕೊಂಡವನು ಆ ಗಜಚೋರ. ಅವನ ಕಣ್ಣಿಗೆ ಬಿದ್ದು ಅವನಿಗೆ ಹೆದರಿ ಶರಣಾಗಿ ಜೀವ ಉಳಿಸಿಕೊಂಡವರದು, ಅಥವಾ ಅವನಿಂದ ದೋಚಲ್ಪಟ್ಟು ಪ್ರಾಣ ಕಳೆದುಕೊಂಡವರದು ಆ ಹೆಬ್ಬೆರಳುಗಳು! ಅವನ ಕಣ್ಣಿಗೆ ಬಿದ್ದವರು ಹೆಬ್ಬೆರಳು ಕಳೆದುಕೊಳ್ಳಲೇಬೇಕು.

ತನಗೆ ಹೆದರದವರು ಯಾರೂ ಈ ಭೂಮಿಯಲ್ಲಿರಬಾರದೆಂಬುದು ಅಂಗುಲಿಮಾಲಿಯ ಉದ್ದೇಶ.

ಒಬ್ಬನೇ ಆ ಕಾಡಿನೊಳಗೆ ಹೋಗುವ ಬುದ್ಧನನ್ನು ನೋಡಿ, ದಾರಿಯಲ್ಲಿ ಕೆಲವು ಕುರುಬ ಹುಡುಗರು, "ಸ್ವಾಮೀ, ಆ ಕಡೆಗೆ ಹೋಗುವಿರಾ? ಆ ದಾರಿಯಲ್ಲಿ ನಲುವತ್ತು ಮಂದಿಗಿಂತ ಕಡಿಮೆಯಾಗಿ ಹೋದವರಾರೂ ಉಳಿಯಲಾರರು. ಹಾಗೆ ಯಾರೂ ಹೋಗುವುದಿಲ್ಲ. ಅಲ್ಲಿ ಭಯಂಕರನಾದ ಕಳ್ಳನೊಬ್ಬನಿದ್ದಾನೆ. ಒಬ್ಬಿಬ್ಬರಾಗಿ ಹೋದವರಾರೂ ಹಿಂದಿರುಗಿ ಬದುಕಿ ಬಂದುದಿಲ್ಲ. ಬದುಕಿದವರು ಹೆಬ್ಬೆರಳು ಕಳೆದುಕೊಳ್ಳಬೇಕಾಗುತ್ತದೆ!" ಎಂದು ಎಚ್ಚರಿಸಿದರು.



ಆದರೆ ಬುದ್ಧನು ಆ ಕುರುಬರ ಎಚ್ಚರಿಕೆಯನ್ನು ಲಕ್ಷ್ಯಮಾಡದೆ ಅರಣ್ಯದೊಳಗೆ ಮುಂದೆ ಮುಂದೆ ನಡೆದನು.

ಒಬ್ಬಂಟಿಗನಾಗಿ ನಡೆಯುತ್ತಿರುವ ಬುದ್ಧನನ್ನು ಅಂಗುಲಿಮಾಲಿ ನೋಡಿದನು. ಕಾಷಾಯ ವಸ್ತ್ರದೊಳಗೆ ಅವನು ಏನನ್ನೋ ಮರೆಸಿಟ್ಟುಕೊಂಡು ನಡೆಯುತ್ತಿದ್ದಾನೆ.

ಅಂಗುಲಿಮಾಲಿ ಭಯಂಕರವಾದ, ರಕ್ತದ ಕಲೆಗಳಿಂದ ತಳತಳಿಸುವ ಕತ್ತಿಯನ್ನು ಎತ್ತಿ ಝಳಪಿಸುತ್ತ, "ಯಾರು ನೀನು ? ಅದೇನು ವಸ್ತ್ರದ ಮರೆಯಲ್ಲಿ ? ಅದನ್ನಿತ್ತ ತೆಗೆದುಕೊಡು!" ಎಂದನು.

ಬುದ್ಧನು ಮುಗುಳುನಗುತ್ತ, ಕಾವಿ ವಸ್ತ್ರದ ಮರೆಯಲ್ಲಿ ಇಟ್ಟುಕೊಂಡಿದ್ದ ಭಿಕ್ಷಾ ಪಾತ್ರವನ್ನು ತೆಗೆದು ಅಂಗುಲಿಮಾಲಿಗೆ ಕೊಟ್ಟನು.

ಅಂಗುಲಿಮಾಲಿ ಅದನ್ನು ಹಿಡಿದು ಅತ್ತಿತ್ತ ತಿರುಗಿಸಿ ನೋಡಿ, "ಭಿಕ್ಷಾ ಪಾತ್ರ! ನೀನು ಭಿಕ್ಷೆ ಬೇಡುವವನಾದರೆ ಆಗಲಿ. ಆದರೆ ಬೇಕಂತ ನನ್ನನ್ನು ಹುಡುಕುತ್ತಾ ಬಂದ ಹಾಗೆ ಬಂದು, ನನ್ನ ಮುಂದೆ ನಿಂತು, ಮುಗುಳುನಗು ತೋರಿಸುತ್ತ ನನ್ನ ಕೈಗೆ ಈ ಹಾಳು ಚಿಪ್ಪನ್ನು ಕೊಡಬೇಕಾದರೆ ನಿನಗೆಷ್ಟು ಗರ್ವ! ನಿನಗೆ ಭಯವಿಲ್ಲವೇ? ಈ ಕತ್ತಿ ನೋಡಲಿಲ್ಲವೇ ? ನಾನು ಯಾರೆಂದು ಗೊತ್ತಿಲ್ಲವೇ ?" ಎಂದನು.

"ನೀನು ಮನುಷ್ಯನೆಂದು ಗೊತ್ತಾಗಿದೆ. ನಾನೂ ಮನುಷ್ಯನೇ. ಅಂದಮೇಲೆ ಭಯಪಡುವ ಕಾರಣವೇನಿದೆ?" ಎಂದನು ಬುದ್ಧ.

"ನಾನು ಸಾಧಾರಣದ ಮನುಷ್ಯನಲ್ಲ. ನೀನು ನನಗೆ ಹೆದರಿ ನಿನ್ನ ಹೆಬ್ಬೆರಳನ್ನು ಕೊಟ್ಟು ಪ್ರಾಣ ಉಳಿಸಿಕೊಂಡು ಹೋಗಬೇಕು, ಅಷ್ಟೇ. ಇಲ್ಲದಿದ್ದರೆ ನಿನ್ನನ್ನು ಕೊಂದು ಬೆರಳು ಕಡಿದುಕೊಳ್ಳುತ್ತೇನೆ. ನೋಡಿದಿಯಾ ನನ್ನ ಕೊರಳಲ್ಲಿರುವ ಹೆಬ್ಬೆರಳುಗಳ ಮಾಲೆ ?" ಎಂದನು ಅಂಗುಲಿಮಾಲಿ.

"ನೀನು ನನ್ನನ್ನು ಕೊಂದುಬಿಡುವುದು ಬಹು ಸುಲಭ. ಅದು ದೊಡ್ಡ ಕೆಲಸವಲ್ಲ. ಕತ್ತಿಯೇ ಅದನ್ನು ಸುಲಭವಾಗಿ ಮಾಡುತ್ತದೆ. ಹುಟ್ಟಿದವನಿಗೆ ಎಂದೋ ಒಂದು ದಿನ ಸಾವು ಬಂದೇ ಬರುತ್ತದೆ. ಅದು ನನ್ನ ಪಾಲಿಗೆ ಈಗ ನಿನ್ನ ಕೆಲಸವಾಗಿ ಬಂದಿದ್ದರೆ ಕೊಂದುಬಿಡು. ಸಂತೋಷವಾಗಿ ಸಾಯುತ್ತೇನೆ. ಈ ದಿನ ನನ್ನನ್ನು ಕೊಲ್ಲುವಿ. ಹಾಗೆಯೇ ಒಂದು ದಿನ ನೀನೂ ಸಾಯುವವನೇ ತಾನೇ ? ನನ್ನ ಹಾಗೆ ನಿಶ್ಚಿಂತೆಯಾಗಿ ನಗುತ್ತ ಮೃತ್ಯುವನ್ನು ಸ್ವೀಕರಿಸುವಿಯಾ ? ನಾನು ಯಾವ ಪ್ರಾಣಿಗೂ ಹಾನಿ ಮಾಡಲಿಲ್ಲ. ನಿನಗೂ ಮಾಡುವುದಿಲ್ಲ. ಮನಸ್ಸಿನಲ್ಲಿಯೂ ನಿನ್ನನ್ನು ನಿಂದಿಸುವುದಿಲ್ಲ. ಏಕೆಂದರೆ ನಿನ್ನಲ್ಲಿ ಬೆಳೆದು ಬಂದ ಗುಣ ಅಂಥಾದ್ದು, ನಾನು ಸರಿಯಾಗಿ ಬದುಕಿದೆನೆಂಬ ತೃಪ್ತಿಯಲ್ಲಿ ಮೃತ್ಯುವಿಗೆ ತಲೆಯೊಡ್ಡುತ್ತೇನೆ. ನಿನಗೂ ಮರಣವು

ಸಮೀಪಿಸಿದಾಗ ನನ್ನ ಹಾಗೆ ಆನಂದದಿಂದ ಸಾಯುವಂತಾಗಬೇಕು. ಅದೇ ನನ್ನ ಆಸೆ. ಕೊಲ್ಲು" ಎಂದನು ಬುದ್ಧ.

ಬುದ್ಧನ ಮಾತುಗಳನ್ನು ಕೇಳುತ್ತಿದ್ದ ಹಾಗೆ ಅಂಗುಲಿಮಾಲಿಯ ತಲೆ ತಿರುಗಿಹೋಯಿತು. ಏನೋ ಆಲೋಚನೆಗೆ ಬಿದ್ದನು. ತಾನು ಮಾಡಿದ ಘೋರ ಕೃತ್ಯಗಳನ್ನು ನೆನೆದುಕೊಂಡು ಕಂಪಿಸತೊಡಗಿದನು. ತನ್ನ ಪಾಪಗಳಿಗೆ ಪ್ರಾಯಶ್ಚಿತ್ತವೇ ಇಲ್ಲ. ಮಹಾ ಪಾಪಿಯಾದ ತನ್ನನ್ನು ಕ್ಷಮಿಸಬಲ್ಲವನು ಯಾವನು? ಯಾರಿಗೆ ಅಷ್ಟು ದಯವಿರುತ್ತದೆ? ಕಳ್ಳನಿಗೆ ಉಂಟಾದ ಆವೇದನೆಯಲ್ಲಿ ಬುದ್ಧನು ನೆನಪಿಗೆ ಬಂದನು. ಅದುವರೆಗೆ ಬುದ್ಧನನ್ನು ಕುರಿತು ಕೇಳಿದ್ದನು. ಹುಲಿಯನ್ನೂ ಜಿಂಕೆಯನ್ನೂ, ಹಾವನ್ನೂ ಕಪ್ಪೆಯನ್ನೂ ಒಂದೇ ದೃಷ್ಟಿಯಲ್ಲಿ ನೋಡುವ ಕರುಣಾಮೂರ್ತಿ ಬುದ್ಧನೆಂದು ಕೇಳಿದ್ದನು. ಈಗ ಆ ಬುದ್ಧನೇ ನನಗೆ ದಿಕ್ಕು! ಬುದ್ಧನ ಮೂಲಮಂತ್ರವೆಂದು ಯಾರೋ ಹೇಳುತ್ತಿದ್ದ "ಬುದ್ಧಂ ಶರಣಂ ಗಚ್ಛಾಮಿ." ಎಂದು ತನಗೆ ತಾನೇ ಹೇಳಿಕೊಂಡನು.

"ಅಂಗುಲಿಮಾಲೀ! ನಾನೇ ಬುದ್ಧನು! ನಿನಗಾಗಿಯೇ ಬಂದಿದ್ದೇನೆ. ಆದುದರಿಂದಲೇ ನಿನಗೆ ಭಿಕ್ಷಾಪಾತ್ರೆಯನ್ನು ನೀಡಿದೆನು. ಕಳೆದ ಜೀವಿತವನ್ನು ಮರೆತುಬಿಡು. ಅದಕ್ಕೇ ಯಾರಿಗೂ ಕಳೆದ ಜನ್ಮಗಳು ನೆನಪಿರುವುದಿಲ್ಲ. ಈಗ ಸರಿಯಾದ ಮುಂದಿನ ದಾರಿಯನ್ನು ನೋಡು! ಅದೇ ನಿನ್ನ ಹೊಸ ಜನ್ಮದ್ದು, ಬೌದ್ಧ ಭಿಕ್ಷುವಾಗಿ ನನ್ನ ಶಿಷ್ಯನಾಗಿ ಬಾ. ಹೋಗೋಣ ನಡೆ!" ಎಂದನು ಬುದ್ಧ.

"ಬುದ್ಧ ಭಗವಾನ್!" ಎಂದು ಕೂಗುತ್ತಾ ಅಂಗುಲಿಮಾಲಿ ಬುದ್ಧನ ಪಾದಗಳ ಮೇಲೆ ಬಿದ್ದು, "ನಾನೊಬ್ಬನೇ ಒಳಿತು ಮಾಡಿಕೊಳ್ಳುವುದು ಸರಿಯಾಗದು. ನನ್ನ ಅನುಚರರೆಲ್ಲರೂ ನಿನ್ನ ಶಿಷ್ಯರು, ಭಿಕ್ಷುಗಳು!" ಎಂದು ಅಂಗುಲಿಮಾಲಿ ತನ್ನ ಪರಿವಾರದವರನ್ನೆಲ್ಲಾ ಕರೆದು, ತನ್ನ ಹಾಗೆ ಎಲ್ಲರನ್ನೂ ಅನುಗ್ರಹಿಸಬೇಕೆಂದು ಬೇಡಿಕೊಂಡನು.

ಅಂಗುಲಿಮಾಲಿಯೂ ಅವನ ಅನೇಕ ಮಂದಿ ಅನುಚರರೂ ಬುದ್ಧ ಭಿಕ್ಷುಗಳಾಗಿ ಬುದ್ಧನ ಹಿಂದೆ ಹೊರಟರು. ಒಬ್ಬನೇ ಅರಣ್ಯದೊಳಗೆ ಹೊಕ್ಕ ಬುದ್ಧನು, ದೊಡ್ಡ ಪರಿವಾರದೊಂದಿಗೆ ಹೊರಬಿದ್ದನು.

ಬುದ್ಧನ ಉಪದೇಶಗಳನ್ನು ಕೇಳಿ ಎಷ್ಟೋ ಧರ್ಮಬಾಹಿರರೂ, ದುಷ್ಟರೂ ತಮ್ಮ ಗತ ಜೀವಿತದ ಮೇಲೆ ಜಿಗುಪ್ಸೆಗೊಂಡು ಪಶ್ಚಾತ್ತಾಪದಿಂದ ಬುದ್ಧನ ಶಿಷ್ಯರಾಗಿ, ಭಿಕ್ಷುಗಳಾಗಿ, ಸಂಘ ಸೇವೆಗೆ ಅಂಕಿತರಾಗಿ ಶೇಷ ಜೀವಿತವನ್ನು ಪುನೀತ ಮಾಡಿಕೊಂಡರು.





ಅಹಿಂಸೆಯ ಧರ್ಮದಿಂದ, ಶಾಂತಿಯುತವಾಗಿ ಕುಲ ವರ್ಗ ಭೇದವಿಲ್ಲದಂತಹ ಮಾನವ ಸಮಾಜವು ಏರ್ಪಡುವ ನೀತಿಯ ಫಲಗಳು ತುಂಬಿದ ಬೌದ್ಧ ಧರ್ಮವೆಂಬ ಮಹಾ ವೃಕ್ಷವು, ಪ್ರಪಂಚವೆಲ್ಲಾ ತನ್ನ ನೆರಳನ್ನು ಹಾಯಿಸಿಕೊಂಡು ಹೋಯಿತು.

ಜೀವಕೋಟಿಗಳನ್ನು ಉದ್ಧರಿಸುವ ಕರುಣಾ ಮೂರ್ತಿಯಾಗಿ ಅವತರಿಸಿದ ಬುದ್ಧನು "ತಥಾಗತ" ನೆಂದು, "ಬೋಧಿಸತ್ವ" ನೆಂದು, ಭಗವಾನನೆಂದು ಕೀರ್ತಿಸಲ್ಪಟ್ಟು ಬುದ್ಧನ ಔನ್ನತ್ಯವು ಹಿಮಾಲಯದ ಹಾಗೆ ಬೆಳೆಯುತ್ತಿದ್ದಿತು.

ಹೀಗಿದ್ದರೂ ಬುದ್ಧನ ಆಜನ್ಮ ವೈರಿಯಾದ ದೇವದತ್ತನ ಅಸೂಯಾದ್ವೇಷಗಳು ಇನ್ನಷ್ಟು ಹೆಚ್ಚಾಗಿ ಬೆಳೆಯುತ್ತಲೇ ಇದ್ದುವು. ಒಳಿತು ಎಷ್ಟೇ ಹೆಚ್ಚಾಗಿದ್ದರೂ ಕೆಡುಕು ಕೂಡಾ ಹಾಗೆಯೇ ಬೆಳೆಯುತ್ತದೆನ್ನಲು ಇದೇ ಸಾಕ್ಷಿ. ಪ್ರಪಂಚ ಗಮನಕ್ಕೆ ರಾತ್ರಿ ಹಗಲುಗಳಂತೆ ಅವೆರಡೂ ಬೇಕೇ ಬೇಕಾಗುತ್ತವೆ. ಆದರೆ ಮಿತಿಮೀರುವ ಗುಣವುಳ್ಳ ಕೆಡುಕು ಅತಿರೇಕವಾದಾಗಲೇ ಅವುಗಳನ್ನು ಅಡಗಿಸಲು ಭಗವಾನನು ಅವತಾರ ಎತ್ತುತ್ತಾನೆ.

ಬುದ್ಧನು ತನ್ನ ವೃದ್ಧಾಪ್ಯದಲ್ಲಿ ಕೂಡಾ ಒಂದೇ ದೀಕ್ಷೆಯಿಂದ ಊರಿಂದೂರಿಗೆ ತಿರುಗುತ್ತ, ಮಾನವ ಸಮಾಜದ ಹೀನಕುಲದವರನ್ನು, ನಿರ್ಭಾಗ್ಯರನ್ನು, ಅಗ್ರವರ್ಣದವರೆಂದು ಬೀಗಿಕೊಂಡಿರುವವರಿಂದಾಗುವ ಅನೀತಿ, ಅಕ್ರಮ, ಅವಮಾನಗಳಿಗೆ ಗುರಿಯಾಗುವ, ದೀನದಳಿತರನ್ನು, ತನ್ನ ದಿವ್ಯ ಪ್ರಬೋಧಗಳಿಂದ ಸಂಸ್ಕಾರವಂತರಾಗುವಂತೆ ಮಾಡುತ್ತಾ, ತನ್ನ ಶಿಷ್ಯರನ್ನಾಗಿ ಮಾಡಿಕೊಳ್ಳುತ್ತಿದ್ದನು. ಇದೆಲ್ಲವೂ ತನ್ನ ಕಕ್ಷೆಯನ್ನು ಸಾಧಿಸಲು ದೇವದತ್ತನಿಗೆ ಒಳ್ಳೆಯ ಅವಕಾಶವಾಗಿ ತೋರಿತು.

ಎಷ್ಟು ಒಳಿತು ನಡೆದರೂ ಅದಕ್ಕೆ ವಿರೋಧಿಗಳಾದವರು ಇಲ್ಲದೆ ಹೋಗುವುದಿಲ್ಲವಷ್ಟೆ? ದೇವದತ್ತನು ಅಂತಹವರನ್ನೆಲ್ಲಾ ಒಂದುಗೂಡಿಸಿ ಅನೇಕ ಪ್ರತಿಘಟನೆಗಳನ್ನೂ, ತಂತ್ರಗಳನ್ನೂ ಮಾಡ ತೊಡಗಿದನು.

**೨೪. ಕಲ್ಕಿಯ ಅವತಾರ**

ಸ್ವೀಕರಿಸಿ ತಿನ್ನುವುದು ಭಿಕ್ಷುಕ ಧರ್ಮವೇ ಹೌದು. ಸಂದೇಹವೇ ಬೇಡ!" ಎಂದನು.



ಈ ಮಾತನ್ನು ಕೇಳಿ ದೇವದತ್ತನು ತಲೆಯಾಡಿಸಿಕೊಂಡು ಹೊರಟುಹೋದನು.

"ಇನ್ನು ಈ ಬುದ್ಧನನ್ನು ಉಳಿಯಗೊಡಬಾರದು. ಇವನ ಅಂತ್ಯವಾಗಲೇ ಬೇಕು. ಇಲ್ಲದಿದ್ದರೆ ವೃದ್ಧಾಪ್ಯವನ್ನೂ, ಆರೋಗ್ಯವನ್ನೂ ಲೆಕ್ಕಿಸದೆ ಇನ್ನೂ ತನ್ನ ಬೋಧನೆ ಸಾಗಿಸಿಕೊಂಡೇ ಇರುತ್ತಾನೆ. ಹೀನಜಾತಿಯಲ್ಲಿರುವವರೆಲ್ಲರನ್ನೂ ಜ್ಞಾನ ಸಂಪನ್ನರಾಗುವಂತೆ ಮಾಡುತ್ತ ಬೌದ್ಧರಾಗಿ ಸೇರಿಸಿಕೊಳ್ಳುತ್ತಲೇ ಇರುತ್ತಾನೆ. ತಗ್ಗಿ ಬಾಗಿ ಅಡಗಿಕೊಂಡಿರಬೇಕಾದ ದಳಿತವರ್ಗದವರಿಗೆ ತಿಳುವಳಿಕೆ ಹೆಚ್ಚಾಗಿಬಿಟ್ಟರೆ ಅಗ್ರವರ್ಣೀಯರನ್ನು ಕೇಳುವವರಿಲ್ಲದಂತಾಗುತ್ತದೆ. ಚಾಕರಿ ಮಾಡುವವರೇ ಇಲ್ಲದಾಗುವರು. ಎಲ್ಲರೂ ಗರ್ವಿಷ್ಠರಾಗುವರು. ಹಾಗಾಗದಿರಬೇಕಾದರೆ ಬುದ್ಧನನ್ನು ಅಂತ್ಯಗೊಳಿಸಬೇಕು" ಎಂದುಕೊಳ್ಳುತ್ತಾ ದೇವದತ್ತನು, ಜೀವಕನ ಬಳಿಗೆ ಹೋದನು.

ಜೀವಕನು ಹೀನಕುಲಕ್ಕೆ ಸೇರಿದ ಬುದ್ಧನ ಶಿಷ್ಯ. ಬೌದ್ಧಧರ್ಮದ ಮೇಲೆ ಅಪಾರ ವಿಶ್ವಾಸವಿಟ್ಟು ಬುದ್ಧನನ್ನು ದೇವರಂತೆ ಭಾವಿಸುತ್ತಿದ್ದನು.

ಅಂಥವನನ್ನು ದೇವದತ್ತನು ತನ್ನ ವಾಕ್ಚಾತುರ್ಯದಿಂದ ಬಗ್ಗಿಸಿ ತನ್ನ ಸಹಾಯಕ್ಕೆ ತಿರುಗಿಸಿಕೊಂಡನು.

"ಸ್ವಲ್ಪ ಆಳವಾಗಿ ಆಲೋಚಿಸಿ ನೋಡಿದರೆ ಬುದ್ಧನು ಹೇಳುವುದೆಲ್ಲವೂ ಶುದ್ಧವಾಗಿ ಸುಳ್ಳು. ಕೆಲಸಕ್ಕೆ ಬಾರದ ಮಾತುಗಳು. ನಿಮ್ಮ ವರ್ಗವನ್ನು ತನ್ನ ಬಲೆಯಲ್ಲಿ ಹಾಕಿಕೊಳ್ಳಲು ಎಲ್ಲರೂ ಸಮಾನರೇ ಎಂದು ಹಲ್ಲುಬಿಕೊಂಡೇ ಇರುತ್ತಾನೆ. ಪ್ರಪಂಚವು ಸಮಾನವಾಗಿಲ್ಲವೇ ಇಲ್ಲ. ಎತ್ತರ ತಗ್ಗುಗಳಿಂದಲೇ ಕೂಡಿದೆ. ಬುದ್ಧನಿಗಾದರೂ ನಿಮ್ಮಗಳ ಹಾಗೇ ಬದುಕಿರಲು ಸಾಧ್ಯವೆ? ನೀವು ತಿನ್ನುವುದನ್ನೆಲ್ಲ ಅವನು ತಿನ್ನುತ್ತಾನೆಯೆ?" ಎಂದು ಮುಂತಾಗಿ ಹೇಳಿ ಜೀವಕನ ಮನಸ್ಸಿನಲ್ಲಿ ವಿಷಬೀಜ ಬಿತ್ತಿದನು ದೇವದತ್ತ. ಬೇಕಾದರೆ ಬುದ್ಧನನ್ನು ಭಿಕ್ಷೆಗೆ ಆಹ್ವಾನಿಸಿ ನೋಡೆಂತಲೂ ಹೇಳಿದನು.

ಜೀವಕನು ಬುದ್ಧನ ಬಳಿಗೆ ಹೋಗಿ ತನ್ನ ಮನೆಗೆ ಭಿಕ್ಷೆಗೆ ಬಂದು ತಾನು ಮಾಡುವ ಆತಿಥ್ಯವನ್ನು ಸ್ವೀಕರಿಸಬೇಕೆಂದು ಕೇಳಿಕೊಂಡನು. ಕೂಡಲೇ ಬುದ್ಧನು ಜೀವಕನ ಹಿಂದೆಯೇ ಹೊರಟನು. ಇದನ್ನೆಲ್ಲಾ ದೇವದತ್ತನು ರಹಸ್ಯವಾಗಿ ನೋಡಿಕೊಂಡೇ ಇದ್ದನು.

ಜೀವಕನು ಹೀಗಾಗುವುದೆಂದು, ತಾನು ಕರೆದ ಕೂಡಲೇ ಬುದ್ಧನು ಹೊರಟು ಬರುವನೆಂದು ಅಂದುಕೊಂಡಿರಲಿಲ್ಲ. ಅಂತಲೇ ಅವನು ಮನೆಗೆ ಬಂದ ಬುದ್ಧನಿಗೆ ಏನು ಕವಳ ನೀಡುವುದೆಂದು ಹೊಯ್ದಾಡಿಕೊಂಡಿರುವಾಗ ಬುದ್ಧನು, "ಅಪ್ಪಾ, ಜೀವಕಾ! ಪ್ರತ್ಯೇಕವಾಗಿ ಏನಾಗಿ ಏನೂ ತಯಾರಿ



ಸಿಲ್ಲವೆಂದು ಸಂದೇಹಪಡಬೇಡ. ವಿಶೇಷವಾದು ದೇನೂ ನನಗೆ ಬೇಡಪ್ಪ. ನೀನು ತಿನ್ನುವಂತಹು ದನ್ನೇ ನನಗಿಷ್ಟು ಕೊಟ್ಟುಬಿಡು. ನಿನ್ನ ಭಿಕ್ಷೆಯನ್ನೇ ನಂಬಿಕೊಂಡು ಬಂದಿದ್ದೇನೆ" ಎಂದನು.

ಜೀವಕನು ಬುದ್ಧನಿಗೆ ನಡುಗುವ ಕೈಗಳಿಂದ ಕವಳವನ್ನು ನೀಡಿದನು. ಬುದ್ಧನು ಅದನ್ನು ತೃಪ್ತಿಯಾಗಿ ತಿಂದನು.

ಆಗಲೇ ಬುದ್ಧನ ಆರೋಗ್ಯವು ಸರಿಯಾಗಿರ ಲಿಲ್ಲ. ವೃದ್ಧಾಪ್ಯದಿಂದಾಗಿ ಜೀರ್ಣಶಕ್ತಿ ತಗ್ಗಿ ಹೋಗಿದ್ದಿತು. ಜೀವಕನು ನೀಡಿದ ಭಿಕ್ಷೆ ಮಾಂಸ ದಿಂದ ತಯಾರಾದುದು. ಅದು ಕೂಡಾ ಅಷ್ಟು ಒಳ್ಳೆಯ ಮಾಂಸವಾಗಿರಲಿಲ್ಲ.

ಆದರೆ ಬುದ್ಧನು ಸಂತೃಪ್ತಿಯಿಂದ ಜೀವಕನನ್ನು ಆಶೀರ್ವದಿಸಿ ಹೊರಟುಹೋದನು. ಜೀವಕನಲ್ಲಿ ಪಾಪಭೀತಿ ತಲೆ ಎತ್ತಿತು. ಅವನ ಮುಖವು ದೊಡ್ಡ ಅಪರಾಧಿಯಂತೆ ಮುದುಡತೊಡಗಿತು. ರಹಸ್ಯದ ಲ್ಲಿದ್ದು ನೋಡುತ್ತಿದ್ದ ದೇವದತ್ತನು, ಬುದ್ಧನ ಸತ್ಯ ಸಂಧತೆಗೆ ಬೆರಗಾಗುತ್ತ, ತಾನು ತಲೆಹಾಕಿದ ದ್ರೋಹ ವನ್ನು ನೆನೆದು ವೇದನೆಗೊಳಗಾಗ ತೊಡಗಿದನು.

ಶರೀರಧರ್ಮಕ್ಕೆ ಸರಿಹೊಂದದ ಆಹಾರ ಸೇವನೆ ಯಿಂದ ಬುದ್ಧನು ಅಸ್ವಸ್ಥನಾದನು. ರೋಗಗ್ರಸ್ತ ನಾಗಿ ದಿನದಿಂದ ದಿನಕ್ಕೆ ಕ್ಷೀಣಿಸುತ್ತಾ, ಅವಸಾನ ದಶೆಗೆ ಬಂದನು ಬುದ್ಧ.

ಬುದ್ಧನು ಮಲಗಿಕೊಂಡಿರುವ ವೇದಿಕೆಯ ಸುತ್ತಲೂ, ಪ್ರಧಾನ ಶಿಷ್ಯರು ತಲೆಬಾಗಿಕೊಂಡು ಮೌನವಾಗಿ ನಿಂತಿದ್ದರು. ಎಲ್ಲರೂ ವಿಚಾರದಲ್ಲಿ ಮುಳುಗಿದರು. ವಾತಾವರಣವು ಸ್ತಂಭಿಸಿಹೋದಂತೆ ನಿಃಶಬ್ದವಾಗಿತ್ತು. ಆಗ ಅಲ್ಲಿಗೆ ಅಪರಾಧಿಗಳಂತೆ ಜೀವಕನೂ, ದೇವದತ್ತನೂ ಪಶ್ಚಾತ್ತಾಪದಿಂದ ಕುದಿಯುತ್ತಾ ಬಂದು ಬುದ್ಧನ ಪಾದಗಳ ಹತ್ತಿರ ನಮಸ್ಕಾರ ಮಾಡುತ್ತ ಬಾಗಿ ಬೇಡಿಕೊಳ್ಳುವ ಹಾಗೆ ಸುಮ್ಮನೆ ಪಿಳಿಪಿಳಿಸಿ ನೋಡುತ್ತಿದ್ದರು.

ಬುದ್ಧನು ಅವರ ಬರುವಿಕೆಯನ್ನು ತಿಳಿದು, ಕಣ್ಣುಗಳನ್ನು ತೆರೆದು ಪ್ರೀತಿಯಾಗಿ ಅವರನ್ನು ನೋಡಿ, ಇಬ್ಬರನ್ನೂ ಸಮೀಪ ಬರುವಂತೆ ಕರೆದು, "ನೀವು ಚಿಂತಿಸಬೇಕಾದ ಅಗತ್ಯವೇ ಇಲ್ಲ. ಮನುಷ್ಯ ನಾದವನಿಗೆ ಯಾವುದೋ ಒಂದು ವಿಧವಾಗಿ ಮರಣವು ತಪ್ಪುವಂಥಾದ್ದಲ್ಲವಷ್ಟೆ? ನಾನು ನಿರ್ವಾಣವನ್ನು ಸೇರಿಕೊಳ್ಳಲು ನೀವು ಸಹಾಯಕ ರಾದಿರಿ. ನಿಮಗೆ ತುಂಬಾ ಕೃತಜ್ಞತೆಗಳು. ನಿರ್ವಾಣ ವೆಂಬುದು ಚರ್ಮ ಚಕ್ಷುಸ್ಸಿಗೆ ಕಾಣದಂತಹ ಬೆಳಕಾಗಿದೆ. ಜ್ಯೋತಿ ಆರಿಹೋಗುವಾಗ, ಬೆಳಕು ಎಲ್ಲಿಗೆ ಹೋಗುವುದೋ ಆ ನಿರ್ವಾಣ ಪಥಕ್ಕೆ ಹೊರಟಿದ್ದೇನೆ. ಇದರಲ್ಲಿ ನಿಮ್ಮದೇನೂ ತಪ್ಪಿಲ್ಲ ವಪ್ಪಾ, ಜೀವಕಾ" ಎಂದನು.

ದೇವದತ್ತನಲ್ಲಿ ದೊಡ್ಡ ಪರಿವರ್ತನೆ ಉಂಟಾಗಿ ಬಿಟ್ಟಿತು. ಬುದ್ಧನ ಪಾದಗಳನ್ನು ಮುಟ್ಟಲು



ದೇವದತ್ತನು ಬುದ್ಧನನ್ನು ನೇರಾಗಿ ಸಂಧಿಸಿ, "ನೀನು ಪುಣ್ಯಪದ್ಧತಿಗಳಾದ ಯಜ್ಞ ಯಾಗಾದಿಗಳನ್ನು ನಿಲ್ಲಿಸಿ, ಅಹಿಂಸೆಯನ್ನು ಬೋಧಿಸುವುದೇನೋ ಚೆನ್ನಾಗಿದೆ. ಆದರೆ ಬೌದ್ಧಭಿಕ್ಷುಗಳು ಮಾಂಸಾಹಾರವನ್ನು ಮುಟ್ಟಬಾರದೆಂದೂ, ಬೌದ್ಧ ಧರ್ಮವನ್ನು ಸ್ವೀಕರಿಸಿ ನಿನ್ನ ಶಿಷ್ಯರಾದವರು ಆಹಾರ ನಿಯಮವನ್ನು ಪಾಲಿಸಬೇಕೆಂದೂ ಕಟ್ಟುಪಾಡು ಮಾಡಲು ನಿನ್ನಿಂದಾದೀತೆ? ಅದು ನಿನ್ನ ಕೈ ಮೀರಿದ ವಿಷಯಗಳೆಂದು ನಿನಗೇಕೆ ಗೊತ್ತಾಗುವುದಿಲ್ಲ?" ಎಂದು ಕೇಳಿದನು.

ಬುದ್ಧನು ಅವನನ್ನು ನೋಡಿ, "ಅಪ್ಪಾ ದೇವದತ್ತಾ! ಬೌದ್ಧಧರ್ಮಾವಲಂಬಿಗಳಾಗುವವರು ಅಹಿಂಸೆಯನ್ನು ಅವಲಂಬಿಸಬೇಕೆಂದು ಢಾಣಾ ಡಂಗುರವಾಗಿ ಹೇಳುತ್ತಾ ಇದ್ದೇನೆ. ಬಡತನದಿಂದ ಅನೇಕಮಂದಿ ಏನು ಸಿಕ್ಕಿದರೆ ಅದನ್ನು ತಿಂದು, ಮಾಂಸಾಹಾರಿಗಳಾಗಿಯೇ ಇರಬೇಕಾಗುತ್ತದೆ. ಧನಿಕರಾಗಿರುವವರಿಗೆ ಲಭಿಸುವಂತಹ ಒಳ್ಳೆಯ ಬಲವರ್ಧಕವಾದ ಶಾಕಾಹಾರಗಳು ಬಡಜನತೆಗೆ ಎಟುಕುವಂತಿರಲಾರವಷ್ಟೆ? ಮಾನವ ಸೇವಾ ಧರ್ಮವನ್ನೇ ನಿರ್ವಹಿಸಿಕೊಂಡಿರುವುದೇ ಕರ್ತವ್ಯವಾಗಿರುವ ಬೌದ್ಧಭಿಕ್ಷುಗಳು ತಮ್ಮ ಪ್ರಾಣರಕ್ಷಣೆಗೆ ಮಾತ್ರವೇ ಆಹಾರ ತೆಗೆದುಕೊಳ್ಳಬೇಕಾಗುತ್ತದೆ. ಅವರು ಆಹಾರವನ್ನು ಭಿಕ್ಷೆ ಬೇಡುತ್ತಾರೆ. ಅವರಿಗೆ ಎಲ್ಲಾ ಬಗೆಯ ಜನರೂ ಭಿಕ್ಷೆ ನೀಡುತ್ತಾರೆ. ಅವರಿಗೆ ಕವಳ ಹಾಕುವವರು ಮಾಂಸಾಹಾರಿಗಳಾಗಿರಬಾರದೆಂದೂ, ಶಾಕಾಹಾರಿಗಳು ಮಾತ್ರವೇ ಆಗಿರಬೇಕೆಂದೂ ಶಾಸನ ಮಾಡುವ ಅಧಿಕಾರವು ನನಗಿಲ್ಲ. ಮಾಂಸಾಹಾರಿಗಳೆಂದೂ, ಶಾಕಾಹಾರಿಗಳೆಂದೂ ಭೇದಭಾವವಿಟ್ಟುಕೊಂಡು ಭಿಕ್ಷೆಗೆ ಹೋಗುವುದೆಂದರೆ, ಕುಲ ಮತ ಭೇದಗಳಿಗೆ ಅತೀತವಾದ ಸರ್ವ ಸಮಾನತೆಯನ್ನು ಕೋರುವ ಬೌದ್ಧ ಧರ್ಮಕ್ಕೆ ವಿರುದ್ಧವಾದುದು. ಬೌದ್ಧಭಿಕ್ಷುಗಳು ಭೇದಭಾವನೆಗೆ ಎಡೆಕೊಡದಂತೆ ಪ್ರವರ್ತಿಸಬೇಕೆಂತಲೇ ನಾನು ಹೇಳುತ್ತೇನೆ. ಭಿಕ್ಷೆಗೆ ಹೋಗುವವರು ಯಾರೇನು ಕೊಟ್ಟರೂ ಸ್ವೀಕರಿಸಲೇಬೇಕು. ಎಲ್ಲರೂ ಅಹಿಂಸಾಧರ್ಮವನ್ನು ಹಿಡಿಯುತ್ತಾ ಬಂದಹಾಗೆ ಮಾಂಸಾಹಾರವು ತನ್ನಂತೆ ಕಡಮೆಯಾಗುತ್ತಾ ಬಂದು ನಿನ್ನ ಪ್ರಶ್ನೆಗೆ ಅವಕಾಶವೇ ಇಲ್ಲದಂತಾಗುತ್ತದೆಂದು ತಿಳಿಯಪ್ಪ" ಎಂದನು.

"ನೀನು ಹೇಳುವ ಇಷ್ಟುದ್ದವಾದ ಮಾತಿನ ಅರ್ಥ ಭಿಕ್ಷೆಗೆ ಹೋಗುವವನು ಯಾರು ಏನು ಕೊಟ್ಟರೂ ತೆಗೆದುಕೊಳ್ಳಬೇಕು ಎಂದುಬು ತಾನೇ?" ಎಂದು ಕೇಳಿದನು ದೇವದತ್ತ.

ಬುದ್ಧನು ಮುಗುಳ್ನಗೆಯನ್ನು ಬೀರಿ, "ಯಾರು ಎಂತಹ ಆಹಾರದಿಂದ ತಮ್ಮ ಜೀವನವನ್ನು ನಡೆಸುವವರೋ ಅದನ್ನೇ ಕವಳವಾಗಿ ಹಾಕಿದರೆ ಕುಲ ವರ್ಗ ಭೇದವಿಲ್ಲದ ಭಿಕ್ಷು ಅದನ್ನೇ

